ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ ನಂ. ೬

ಗುಬ್ಬಿ ಮಲ್ಲಣ್ಣ ಕವಿ

ವಿರಚಿತ

# ಗಣಭಾಷಿತ ರತ್ನಮಾಲೆ



ಪ್ರಕಾಶಕರು :

ಶ್ರೀ ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು ಮುರುಘಾಮಠ,
ಸ್ಥಾಪಕರು ಮತ್ತು ಸಂಚಾಲಕರು

ಶ್ರೀ ಮ. ನಿ. ಜಗದ್ಗುರು ಮುರುಘರಾಜೇಂದ್ರ ಪ್ರಸಾದನಿಲಯ
ಮುರುಘಾಮಠ ಹಾವೇರಿಪೇಟೆ ಧಾರವಾಡ

ಸಂಪಾದಕರು :

ಶ್ರೀ ಮ. ನಿ. ಪ್ರ ಪ್ರಭುಸ್ವಾಮಿಗಳು ವಿರಕ್ತಮಠ ದಾವಣಗೇರಿ



೧೯೪೮

ಬೆಲೆ ೪-೦-೦

೧೮೬೯ ಸರ್ವಜಿತು ಸಂವತ್ಸರ ಮಾಘ ಶು.

ಪ್ರಕಾಶಕರು :
ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಮೃತ್ಯುಂಜಯ ಸ್ವಾಮಿಗಳು
ಶ್ರೀ ಮುರುಘಾಮಠ ಹಾವೇರಿಪೇಟ ಧಾರವಾಡ.



ಮುದ್ರಕರು :
ಶಿ. ಬ. ಹರಿಹರ
ತೋಂಟದಾರ್ಯ ಮುದ್ರಣಾಲಯ,
ಧಾರವಾಡ

## ಅರ್ಪಣ ಪತ್ರಿಕೆ



ಬಸವಾದಿ ಪ್ರಮಥರು
ನಡೆದು ತೋರಿಸಿದ ಷಟ್ಸ್ಥಲ ಮಾರ್ಗದಲ್ಲಿ ನಡೆದು
ನಡೆದಂತೆ ನುಡಿದು
ಶಿವಯೋಗದ ಘನತೆಯನ್ನು ಬೀರಿದ

ಮಹಾ ತಪಸ್ವಿಗಳೂ, ವೈರಾಗ್ಯ ಮೂರ್ತಿಗಳೂ, ಕಾರಣ
ಪುರುಷರೂ ಆದ

ಅಥಣಿ ಗಚ್ಚಿನಮಠದ
ಲಿಂಗೈಕ್ಯ ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿ
ಮುರುಘೇಂದ್ರ ಮಹಾ ಶಿವಯೋಗಿಗಳ
ಸ್ಮಾರಕವಾಗಿ
ಅವರ ಅಡಿದಾವರೆಗಳಿಗೆ ಈ ಗ್ರಂಥ ಪುಷ್ಪವನ್ನು
ಭಕ್ತಿಯ ಕಾಣಿಕೆಯಾಗಿ ಅರ್ಪಿಸಲಾಗಿದೆ.

# ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ

ಸಂಚಾಲಕರು :

**ಶ್ರೀ ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು**

ಶ್ರೀ ಮುರುಘಾಮಠ ಹಾವೇರಿಪೇಟೆ ಧಾರವಾಡ.

ಸಿದ್ಧವಾಗಿರುವ ಪ್ರಕಟನೆಗಳು

೧. ಶ್ರೀ ಬಾಲಲೀಲಾ ಮಹಾಂತ ಶಿವಯೋಗಿ ವಿರಚಿತ ಕೈವಲ್ಯ ದರ್ಪಣ

ಸಂಪಾದಕರು :

**ಶಿ. ಶಿ. ಬಸವನಾಳ, ಎಂ. ಎ.**

೨. ಷಣ್ಮುಖಸ್ವಾಮಿ ಕೃತ ಅಖಂಡೇಶ್ವರ ವಚನ

ಸಂಪಾದಕರು :

**ಶ್ರೀ ಪ್ರಭುಸ್ವಾಮಿಗಳು ( ಶ್ರೀ ಶಿದ್ಧವೀರ ದೇವರು )**

ವಿರಕ್ತಮಠ ದಾವಣಗೇರಿ

೩. ಶ್ರೀ ಘನಮಠ ಶಿವಯೋಗಿ ವಿರಚಿತ ಭಕ್ತಿಸುಧಾಸಾರ

ಸಂಪಾದಕರು :

**ಸಂ. ಶಿ. ಭೂಸನೂರಮಠ, ಎಂ. ಎ.**

೪. ಮೈಲಾರ ಬಸವಲಿಂಗ ಶರಣರ ಕೃತಿಗಳು
   - ೧. ಷಟ್ಸ್ಥಲ ಸಿದ್ಧಾಂತ
   - ೨. ಗುರುಕರುಣ ತ್ರಿವಿಧಿ
   - ೩. ಶಿವಾನುಭವ ದರ್ಪಣ
   - ೪. ಲಿಂಗಪೂಜಾ ವಿಧಾನ

ಸಂಪಾದಕರು :

**ಶಿ. ಶಿ. ಬಸವನಾಳ,** ಎಂ. ಎ.

೫. ಲಿಂಗೈಕ್ಯ ಚೆನ್ನಕವಿ ದ್ಯಾಂಪೂರ ಕೃತ

**ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳ ಪುರಾಣ**

೬. ಶ್ರೀ ಗುಬ್ಬಿ ಮಲ್ಲಣ್ಣ ಕವಿ ವಿರಚಿತ

**ಗಣಭಾಷಿತ ರತ್ನಮಾಲೆ**

# ಪ್ರಕಟನೆಗಳಿಗೆ ಸಿದ್ಧವಾಗುತ್ತಿರುವ ಗ್ರಂಥಗಳು



೧. ಚಿಕ್ಕನಂಜೇಶ ವಿರಚಿತ ರಾಘವಾಂಕ ಚರಿತೆ

ಸಂಪಾದಕರು :

**ಸ. ಸ. ಮಾಳವಾಡ,** ಎಂ.. ಎ.

೨. ಶ್ರೀ ಮದಘಣಿ ಮುರುಘೇಂದ್ರ ಶಿವಯೋಗಿಗಳ ಚರಿತ್ರೆ

ಲೇಖಕರು :

**ಶಿ. ಶಿ. ಬಸವನಾಳ,** ಎಂ. ಎ.

೩. ಮಗ್ಗೆಯ ಮಾಯಿದೇವ ವಿರಚಿತ ಶತಕತ್ರಯ

ಸಂಪಾದಕರು :

**ಸಂ. ಶಿ. ಭೂಸನೂರಮಠ,** ಎಂ. ಎ.

೪. ಶಿದ್ಧಾದೃಶ್ಯಕವಿ ವಿರಚಿತ

**ಪ್ರೌಢ ದೇವರಾಯನ ಕಾವ್ಯ**

೫. ಸಿದ್ಧನಂಜೇಶ ವಿರಚಿತ

**ಗುರುರಾಜ ಚರಿತ್ರ**

ಸಂಪಾದಕರು :

**ಸಂ. ಶಿ. ಭೂಸನೂರ ಮಠ,** ಎಂ. ಎ.

೬. ಶ್ರೀ ಕಲ್ಲುಮಠದ ಪ್ರಭುದೇವ ವಿರಚಿತ

**ಲಿಂಗಲೀಲಾವಿಲಾಸ ಚರಿತ್ರ**

ಸಂಪಾದಕರು :

ಶ್ರೀ **ಪ್ರಭುಸ್ವಾಮಿಗಳು** ವಿರಕ್ತಮಠ ದಾವಣಗೆರೆ

|| ಶ್ರೀ ಶಿವಯೋಗೀಶ್ವರಾಯ ನಮಃ ||

# ಮುನ್ನುಡಿ



ವೀರಶೈವ ಸಾಹಿತ್ಯ ಭಂಡಾರವು ಲೆಕ್ಕವಿಲ್ಲದಷ್ಟು ಅಪಾರವಾಗಿದೆ. ಪೂರ್ವದಲ್ಲಿ ಇಂಥ ಸಾಹಿತ್ಯವನ್ನು ನಮ್ಮವರು ಪ್ರಾಣಕ್ಕಿಂತಲೂ ಮಿಗಿಲಾಗಿ ಕಾಪಾಡಿಕೊಂಡು ಬಂದರು. ಕಾಲ ಕ್ರಮೇಣ ನಮ್ಮ ಸಾಹಿತ್ಯವು ನಾಶವಾಗುತ್ತ ನಡೆದಿದೆ. ಇನ್ನೂ ವಿಷ್ಟೋ ಗ್ರಂಥಗಳು ಪ್ರಕಾಶಕ್ಕೆ ಬಂದಿರುವದಿಲ್ಲ. ಹಿಂದಿನ ಸಾಹಿತ್ಯವನ್ನು ವಿದ್ವಜ್ಜನರಿಂದ ಶುದ್ಧವಾಗಿ ಪರಿಶೋಧಿಸಿ ಗ್ರಂಥಕ್ಕೆ ಬೇಕಾದ, ಪ್ರಸ್ತಾವನೆ, ಇತಿಹಾಸ ವಗೈರೆ ಬರೆಯಿಸಿ ಶಕ್ಯವಿದ್ದಷ್ಟು ಪ್ರಕಾಶ ಗೊಳಿಸುವ ಉದ್ದೇಶದಿಂದ ಲಿಂಗೈಕ್ಯ ಶ್ರೀ ಮುಪ್ಪಿನ ಷಡಕ್ಷರಿ ಮುರುಘೇಂದ್ರ ಮಹಾ ಶಿವಯೋಗಿಗಳವರ ಸ್ಮರಣಾರ್ಥವಾಗಿ ಪ್ರಾರಂಭಿಸಲ್ಪಟ್ಟ ಲಿಂಗೈಕ್ಯ ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯು ೪--೫ ವರ್ಷಗಳ ಅವಧಿಯಲ್ಲಿ ೨೫೦ ಪುಟಕ್ಕೆ ಕಡಮೆಯಿಲ್ಲದ ೫ ಗ್ರಂಥಗಳನ್ನು ಪ್ರಕಾಶ ಗೊಳಿಸಿರುವದು. ಸದ್ಯಃ ಪ್ರಕಟವಾಗಿರುವ ಗುಬ್ಬಿ ಮಲ್ಲಣ್ಣ ಕವಿಗಳ " ಗಣಭಾಷಿತ ರತ್ನಮಾಲೆ" ಯು ಆರನೇಯದಾಗಿದೆ. ೪--೫ ವರ್ಷಗಳ ಹಿಂದೆ ಸಂಚಾರ ಮಾಡುವ ಸಮಯದಲ್ಲಿ ಕೈಬರೆಹದ ಗಣಭಾಷಿತ ರತ್ನಮಾಲೆಯು ದೊರೆಯಿತು. ನಂತರ ೧೯೦೯ ರಲ್ಲಿ ಬೆಂಗಳೂರಲ್ಲಿ ಅಚ್ಚಾದ ಪ್ರತಿಯು ಸಿಕ್ಕಿತು. ಕೈಬರೆಹದ ಪ್ರತಿ ಮತ್ತು ಅಚ್ಚಾದ ಪ್ರತಿ ನೋಡಲಾಗಿ ಇನ್ನು ಕೆಲವು ಪ್ರತಿಗಳನ್ನು ಕೂಡಿಸಿ ಕವಿಯ ಕಾಲ, ಗುಬ್ಬಿಯ ಇತಿಹಾಸ ವಗೈರೆ ಶೇಖರಿಸಿ ಶುದ್ಧವಾಗಿಯೂ, ಅಂದವಾಗಿಯೂ ಅಚ್ಚುಮಾಡಿಸಬೇಕೆಂಬ ಅಪೇಕ್ಷೆಯುಂಟಾಯಿತು. ಈ ಕಾರ್ಯವನ್ನು ಸಾಹಿತ್ಯಾಭಿಮಾನಿಗಳಾದ ದಾವಣಗೇರೆ ವಿರಕ್ತಮಠದ ಶ್ರೀ ಪ್ರಭುಸ್ವಾಮಿಗಳು ಬಹು ಸಂತೋಷದಿಂದ ಒಪ್ಪಿ ಅಪೇಕ್ಷಿಸಿದ ಎಲ್ಲ ಕಾರ್ಯವನ್ನು ಬಹು ಶ್ರಮವಹಿಸಿ ಮಾಡಿಕೊಟ್ಟದ್ದಲ್ಲದೆ ಸ್ವತಃ ಗುಬ್ಬಿಗೆ ಹೋಗಿ ಗ್ರಂಥಕ್ಕೆ ಬೇಕಾದ ಎಲ್ಲ ಇತಿಹಾಸವನ್ನು ಕೆಲವು ಚಿತ್ರಗಳನ್ನು ಕಷ್ಟಪಟ್ಟು ತೆಗೆದುಕೊಂಡು ಬಂದರು.

ನಂತರ ೪೫೦ ಪುಟಕ್ಕೆ ಮೇಲ್ಪಟ್ಟ ಅಚ್ಚಿನ ಕಾರ್ಯವನ್ನು ತೋಂಟದಾರ್ಯ ಮುದ್ರಣಾಲಯದ ಮ್ಯಾನೇಜರರಾದ ಶ್ರೀಮಾನ್ ಶಿವಲಿಂಗಪ್ಪ ಹರಿಹರ ಮಾಸ್ತರರು, ಮತ್ತು ಎಂ. ಜಿ. ವಿರೂಪಾಕ್ಷಪ್ಪನವರು, ಉಭಯತರೂ ಇಂಥ ಕಠಿಣ ಕಾಲದಲ್ಲಿಯೂ ಸಹ ಕಾಗದವನ್ನು ಪೂರೈಸಿ ಕೊಟ್ಟಿದ್ದಲ್ಲದೆ ಶುದ್ಧವಾಗಿಯೂ, ಅಂದವಾಗಿಯೂ ಮುದ್ರಣ ಕಾರ್ಯವನ್ನು ಬಹು ಶ್ರದ್ಧೆಯಿಂದ ಪೂರೈಸಿ ಕೊಟ್ಟರು. ಈ ಕಾರ್ಯಕ್ಕೆ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘಾರಾಜೇಂದ್ರ ಮಹಾಸ್ವಾಮಿಗಳು ನಮ್ಮ ಪ್ರಾರ್ಥನೆಯಂತೆ ತಮ್ಮ ಸಂಸ್ಥಾನದ ಶಾರದಾಭಾಂಡಾರದಲ್ಲಿರುವ ಗಣಭಾಷಿತ ರತ್ನಮಾಲೆಯ, ತಾಡಓಲೆಯ, ಪ್ರತಿಗಳನ್ನು ದಯಪಾಲಿಸಿದುದಕ್ಕಾಗಿ "ಶ್ರೀಮಹಾ" ಸನ್ನಿಧಿಯಲ್ಲಿ ನಮ್ಮ ಕೃತಜ್ಞತೆಯನ್ನು ಅರ್ಪಿಸುತ್ತೇವೆ.

ಈ "ಗಣಭಾಷಿತ ರತ್ನಮಾಲೆ" ಯ ಸಂಶೋಧನ ಕಾರ್ಯದಲ್ಲಿಯೂ, ಬರೆಯುವ ಕಾರ್ಯದಲ್ಲಿಯೂ ನೆರವಾದ ಹುಬ್ಬಳ್ಳಿಯ ಹೊಸಮಠದ ಶ್ರೀಗಳನ್ನೂ, ಹಿರೇಕೇರೂರ ಶ್ರೀಗಳನ್ನು ನೆನೆಯದಿರಲಾರೆವು.

ಶ್ರೀ ಮುರುಘಾಮಠ
೧೬—೨—೪೮

ಪ್ರಕಾಶಕರು

೧೮೬೯ ಸರ್ವಜಿತು ಸಂವತ್ಸರ ಮಾಘ ಶು. ೬ ಸೋಮವಾರ



# ಸ್ಥಲ-ಪುಟಗಳ ವಿವರ



**ಲಿಂಗಸ್ಥಲಗಳು**

## ನಿರಂಗಲಿಂಗಸ್ಥಲಗಳು

# ಗಣಭಾಷಿತ ರತ್ನಮಾಲೆಯಲ್ಲಿ ಕವಿ ಬಳಸಿ ಕೊಂಡಿರುವ ಸಂಸ್ಕೃತ ಪ್ರಮಾಣ ಗ್ರಂಥಗಳು



೧. ಶಿವರಹಸ್ಯ
೨. ಶಿವಧರ್ಮ
೩. ವಿಷ್ಣುಪುರಾಣ
೪. ಲಿಂಗಪುರಾಣ
೫. ವಾತುಲತಂತ್ರ
೬. ಸ್ಕಾಂದಪುರಾಣ
೭. ಸೂತಸಂಹಿತೆ
೮. ಆದಿತ್ಯಪುರಾಣ
೯. ವಾಶಿಷ್ಠಪುರಾಣ
೧೦. ಸಿದ್ಧಾಂತ ಶೇಖರ
೧೧. ಬ್ರಹ್ಮಗೀತೆ
೧೨. ಕೂರ್ಮಪುರಾಣ
೧೩. ಶಿವಧರ್ಮೋತ್ತರ
೧೪. ಸೌರಸಂಹಿತೆ
೧೫. ವೀರಭದ್ರಪುರಾಣ
೧೬. ಋಗ್ವೇದ
೧೭. ಯಜುರ್ವೇದ
೧೮. ಸಾಮವೇದ
೧೯. ಅಥರ್ವಣವೇದ
೨೦. ಶ್ರೀ ರುದ್ರ
೨೧. ಶ್ರೀರುದ್ರಭಾಷ್ಯ
೨೨. ವೀರಾಗಮ
೨೩. ತತ್ವಸಾರ
೨೪. ಮಾನವಪುರಾಣ
೨೫. ಪರಾಶರಪುರಾಣ
೨೬. ಯಜ್ಞವೈಭವಖಂಡ
೨೭. ಶಾಂಭವಪುರಾಣ
೨೮. ಭೀಮಾಗಮ
೨೯. ಸೋಮಶಂಭು
೩೦. ಮತ್ಸ್ಯಪುರಾಣ
೩೧. ಶೈವ ಪುರಾಣ
೩೨. ದೇವೀಕಾಲೋತ್ತರ
೩೩. ಕಾಲಿಕಾಖಂಡ
೩೪. ಪದ್ಮನಾಭ ಪುರಾಣ
೩೫. ವೀರಭದ್ರೀಯ
೩೬. ಶೈವರತ್ನಾಕರ
೩೭. ಬ್ರಹ್ಮಾಂಡ ಪುರಾಣ
೩೮. ಭಾಗವತ
೩೯. ಗಾರುಡ ಪುರಾಣ
೪೦. ಕಾಮಿಕಾಗಮ
೪೧. ಜ್ಞಾನವೈಭವಖಂಡ
೪೨. ಪುರುಷ ಸೂಕ್ತ
೪೩. ಮಹಿಮ್ನ
೪೪. ಸೌರಪುರಾಣ
೪೫. ಶಂಕರಸಂಹಿತೆ
೪೬. ಜಾಬಾಲಶಾಖಾ

೪೭. ವಾಯುವೀಯ ಸಂಹಿತೆ

೪೮. ಉಪನಿಷತ್ತುಗಳು

೪೯. ಈಶ್ವರಗೀತೆ

೫೦. ಭಾಸ್ಕರ ಸಂಹಿತೆ

೫೧. ಮಹಾಭಾರತ

೫೨. ಗಾಯತ್ರಿ

೫೩. ವೃದ್ಧಚಾಣಿಕ್ಯ ಧರ್ಮ-ಶಾಸ್ತ್ರ

# ಗಣಭಾಷಿತ ರತ್ನಮಾಲೆಯಲ್ಲಿ ಕವಿ ಬಳಸಿಕೊಂಡಿರುವ ವಚನಗಳು ಅವುಗಳ ಅಂಕಿತಗಳು



| | | |
|---|---|---|
| ೧. | ಬಸವೇಶ್ವರ ವಚನ | ಕೂಡಲಸಂಗಮದೇವಾ |
| ೨. | ಚೆನ್ನಬಸವೇಶ್ವರವಚನ | ಕೂಡಲಚೆನ್ನಸಂಗಮದೇವಾ |
| ೩. | ಹಾವಿನಹಾಳ ಕಲ್ಲಯ್ಯನ ವಚನ | ಮಹಾಲಿಂಗಕಲ್ಲೇಶ್ವರಾ |
| ೪. | ದೇವರದಾಸಿಮಯ್ಯನ ವಚನ | ರಾಮನಾಥಾ |
| ೫. | ಗಜೇಶಮಸಣಯ್ಯನ ವಚನ | ಗಜೇಶ್ವರಾ |
| ೬. | ಚಂದಿಮರಸನ ವಚನ | ಸಿಮ್ಮಲಿಗೆಯ ಚೆನ್ನರಾಮಾ |
| ೭. | ಮಹಾದೇವಿಯಕ್ಕನ ವಚನ | ಚೆನ್ನಮಲ್ಲಿಕಾರ್ಜುನಾ |
| ೮. | ಚಿಕ್ಕಯ್ಯನ ವಚನ | ಉಳಿಯುಮೇಶ್ವರಾ |
| ೯. | ಒಕ್ಕಲಮುದ್ದಯ್ಯನ ವಚನ | ಕಾಮಭೀಮ ಜೀವನದೊಡೆಯಾ |
| ೧೦. | ಪ್ರಭುದೇವರ ವಚನ | ಗುಹೇಶ್ವರಾ |
| ೧೧. | ಸಿದ್ಧರಾಮೇಶ್ವರ ವಚನ | ಕಪಿಲಸಿದ್ಧಮಲ್ಲಿಕಾರ್ಜುನಾ |
| ೧೨. | ಸಕಳೇಶ ಮಾದರಸನ ವಚನ | ಸಕಳೇಶ್ವರದೇವಾ |
| ೧೩. | ಸೊಡ್ಡಳ ಬಾಚರಸನ ವಚನ | ಸೊಡ್ಡಳಾ |
| ೧೪. | ಗಟ್ಟಿವಾಳಯ್ಯನ ವಚನ | ಚಿಕ್ಕಯ್ಯ ಪ್ರಿಯಸಿದ್ಧಲಿಂಗಾ<br>ಇಲ್ಲ ಇಲ್ಲ |
| ೧೫. | ಉರಿಲಿಂಗಪೆದ್ದಿಗಳವಚನ | ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ |
| ೧೬. | ? | ಎನ್ನಯ್ಯ ಪ್ರಿಯನಿಃಕಲಂಕಮಲ್ಲಿಕಾರ್ಜುನಾ |
| ೧೭. | ಪುರದ ನಾಗಣ್ಣನವಚನ | ಅಮರಗುಂಡ ಮಲ್ಲಿಕಾರ್ಜುನಾ |
| ೧೮. | ಮಡಿವಾಳ ಮಾಚಿದೇವನ ವಚನ | ಕಲಿದೇವರ ದೇವಾ |
| ೧೯. | ಸತ್ಯಕ್ಕನವಚನ | ಶಂಭು ಜಕ್ಕೇಶ್ವರಾ |
| ೨೦. | ಕಿನ್ನರಿ ಬ್ರಹ್ಮಯ್ಯನವಚನ | ಮಹಾಲಿಂಗ ತ್ರಿಪುರಾಂತಕ ದೇವಾ |

| | |
|---|---|
| ೨೧. ಹಡಪದ ಅಪ್ಪಣ್ಣನವಚನ | ಬಸವಪ್ರಿಯ ಕೂಡಲಚೆನ್ನಸಂಗಮ ದೇವಾ |
| ೨೨. ಅಂಬಿಗರ ಚೌಡಯ್ಯನವಚನ | |
| ೨೩. ಅಗ್ಗವಣಿಯ ಹೊನ್ನಯ್ಯನ ವಚನ | ಅಂಬಿಗರ ಚೌಡಯ್ಯ |
| ೨೪. ಮೊಳಿಗೆಯ ಮಾರಯ್ಯನ ವಚನ | ಪುಲಿಗೆರೆಯ ಸೋಮೇಶ್ವರಾ |
| ೨೫. ? | ನಿಃಕಲಂಕ ಮಲ್ಲಿಕಾರ್ಜುನಾ |
| ೨೬. ಮುಕ್ತಾಯಕ್ಕನವಚನ | ನಿಃಕಲಂಕ ಚೆನ್ನಮಲ್ಲಿಕಾರ್ಜುನಾ |
| ೨೭. ಬಹುರೂಪಿ ಚೌಡಯ್ಯನ ವಚನ | ಅಜಗಣ್ಣಾ<br>ರೇಚಣ್ಣಪ್ರಿಯನಾಗಿನಾಥಾ |
| ೨೮. ಅರುವಿನಮಾರಿ ತಂದೆಯ ವಚನ | ಸದಾಶಿವ ಮೂರ್ತಿ ಲಿಂಗಾ |
| ೨೯. ಮೆರಮಿಂಡಿದೇವನವಚನ | ರಾಮೇಶ್ವರಲಿಂಗಾ |
| ೩೦. ? | ಸಿದ್ಧಸೋಮೇಶ್ವರಲಿಂಗಾ |
| ೩೧. ಉರಿಲಿಂಗದೇವನ ವಚನ | ಉರಿಲಿಂಗದೇವಾ |
| ೩೨. ಮುಸಣಯ್ಯಗಳ ಪತ್ನಿಯ ವಚನ | ಮುಸಣಯ್ಯಪ್ರಿಯ ಗಜೇಶ್ವರಾ |
| ೩೩. ಮರುಳ ಶಂಕರದೇವರವಚನ | ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತಮಲ್ಲಿಕಾರ್ಜುನಾ |
| ೩೪. ಅಮುಗಿದೇವನವಚನ | ಸಿದ್ಧಸೋಮನಾಥಲಿಂಗಾ |
| ೩೫. ಸಂಗಯ್ಯನವಚನ<br>ಪಾಲ್ಕುರಿಕೆ ಸೋಮನಶಿಷ್ಯ | ಸಂಗಯ್ಯಪ್ರಿಯ ಬಂಕೇಶ್ವರಾ |
| ೩೬. ? | ನಿಜಗುರು ಸ್ವತಂತ್ರ ಮಲ್ಲೇಶ್ವರಾ |
| ೩೭. ? | ಬಸವಪ್ರಿಯ ಕೂಡಲಸಂಗಮ ದೇವಾ |
| ೩೮. ? | ಮಹಾಲಿಂಗ ಚೆನ್ನರಾಮಾ |

— ಶ್ರೀ ಗುರು ಬಸವಲಿಂಗಾಯ ನಮಃ —

# ಪ್ರಸ್ತಾವನೆ



## ಕನ್ನಡನಾಡು ೧.

ನೂರಾರು ಕಲೆಗಳಿಗೆ ನೆಲೆಯಾಗಿ ಸೆಲೆಯಾಗಿ
ವೀರ ಚೆನ್ನಮ್ಮ ಮಲ್ಲಮ್ಮಾದಿಗಳಿಗೆ ತವ
ರೂರಾಗಿ ವಿಜಯನಗರಾದಿ ರಾಯರಿಗೆ ತಾಯ್ನಾಡಾಗಿ ಬೀಡಾಗಿರೆ
ವೀರ ಶೈವಾಚಾರಕ್ಕಾದಿನೆಲೆಯಾಗಿ ಸಿರಿ
ಪೂರ ಧನ-ಧಾನ್ಯ ಬಾಂಡಾಗಾರವಾಗಿ ಸಿರಿ
ಭಾರತಕೆ ಗುರುಕುಲವದಾಗಿ ಮೆರೆಯುವದೆನ್ನ ಹೊನ್ನ ಕನ್ನಡನಾಡು

ವೇದಾಂತ ಸಿದ್ಧಾಂತ ತತ್ವಂಗಳಿಂ ಸೂರೆ
ಗೈದ ಶಿವ-ಶರಣರಿಂ ಪಾವಾಡ ಪುರುಷರಿಂ
ಮಾದೇವಿಯಕ್ಕ ಚೆನ್ನಬಸವ ಬಸವಾಲ್ಲಮಪ್ರಭುವಾದಿ ನೇತಾರರಿಂ
ಮೋದದಿಂನುದಿಸಿ ವಚನಾಮೃತದ ಮಳೆ ಸುರಿಸಿ
ಐದಿದೆಡೆ ಲಿಂಗಾಂಗ ಸಾಮರಸ್ಯವನೈದಿ
ಭೂದೇವಿ ಕಂಠ ಮಾಂಗಲ್ಯದೆ ಶೋಭ್ಮೆರೆವುದೀ ರನ್ನ ಕನ್ನಡದನಾಡು

ನಮ್ಮ ನಾಡು ಹೊಂಪುಳ್ಳ ಸೊಂಪುಳ್ಳ ವಿಶಾಲವಾದ ಕನ್ನಡನಾಡು ೮೩,೫೦೦ ಚವರ ಮೈಲಿ ವಿಸ್ತಾರವಿದೆ. ದಕ್ಷಿಣೋತ್ತರ ೫೦೦ ಮೈಲಿ ಉದ್ದವಾಗಿಯೂ ಪೂರ್ವ ಪಶ್ಚಿಮ ೨೫೦ ಮೈಲು ಅಗಲವಾಗಿಯೂ ಇದೆ. ೧೯೮೦೦೦೦೦ ಕ್ಕೆ ಮೇಲ್ಪಟ್ಟು ಜನಬಲವುಳ್ಳದಾಗಿದೆ. ೩೦೦ ಮೈಲು ವಿಸ್ತೃತವಾದ ಕರಾವಳಿ ಪ್ರದೇಶ, ಅತ್ಯುತ್ತಮ ಬಂದರಕ್ಕೆ ಅನುಕೂಲವಾದ ಕಾರವಾರ, ಬಟಕಳದಂತಹ ಸ್ಥಲಗಳಿವೆ. ಮಳೆ ಬೆಳೆ ನದಿ ಜಲಪಾತ ಬೆಟ್ಟ ಖನಿಜ ಕಾಡು ಮೊದಲಾದ ಎಲ್ಲ ಬಗೆಯ ಪ್ರಕೃತಿ

ವೈಭವದಿಂದ ಯುಕ್ತವಾಗಿದೆ. "ಸುಜಲಾಂ ಸುಫಲಾಂ" ಎನ್ನುವ ಘನತ್ವಾದ ಪ್ರದೇಶ ನಮ್ಮನಾಡು.

ಕನ್ನಡಿಗರು ರಾಜ್ಯವನ್ನು ಕಟ್ಟಿ ವೈಭವದಿಂದ ಆಳಿದ್ದಾರೆ. ಗಂಗ, ರಟ್ಟ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯಿಸಳ ಮೊದಲಾದ ಅಚ್ಚ ಕನ್ನಡದ ಅರಸುಮನೆಗಳು ಕಾವೇರಿಯಿಂದ ಗೋದಾವರಿಯವರೆಗೆ ಕನ್ನಡದ ಘನತೆಯನ್ನು ಮೆರೆಯಿಸಿವೆ.

ಕನ್ನಡನಾಡು ಕವಿ, ಗಮಕಿ, ವಾದಿ ವಾಗ್ಮಿಗಳ ಮತ್ತು ಕಲಾವಿದರ ಗಾಯಕರ ನರ್ತಕರ ರಂಜನೆಯ ನಾಡು. ತತ್ವವೇತ್ತರ ತಪೋಧನರ ಪುಣ್ಯಕ್ಷೇತ್ರದ ಪಾವನದ ಬೀಡು.[೧]

## ತುಮಕೂರು ಜಿಲ್ಲೆ ೨.

ಈ ಮುದ್ದು ನಾಡಿನ ಮಧ್ಯಪ್ರದೇಶವಾಗಿರುವುದು ಮೈಸೂರಿನ ತುಮಕೂರು ಜಿಲ್ಲೆ. ಇದು ಪರಿಶುದ್ಧವಾದ ಕನ್ನಡ ಭಾಷೆಗೆ ಹೆಸರಾಗಿದೆ. ಈ ಪ್ರದೇಶವನ್ನು "ಕನ್ನಡದ ತಿರುಳ್", ಎಂದು ಕರೆಯಬಹುದಾಗಿದೆ. ಈ ಭಾಗದಲ್ಲಿ ಪ್ರಾಚೀನಕಾಲದಿಂದಲೂ ಅರಸರು ರಾಜ್ಯಗಳನ್ನು ಕಟ್ಟಿ ಆಳಿದ್ದಾರೆ. ಅನೇಕ ಜನ ತಪೋಧನರು ಸುಪ್ರಸಿದ್ಧರಾದ ಕವಿಪುಂಗವರು ಬಾಳಿ ಬೆಳೆದಿದ್ದಾರೆ. ತುಮಕೂರಿಗೆ ಅನತಿದೂರದಲ್ಲಿರುವ ಗೂಳೂರು, ಗುಬ್ಬಿ, ಶಿವಗಂಗೆ, ಎಡೆಯೂರು, ಕಗ್ಗೆರೆ, ಬಸದಿಬೆಟ್ಟ, ಕುಪ್ಪೂರು ಗದ್ದಿಗೆ, ಎಳನಡುವಿನ ಸಿದ್ಧರಾಮೇಶ್ವರ, ದೇವರಾಯನದುರ್ಗ, ಸೀಬಿ, ಎಂಬವು ಈ ಜಿಲ್ಲೆಯ ಪುಣ್ಯ ಕ್ಷೇತ್ರಗಳು. ಇವುಗಳಲ್ಲಿ ಗೂಳೂರು ಗುಬ್ಬಿ

---

೧. ದಿನಾಂಕ ೩೧-೮-೪೬ ರಂದು ದಾವಣಗೆರೆಯಲ್ಲಿ ಕೂಡಿದ ಕರ್ನಾಟಕ ಏಕೀಕರಣ ಮಹಾಪರಿಷತ್ತಿನ ಅಧ್ಯಕ್ಷರೂ ಮುಂಬಯಿ ಸರಕಾರದ ವ್ಯವಸಾಯ ಮಂತ್ರಿಗಳೂ ಆದ ಮಾನ್ಯ ಶ್ರೀ. ಎಂ. ಪಿ. ಪಾಟೀಲರ ಅಧ್ಯಕ್ಷಭಾಷಣದಲ್ಲಿ ಕರ್ನಾಟಕದ ಯೋಗ್ಯತೆ-ಕರ್ನಾಟಕದ ಸಂಪತ್ಸಮೃದ್ಧಿ ಕರ್ನಾಟಕದ ಗತಕಾಲ ಹೇಳುವ-ಪಾತ ಮುಂತಾದ ಮನನೀಯವಾದ ಸಂಗತಿಗಳ ಬಗೆಗೆ ನಿರೀಕ್ಷಿಸಬಹುದಾಗಿದೆ.



ಅಮರಗುಂಡದ ( ಗುಬ್ಬಿ ) ಒಂದು ನಿಟ್ಟಿನ ಮನೋಹರವಾದ ನೋಟ

ಶಿವಗಂಗೆ ಈ ಸ್ಥಳಗಳು ಬಹಳ ದಿವಸಗಳಿಂದ ಕವಿಗಳಿಗೆ ತತ್ವವೇತ್ತರಿಗೆ ವಿಭೂತಿ ಪುರುಷರಿಗೆ ಹೆಸರಾಗಿವೆ.[೨]

## ಅಮರಗುಂಡ ೩.

ಈಗ ಗುಬ್ಬಿ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಊರು ಕೆಲವು ಶತಮಾನಗಳ ಮುನ್ನ "ಅಮರಗುಂಡ" ಎಂಬ ಅಭಿದಾನದಿಂದ ಪ್ರಖ್ಯಾತವಾಗಿರುವ ಸಂಗತಿಯು ಪ್ರಾಚೀನ ಅನೇಕ ಗ್ರಂಥಗಳಿಂದ ಶಾಸನಗಳಿಂದ ತಿಳಿದು ಬರುತ್ತದೆ. ಅಮರಗುಂಡವು ಯೋಗಿಗಳ ತತ್ವವೇತ್ತರ ಮತ್ತು ಕವಿಗಳ ಪುಣ್ಯದ ಬೀಡಾಗಿ ರಮ್ಯದ ನಾಡಾಗಿ ಶಿವಾನುಭವಿಗಳ ಕೇಂದ್ರವಾಗಿತ್ತು.[೩]

ಅಮರಗುಂಡವು ಪ್ರಕೃತಿ ವೈಭವದ ವಿಲಾಸದ ಸೊಗಸಿನಿಂದ ಸುಶೋಭಿತವಾಗಿದೆ. ಅಮರಗುಂಡವನ್ನು ಹೊಂದಿಕೊಂಡು ಪೂರ್ವದ ಸಿಟ್ಟಿನಲ್ಲಿ ಸಿಂಸಾ (ಕದಂಬ) ನದಿಯು ಉಗಮವಾಗಿ ದಕ್ಷಿಣಾಭಿಮುಖವಾಗಿ ಹರಿದು ಹೋಗದೆ ಅಲ್ಲಲ್ಲಿ ಕೆರೆ ಕಟ್ಟೆ ಕಾಲುವೆ ವಾಪಿ ಕೂಪಾದಿಗಳಿಂದ ಬೀಗಿ ಬೆಳೆದು ಸಿಂತ ಭತ್ತದ ಕಬ್ಬಿನ ಅಚ್ಚಹಸುರಿನ ಗದ್ದೆಗಳಿಂದ

---

೨. ತುಮಕೂರು ಜಿಲ್ಲೆಯ ಹಿರಿಮೆಯ ವಿಚಾರವಾಗಿ ದಿನಾಂಕ ೨೭-೧೧-೪೬ ರಲ್ಲಿ ತುಮಕೂರಿನಲ್ಲಿ ಒಪ್ಪಿಸಿದ ಮಾನ ಪತ್ರಕ್ಕೆ ಪ್ರತ್ಯುತ್ತರವಾಗಿ ಆಸ್ಥಾನ ವಿದ್ವಾನ್ ಕೀರ್ತನ ಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು "ತುಮಕೂರು ಜಿಲ್ಲೆಯ ಮಹತ್ವ" ಎಂಬ ವಿಷಯವನ್ನು ಕುರಿತು ನಿರೂಪಿಸಿದ ಮನನೀಯವಾದ ಭಾಷಣವನ್ನು ನೋಡಿ.

೩. ಬಸವನ ಕಲ್ಯಾಣದಿಂದ ಪಶ್ಚಿಮದಿಶೆಯನ್ನು ಹೊಂದಿಕೊಂಡು ೧೨ ಮೈಲುಗಳ ಅಂತರದಲ್ಲಿ ಅಮರಗುಂಡವೆಂಬ ಕ್ಷೇತ್ರವಿದೆ. ಅಲ್ಲಿ ಮಲ್ಲಿಕಾರ್ಜುನನ ಗುಡಿಯಿದೆ. ಅಲ್ಲಿಯ ರಮ್ಯವಾದ ಸ್ಥಾನದಿಂದ ಕಳೆದುಳಿದಿರುವ ಅವಶೇಷಗಳಿಂದ ಪೂರ್ವದಲ್ಲಿ ಪ್ರಸಿದ್ಧವಾದ ಯಾತ್ರಾ ಸ್ಥಳವಾಗಿರಬೇಕೆಂದು ತೋರುತ್ತದೆ.

ರಾಯಚೂರು ಜಿಲ್ಲೆಯ ಲಿಂಗಸೂರು ತಾಲೂಕಿನಲ್ಲಿ 'ಅಮರಗುಂಡ, ಅಮರೇಶ್ವರ ಎಂಬ ಕ್ಷೇತ್ರವಿದೆ. ಈಗಲೂ ಪ್ರಸಿದ್ಧವಾದ ರಥೋತ್ಸವವಾಗುತ್ತದೆ.

ತೆಲಗುನಾಡಿನಲ್ಲಿ "ಅಮರಗುಂಡ" ಸುಧಾಕುಂಡ ಎಂಬ ಕ್ಷೇತ್ರವಿದೆ. ಮಲ್ಲಿಕಾರ್ಜುನ ಸ್ವಾಮಿಯ ಗುಡಿಯಿದೆ. ಹಿಮಾಲಯದ ತಪ್ಪಲದ ಕೇದಾರ ಕ್ಷೇತ್ರದಲ್ಲಿ ಅಮರಗುಂಡವೆಂಬ ಕ್ಷೇತ್ರವಿದೆ.

ಬಾಳೆ, ತೆಂಗು, ಅಡಿಕೆ, ಎಲೆಬಳ್ಳಿ, ಹಲಸು, ಮಾವು, ನಿಂಬೆ, ಚಿಕ್ಕು, ದಾಳಿಂಬ ಮೊದಲಾದ ಫಲಭರಿತವಾದ ತೋಟಗಳಿಂದ ಸಂಪಿಗೆ, ಪಾರಿಜಾತ, ಜಾಜಿ, ಮಲ್ಲಿಗೆ, ಮಲ್ಲೆ, ದಾಸಿವಾಳ, ಕಣಗಿಲು, ಕಂಚಿವಾಳ, ತಮಾಲಪತ್ರೆ, ಬಿಲ್ವಪತ್ರೆ ಮೊದಲಾದ ಉಪವನಗಳಿಂದ ಮನೋಹರವಾಗಿದೆ.

ಪ್ರಾಚೀನವಾದ ಅನೇಕ ಬೇಗುಲಗಳಿಂದ ಆಧುನಿಕ ರೀತಿಯಲ್ಲಿ ರಚಿತವಾದ ಮನೆ, ಮಠ, ರಸ್ತೆ, ವಿದ್ಯುದ್ದೀಪಗಳಿಂದ ಅಲಂಕೃತವಾಗಿದೆ. ವ್ಯಾಪಾರೋದ್ಯಮಗಳಿಂದ ಸರ್ವಕೋಮಿನ ಜನಾಂಗದವರು ಧನವಂತರಾಗಿ ನಾಗರಿಕರಾಗಿ ಸುಖ ಸಂತೋಷದಿಂದಿರುತ್ತಾರೆ.

ಅಮರಗುಂಡದ ಮಲ್ಲಿಕಾರ್ಜುನನ ದೇವಾಲಯವು ಪೂರ್ವ ದಿಶಾಭಿಮುಖವಾದ ಉನ್ನತವಾದ ಮಹಾದ್ವಾರದಿಂದ ವಿಸ್ತೀರ್ಣವಾಗಿ ಪುರ ಮಧ್ಯದಲ್ಲಿ ದಿವ್ಯವಾಗಿ ಭವ್ಯವಾಗಿ ಶೋಭಿಸುತ್ತದೆ. ಇದು ಬಹಳ ಪ್ರಾಚೀನಕಾಲದಿಂದ ಪ್ರಖ್ಯಾತವಾಗಿದೆ. ಅನೇಕ ಗ್ರಂಥಗಳಲ್ಲಿ ಶಾಸನಗಳಲ್ಲಿ ಇದರ ಹೆಸರು ಉಕ್ತವಾಗಿದೆ.

ಇಲ್ಲಿ ಅಮರಗುಂಡದ ಮಲ್ಲೇಶ್ವರಾಚಾರ್ಯನು ಪ್ರಖ್ಯಾತನಾಗಿ ಹೋಗಿದ್ದಾನೆ. ಈತನು ಗುರುಭಕ್ತಯ್ಯನ ಗುರು ಮಹಾಮಹಿಮಾನ್ವಿತ ವಿದ್ಯಾವಿಭೂಷಿತ ವಿದ್ಯಾಪ್ರದಾತ ಲಿಂಗಾನುಭಾವಿ. ತಪ್ತೋತೇಜದಲ್ಲಿ ಬೆಳಗಿದನು. ಈತನನ್ನು ಅನೇಕ ಕವಿಗಳು ಸ್ತುತಿಸಿರುತ್ತಾರೆ. ವೀರಶೈವರಲ್ಲಿ ಶಿವಯೋಗಿಗಳ ಸಮಾಧಿಗಳ ಮೇಲೆ ಲಿಂಗಸ್ಥಾಪನೆ ಮಾಡುವ ರೂಢಿ ಹಲವು ಶತಮಾನಗಳಿಂದ ಜಾರಿಗೆ ಬಂದಿದೆ. ಸಮಾಧಿ ಮಾಡಿ ಅದರ ಮೇಲೆ ಲಿಂಗವನ್ನು ಪ್ರತಿಷ್ಠಿಸಿ ಆಲಯವನ್ನು ಕಟ್ಟುವದಲ್ಲದೆ ಅವರ ಹೆಸರಿನಿಂದಲೇ ಲಿಂಗವನ್ನು ಕರೆಯುವ ಸಂಪ್ರದಾಯ ಒಂದಿದೆ. ಈ ವಿಚಾರದಲ್ಲಿ ಅನೇಕ ದೃಷ್ಟಾಂತಗಳನ್ನು ಕಾಣಬಹುದಾಗಿದೆ. ಈಗ ಅಮರಗುಂಡದಲ್ಲಿ ಪ್ರಸಿದ್ಧವಾಗಿರುವ ಮಲ್ಲಿಕಾರ್ಜುನನ ಹೆಸರಿನಿಂದ ಕರೆಯುತ್ತಿರುವ ಗುಡಿಯು ಮಲ್ಲೇಶ್ವರಾಚಾರ್ಯರ ಮಠವಾಗಿತ್ತೆಂದು ಮಲ್ಲಿಕಾರ್ಜುನೇಶ್ವರನೆಂಬ ಹೆಸರಿನಿಂದ ಕರೆಯುವ ಲಿಂಗವು ಮಲ್ಲೇಶ್ವರಾಚಾರ್ಯರ ಸಮಾಧಿಯೆಂದು ಅವರ ಶಿಷ್ಯ ಗುರುಭಕ್ತಯ್ಯನು ತೋಲ



ಅಮರಗುಂಡದ ( ಗುಬ್ಬಿ ) ಮಲ್ಲಿಕಾರ್ಜುನ ಗುಡಿ

ವನೇರಿ ಅನೇಕ ಮಹತ್ವಗಳನ್ನು ತೋರಿದರು ಇದೇ ಸ್ಥಳವೆಂದು ಊಹಿಸಲು ಅವಕಾಶವಿರುತ್ತದೆ.

ಮಹಾತ್ಮರು ಅಲ್ಲಲ್ಲಿ ಸಂಚರಿಸಿ ತಪಸ್ಸನ್ನಾಚರಿಸಿದ ಸ್ಥಲಗಳಲ್ಲಿ ಭಕ್ತರು ಅವರ ಹೆಸರಿನಿಂದ ಅಲ್ಲಿ ಲಿಂಗಸ್ಥಾಪನೆಯನ್ನು ಮಾಡಿ ಗುಡಿಗಳನ್ನು ಕಟ್ಟಿಸುವ ಸಂಪ್ರದಾಯವಿದೆ. ಅಲ್ಲಲ್ಲಿ ಕಂಡು ಬರುವ ಗುಂಡ ಎಂಬ ಹೆಸರಿನಿಂದ ಕರೆಯುವ ಕ್ಷೇತ್ರಗಳು ಅಲ್ಲಿ ಮಲ್ಲಿಕಾರ್ಜುನಾಭಿಧೇಯದಿಂದ ಕರೆಯುವ ಲಿಂಗಗಳು ಈ ಅಮರಗುಂಡದ ಮಲ್ಲೇಶ್ವರಾಚಾರ್ಯರ ಸ್ಮಾರಕವಾಗಿರಬಹುದೆ ? ಮಲ್ಲೇಶ್ವರಾಚಾರ್ಯರು ಅಲ್ಲಲ್ಲಿ ಸಂಚರಿಸಿ ತಪಸ್ಸನ್ನಾಚರಿಸಿದ ಕುರುಹುಗಳಾಗಿರಬಹುದೇ ? ಮುಂತಾದ ವಿಚಾರಗಳು ಸಂಶೋಧಕರ ವಿಷಯಗಳಾಗಿವೆ.

ಪುರದನಾಗಣ್ಣನೆಂಬ ವಚನಕಾರನು ತನ್ನ ವಚನಗಳಿಗೆ " ಅಮರಗುಂಡದ ಮಲ್ಲಿಕಾರ್ಜುನಾ " ಎಂಬ ಅಂಕಿತವನ್ನಿಟ್ಟುಕೊಂಡಿದ್ದಾನೆ. " ಮಲ್ಲಣ್ಣ ಕವಿಯು ಈ ಗಣಭಾಷಿತ ರತ್ನಮಾಲೆಯಲ್ಲಿ " ಈತನ ವಚನಗಳನ್ನು ಬಳಸಿಕೊಂಡಿರುತ್ತಾನೆ. ಈ ವಚನಕಾರನ ಸ್ಥಲವಾವುದು? ಕಾಲವಾವುದು ? ಎಂಬ ಸಂಗತಿಗಳು ನಿಚ್ಚಳವಾಗಿ ತಿಳಿಯುವವಿಲ್ಲ. ತನ್ನ ವಚನಗಳಿಗೆ ಯಾವ ಮಲ್ಲಿಕಾರ್ಜುನನನ್ನುದ್ದೇಶಿಸಿ ಅಂಕಿತವನ್ನಿಟ್ಟುಕೊಂಡಿದ್ದಾನೆಂಬುದು ತಿಳಿಯದಾಗಿದೆ. ಅಮರಗುಂಡ (ಗುಬ್ಬಿ)ದ ಕೆಲಬಲದಲ್ಲಿ ಅನೇಕ ಶಿವಶರಣರು ವಚನಕಾರರು ಆಗಿ ಹೋಗಿದ್ದಾರೆ. ಮತ್ತು ಅಮರಗುಂಡದ ಪಶ್ಚಿಮದಿಶೆಯನ್ನು ಹೊಂದಿಕೊಂಡು ೫ ಮೈಲುಗಳ ಅಂತರದಲ್ಲಿ " ಪುರ " ವೆಂಬ ಗ್ರಾಮವಿರುವದರಿಂದ ಈ ವಚನಕಾರನು ಇದೇ ಪುರದವನಾಗಿರಬಹುದೇ ! ಇದೇ ಅಮರಗುಂಡದ ಮಲ್ಲಿಕಾರ್ಜುನನನ್ನುದ್ದೇಶಿಸಿ ತನ್ನ ವಚನಗಳಿಗೆ ಅಂಕಿತವನ್ನಿಟ್ಟುಕೊಂಡಿರಬಹುದೇ ? ಎಂಬ ಅನುಮಾನಕ್ಕೆ ಆಸ್ಪದವಾಗಿದೆ.

ಅಮರಗುಂಡದಲ್ಲಿ ಪುರಾಣ ಪ್ರಸಿದ್ಧವಾದ ಓಹಿಲಯ್ಯನ ಗುಡಿಯೂ ಇದೆ. ಓಹಿಲಯ್ಯನು ೧೨ನೆಯ ಶತಮಾನದ ಶರಣರಿಂದ ಪೂರ್ವದವನು. ಅವನಿದ್ದದೇಶ ಗುಜರಾತ, ಈತನು ಒಬ್ಬ ರಾಜಕುಮಾರ ಪರಮ ವೈರಾಗ್ಯನಿಧಿ ಶಿವಜ್ಞಾನ ಸಂಪನ್ನ ಭಕ್ತಿಧುರಂಧರ ಶಿವಭಕ್ತಿಯಿಂದ

ಕಾಲ ಕರ್ಮ ಮಾಯೆಯನ್ನು ಜಯಿಸಿದವನು ಸೌರಾಷ್ಟ್ರ ಸೋಮ ನಾಥನು ಇವನ ಆರಾಧ್ಯ ದೇವತೆ. ಇವನ ಚರಿತ್ರೆಯನ್ನು ಮಹಾಕವಿ ಹರಿಹರದೇವನೇ ಮೊದಲಾದ ಕವಿಗಳು ಮನೋಹರವಾಗಿ ಚಿತ್ರಿಸಿರು ತ್ತಾರೆ. ೬೩ ಪುರಾತನರಲ್ಲಿ ಈತನ ಹೆಸರು ಬಂದಿದೆ. ಓಹಿಲಯ್ಯನು ಗಂಟೆಯ ಪಿಡಿದು ಟಂಟಣಿಸುವ ನಾದವ ಮಾಡುತ್ತ ಕಾಯಸಹಿತವಾಗಿ ಕೈಲಾಸಗಾಮಿಯಾಗಿರುವಾಗ ಗಂಟೆಯ ನಾಲಿಗೆಯು ಕಳೆದು ಭೂತ ಲಕ್ಕೆ ಪತನವಾಯಿತು. ಅದು ಈಗ ಅಮರಗುಂಡದಲ್ಲಿ ಓಹಿಲಯ್ಯನ ಗುಡಿ ಇರುವ ಸ್ಥಲವೇ ಎಂದು ಹೇಳುತ್ತಾರೆ. ಅದರ ನೆನಹಿಗಾಗಿ ಬಲದ ಕೈಯಲ್ಲಿ ಒಂದು ಗಂಟೆಯನ್ನು ಪಿಡಿದಿರುವ ಶಿಲಾಪ್ರತಿಮೆಯನ್ನು ಮಾಡಿ ನಿಲ್ಲಿಸಿದ್ದಾರೆ. ಅದಕ್ಕೆ ಓಹಿಲಯ್ಯನ ಮೂರ್ತಿಯೆಂದು ಕರೆಯು ತ್ತಾರೆ. ಗುಡಿಯು ಊರಿನ ಪೂರ್ವದಿಕ್ಕಿನ ಕೊನೆಯ ಅಂಚಿನಲ್ಲಿ ದೊಡ್ಡದಾಗಿ ದಕ್ಷಿಣಾಭಿಮುಖವಾಗಿ ಮನೋಹರವಾಗಿ ಕಂಗೊಳಿಸು ತ್ತದೆ.

ಶಿವಾನುಭಾವಿಯೂ, ತಪೋಧನನೂ, ಪಾವನಾತ್ಮನೂ, ಮಹಾ ಮಹಿಮನೂ, ಕಾರಣಿಕ ಪುರುಷನೂ, ತತ್ವವೇತ್ತನೂ, ವಚನಕಾರನೂ ಆದ ಎಡೆಯೂರು ತೋಂಟದ ಶಿದ್ಧಲಿಂಗೇಶ್ವರನ ಗುರುವಾದ ಹರದನ ಹಳ್ಳಿಯ ಗೋಸಲ ಚೆನ್ನಬಸವೇಶ್ವರನು ತಪಸ್ಸುಮಾಡಿದ ಮಠವು ಅಮರಗುಂಡದಿಂದ ಒಂದು ಮೈಲು ಅಂತರದಲ್ಲಿರುವ ಚೆನ್ನಳ್ಳಿಯೆಂಬ ಗ್ರಾಮದಲ್ಲಿದೆ. ಗೋಸಲ ಚೆನ್ನಬಸವಸ್ವಾಮಿಗಳು ತಮ್ಮ ಶಿಷ್ಯರಾದ ಅಪಾರ ಮಹಿಮಾನ್ವಿತರಾದ ಸಿದ್ಧಲಿಂಗಯತಿಗಳಿಗೆ ತಮ್ಮ ಶಿವಾನುಭವ ಚರಂತಿಗೆರೆಯ ಪಟ್ಟವಂ ಕೊಟ್ಟು ತಮ್ಮ ಪರಮಗುರುಗಳಾದ ಗೋಸಲ ಶಿದ್ಧೇಶ್ವರಸ್ವಾಮಿಗಳು ತಮ್ಮ ಮಹಿಮೆಯಿಂದ ಗಂಗೆಯಂ ತರಿಸಿದ ಕಾರಣದಿಂದ ಅವರ ಹೆಸರಾದ ಸಿದ್ಧಗಂಗೆಯ ಬೆಟ್ಟಕ್ಕೆ ಚಿತ್ತೈಸಿ ಗಣ ಪರ್ವವಂ ಮಾಡುತ್ತ ಲಿಂಗಪೂಜೆ ಜಂಗಮ ದಾಸೋಹದಿಂದ ಗಣ ಸಮೂಹದೊಡನೆ ಇರುತ್ತಿರಲು ಅಮರಗುಂಡದ ( ಗುಬ್ಬಿ ) ಪ್ರಸಿದ್ಧ ಕವಿಶ್ರೇಷ್ಠನಾದ ಮಲ್ಲಣಾರ್ಯನೆಂಬ ಗಣವರನು ಸಿದ್ಧಗಂಗೆ ಬೆಟ್ಟದಲ್ಲಿ ಹುವ ಸ್ವಾಮಿಗಳವರ ಸನ್ನಿಧಿಗೆ ಬಂದು ಭಕ್ತಿಯಿಂ ಸಾಷ್ಟಾಂಗವೆರಗಿ



ಅಮರಗುಂಡದಲ್ಲಿ (ಗುಬ್ಬಿ) ಓಹಿಲಯ್ಯನ ಗುಡಿ



ಅಮರಗುಂಡದಲ್ಲಿ ( ಗುಬ್ಬಿ ) ಗೋಸಲ ಚೆನ್ನಬಸವಸ್ವಾಮಿಗಳು ತಪಸ್ಸುಮಾಡಿದ ಮಠ

ಬಿನ್ನಹವಂ ಮಾಡಿ ಸ್ವಾಮಿಗಳವರನ್ನು ೭೭ ಬಿರುದುಗಳಿಂದ ಗಣಸಮೂಹ ದೊಡನೆ ಅಮರಗುಂಡಕ್ಕೆ ಕರೆದುಕೊಂಡು ಪೋಗಿ ಉತ್ಸಹಂಗೊಳಿಸಿ ತಮ್ಮಯ ಮಠದಿ ಗಣಪರ್ವವಂ ಮಾಡಿ ಆ ಬಳಿಕ ಮಲ್ಲಣಾರ್ಯರು ಮುಂತಾದ ಗಣಂಗಳು ಸ್ವಾಮಿಗಳವರಿಂದ ಷಟ್‌ಸ್ಥಲ ಜ್ಞಾನೋಪ ದೇಶವಂ ಪಡೆದರು. ಅಲ್ಲಿ ಮಲ್ಲಣಾರ್ಯರೇ ಮೊದಲಾದವರು ಒಂದು ಮಠವನ್ನು ಕಟ್ಟಿಸಿ ಅಲ್ಲಿಯೇ ಲಿಂಗಾನಂದದಿಂದಿರಲು ಪ್ರಾರ್ಥಿಸಿದರು. ಅವರ ಭಕ್ತಿಯುತವಾದ ಪ್ರಾರ್ಥನೆಯನ್ನು ಮನ್ನಿಸಿ ಎಲ್ಲರನ್ನು ಪಾವನ ಗೊಳಿಸುತ್ತ ಲಿಂಗಾನಂದದಲ್ಲಿರುತ್ತಿದ್ದರು. ಮಠವು ಊರಿನ ಪಶ್ಚಿಮ ದಿಶೆಯ ಅಂಚಿನಲ್ಲಿ ಪೂರ್ವದಿಶಾಭಿಮುಖವಾಗಿ ರಂಜಿಸುತ್ತಿದೆ. ಚೆನ್ನ ಬಸವಸ್ವಾಮಿಗಳವರ ಉತ್ಸವ ಮೂರ್ತಿಯು ಇದೇ ಮಠದಲ್ಲಿರುತ್ತದೆ.

ಚೆನ್ನಬಸವಸ್ವಾಮಿಗಳು ಅನೇಕ ಮಹತ್ವಗಳನ್ನೂ ತೋರಿ ಬಹಳ ಪ್ರಭಾವ ಶಾಲಿಗಳಾಗಿ, ರಾಜಮಹಾರಾಜರ ಮಾನ ಮನ್ನಣೆಗಳಿಗೆ ಪಾತ್ರರಾಗಿದ್ದರು. ಗುಬ್ಬಿ (ಚಟಕಪುರಿ) ಯವನಾದ ಆರಾಧ್ಯವೀರೇಶ್ವರ ಶಾಸ್ತ್ರಿಯು ತಾನು ರಚಿಸಿದ "ವೀರಶೈವಾನಂದ ಚಂದ್ರಿಕೆಯಲ್ಲಿ ಇವನು ಗುಬ್ಬಿಯ ಗ್ರಾಮವಾಸಿಯೂ, ಜಂಗಮ ಸಮೂಹಕ್ಕೆ ಜ್ಞಾನಪ್ರದನೂ ಯೋಗದಿಂದ ಷಟ್ ಚಕ್ರ ಶೋಧನೆಯುಳ್ಳವನಾಗಿರುವ ಸಂಪದ್ಯುಕ್ತ ನಾದ ಚೆನ್ನಬಸವೇಶ್ವರಸ್ವಾಮಿಗೆ ನಮಸ್ಕಾರವು ಎಂದು ಮುಂತಾಗಿ ನುತಿಸಿರುತ್ತಾನೆ. ಚೆನ್ನಬಸವಪುರಾಣ ಸಿದ್ಧೇಶ್ವರ ಪುರಾಣ ನಿರಂಜನ ವಂಶ ರತ್ನಾಕರ ಮುಂತಾದ ಗ್ರಂಥಗಳಲ್ಲಿ ಈತನನ್ನು ಬಹಳವಾಗಿ ಸ್ತುತಿ ಸಿರುತ್ತಾರೆ.

ಚೆನ್ನಬಸವಸ್ವಾಮಿಗಳು ಅಮರಗುಂಡದಲ್ಲಿಯೇ ಲಿಂಗೈಕ್ಯರಾದರು. ಊರಿನ ಪೂರ್ವದಿಶೆಯನ್ನು ಹೊಂದಿಕೊಂಡು ಉನ್ನತವಾಗಿ ಬೆಳೆದು ವಿಸ್ತಾರವಾಗಿ ಹಬ್ಬಿಕೊಂಡು ಪಚ್ಚೆಪಸುರಿಂದೊಪ್ಪುವ ಮನೋಹರವಾದ ಮಾಮರದ ಗುಂಪಿನ ಮಧ್ಯದಲ್ಲಿ ಸ್ವಾಮಿಗಳ ಸಮಾಧಿಯಾಗಿದೆ. ಗದ್ದು ಗೆಯು ಮಠವು ಭದ್ರವಾದ ಉನ್ನತವಾದ ಕಟ್ಟಡದಿಂದ, ಶಿಖರದಿಂದ, ನಂದೀಧ್ವಜದಿಂದ ಮಠವನ್ನು ಸುತ್ತು ಹಾಕಿದ ವಿಶಾಲವಾದ ಉನ್ನತ ವಾದ ಪ್ರಾಕಾರದಿಂದ ಉತ್ತರಾಭಿಮುಖವಾದ ಉತ್ತಮ ಮಹಾದ್ವಾರ ದಿಂದ ಅಂದಚೆಂದವಾಗಿ ಒಪ್ಪುತ್ತದೆ. ಪ್ರಾಕಾರದ ಬಲಬದಿಯನ್ನು

ಹೊಂದಿಕೊಂಡು ವಿಸ್ತಾರವಾದ ಕಲ್ಯಾಣಿ ಕಂಗೊಳಿಸುತ್ತದೆ. ಪೂರ್ವಕ್ಕೆ ಸಿಂಸಾನದಿಯು ಉತ್ತರದಿಂದ ದಕ್ಷಿಣಾಭಿ ಮುಖವಾಗಿ ಮಂದ ಮಂದವಾಗಿ ಹರಿಯುತ್ತದೆ. ಅದರ ತೀರದಲ್ಲಿಯೇ ಅಡವಿ ಸ್ವಾಮಿಗಳ ಮಠವು ಮನೋಹರವಾಗಿ ಕಾಣುತ್ತದೆ. ದಕ್ಷಿಣಕ್ಕೆ ತೆಂಗು, ಅಡಿಕೆ, ಬಾಳೆ, ಮಾವುಗಳಿಂದ ಬೀಗಿ ಬೆಳೆದ ತೋಟವು ಹೃದಯಾನಂದಕರವಾಗಿದೆ. ಇಂತಹ ಸೊಬಗಿನ ಸೊಗಸಿನ ಮಧ್ಯದಲ್ಲಿ ಚೆನ್ನಬಸವಸ್ವಾಮಿಯ ಗದ್ದುಗೆಯಿರುವ ಮಠವು ಸುಶೋಭಿತವಾಗಿ ಚೆನ್ನಬಸವೇಶ್ವರಸ್ವಾಮಿಯ ರಥೋತ್ಸವವು ಪ್ರತಿವರ್ಷವು ವಿಶೇಷ ವೈಭವದಿಂದ ನಡೆಯುತ್ತದೆ. ಇವೆಲ್ಲ ಕಾನನಗಳಿಂದ ಅನುಗಗುಂಡವು ಫಲಪುಷ್ಪ ಭರಿತವಾದ ತಾಣವಾಗಿ ರಮ್ಯದ ನೆಲೆಯಾಗಿ ಪುಣ್ಯದ ಭೂಮಿಯಾಗಿ ಸಕಲರಿಗೆ ಯಾತ್ರಾಸ್ಥಲವಾಗಿದೆ.

## ಗುಬ್ಬಿ

ಈ ಅಮರಗುಂಡಕ್ಕೆ ಗುಬ್ಬಿ ಎಂಬ ಹೆಸರು ಬರಲು ಒಂದು ಸ್ವಾರಸ್ಯವಾದ ಕಥೆಯನ್ನು ಹೇಳುತ್ತಾರೆ. ಈ ಗಣಭಾಷಿತ ರತ್ನಮಾಲೆಯನ್ನು ರಚಿಸಿದ ಮಲ್ಲಣ್ಣಗಳ ಪೌತ್ರನಾದ ಮಹಾಕವಿ ಮಲ್ಲಣಾರ್ಯರಿಗೆ ಬಸವ ಪುರಾಣದಲ್ಲಿ ವಿಶೇಷ ಭಕ್ತಿ ವಿಶ್ವಾಸ. ಅದನ್ನು ಹೇಳುವದರಲ್ಲಿ ಅವನಿಗೆ ಮಿಗಿಲಾದ ಉತ್ಸಾಹ ಪ್ರಾವೀಣ್ಯತೆ. ಅತಯೇವ ಆತನಿಗೆ "ಬಸವ ಪುರಾಣದ ಮಲ್ಲಣಾರ್ಯನೆಂದು ಕರೆಯುತ್ತಾರೆ. ಈತನು ಮಲ್ಲಿಕಾರ್ಜುನಸ್ವಾಮಿಯ ಗುಡಿಯಲ್ಲಿ ಬಸವ ಪುರಾಣವನ್ನು ಅನೇಕ ರಾಗ, ತಾಳ, ಮೇಳ ಸಮೇತವಾಗಿ ರಸವತ್ತಾಗಿ ಓದಿ ಸರಸವಾಗಿ ಅರ್ಥವನ್ನು ಹೇಳುವಾಗ ಸಕಲ ಭಕ್ತರು ಭಕ್ತಿಪರವಶರಾಗಿ ಆಲಿಸುತ್ತಲಿದ್ದಾರೆ. ಮಲ್ಲಣಾರ್ಯರ ದೃಷ್ಟಿಗೋಚರವಾಗುವಂತೆ ಕಂಬದ ಮೇಲೆ ಎರಡು ಗುಬ್ಬಿಯ ಹಕ್ಕಿಗಳು ಕುಳಿತುಕೊಳ್ಳುತ್ತಲಿದ್ದವು. ಮಲ್ಲಣಾರ್ಯರು ಅವುಗಳನ್ನು ನೋಡಿ ಈ ಗುಬ್ಬಿ ಹಕ್ಕಿಗಳೂ ದಿನದಿನವೂ ಪುರಾಣ ಶ್ರವಣ ಮಾಡುತ್ತಲಿವೆ. ಇವುಗಳ ಜನ್ಮ ಸಾರ್ಥಕವಾಯಿತೆಂದು ಆಗಾಗ ಅಪ್ಪಣೆ ಕೊಡಿಸುತ್ತಿದ್ದರು. ಪುರಾಣದ ಮಹಾಮಂಗಲದ ದಿವಸ ಸಂಭ್ರಮದಿಂದ ಗಣಾರಾಧನೆ ಜರುಗಿದೆ. ಸಾಯಂಕಾಲ ಪುರಾಣ ಯಥಾವತ್ತಾಗಿ



ಅಮರಗುಂಡವಳ್ಳಿ (ಗುಬ್ಬಿ) ಗೋಸಲ ಚೆನ್ನಬಸವಸ್ವಾಮಿಗಳ ಗದ್ದುಗೆ ಇರುವ ಮಠ



ಅಮರಗುಂಡದ (ಗುಬ್ಬಿ) ಮತ್ತೊಂದು ನಿಟ್ಟಿನ ರಮ್ಯವಾದ ದೃಶ್ಯ



ಅವರಗುಂಡದ (ಗುಬ್ಬಿ) ಮಲ್ಲಿಕಾರ್ಜುನನ ಗುಡಿಯಲ್ಲಿರುವ
"ಗುಬ್ಬಕ್ಕಿ ಬಸವ"

ನಡೆದು ಪೂರೈಸಿದೆ. ಪುರಾಣಿಕರಾದ ಪೂಜ್ಯ ಮಲ್ಲಣಾರ್ಯರು ದಿವ್ಯ ವಾದ ಆಸನದಲ್ಲಿ ಮಂಡಿಸಿದ್ದಾರೆ. ಎಲ್ಲರು ಎದ್ದು ನಾನಾಬಗೆಯ ಆರತಿ ಗಳನ್ನಿಡಿದು ಮಂಗಳಗೀತೆಗಳನ್ನು ಪಾಡುತ್ತಲಿದ್ದಾರೆ. ಅದೇ ಸನ್ನಿವೇಶ ವಲ್ಲಿ ದಿನದಿನವೂ ಪುರಾಣ ಶ್ರವಣ ಮಾಡುತ್ತಲಿದ್ದ ಆ ಗುಬ್ಬಿಯ ಹಕ್ಕಿ ಗಳು ಜೋಡಿಯಾಗಿ ಹಾರಿ ಬಂದು ಮಲ್ಲಣಾರ್ಯರ ಪಾದತಲದಲ್ಲಿ ಬಿದ್ದು ಕೂಡಲೇ ಪ್ರಾಣ ಬಿಟ್ಟವು. ಆ ಪಕ್ಷಿಗಳ ಹಿಂದಣ ಜನ್ಮದ ವೃತ್ತಾಂತವನ್ನು ದಿವ್ಯ ಜ್ಞಾನಿಯಾದ ಮಲ್ಲಣಾರ್ಯರು ತಿಳಿದು ಆ ಪಕ್ಷಿಗಳನ್ನು ಅದೇ ದೇವಾಲಯದಲ್ಲಿಯೇ ತಾವು ಪುರಾಣ ಪ್ರವಚನ ಗಳನ್ನು ನಡೆಯಿಸುತ್ತಿದ್ದ ಸಭಾ ಮಂಟಪದ ಬಲ ಬದಿಯ ಒಂದು ಮೂಲೆಯಲ್ಲಿ ಸಮಾಧಿ ಮಾಡಿದ್ದಾರೆ. ಅದರ ಮೇಲೆ ಚಿಕ್ಕದೊಂದು ಶಿಲಾಶಾಸನವನ್ನು ಪ್ರತಿಷ್ಠಾಪನೆ ಮಾಡಿರುತ್ತಾರೆ. ಈಗ ಅದಕ್ಕೆ "ಗುಬ್ಬಕ್ಕಿ ಬಸವ" ನೆಂದು ಕರೆಯುತ್ತಲಿದ್ದಾರೆ. ಈ ಮಹ ತ್ವದ ನಿಮಿತ್ತವಾಗಿ ಗುಬ್ಬಿ ಹಕ್ಕಿಗಳಿಗೆ ಮೋಕ್ಷವನ್ನು ಕೊಟ್ಟ ಅಮರ ಗುಂಡಕ್ಕೆ "ಗುಬ್ಬಿ" ಎಂಬ ಹೆಸರನ್ನು ಆ ಮಹಾಕವಿಯೇ ಕರೆದನು ಅಂದಿನಿಂದ ಈ ಊರಿಗೆ ಅಮರಗುಂಡವೆಂಬ ಹೆಸರು ಹೋಗಿ ಗುಬ್ಬಿ ಎಂಬ ಹೆಸರು ಸ್ಥಿರವಾಯಿತು. ಅದೇ ನಿಮಿತ್ತದಿಂದ ತನ್ನ ಹೆಸರಿನ ಹಿಂದೆ ಗುಬ್ಬಿ ಎಂಬ ವಿಶೇಷಣವನ್ನು ಜೋಡಿಸಿಕೊಂಡು ಗುಬ್ಬಿಯ ಮಲ್ಲ ಣಾರ್ಯನೆಂದು ಕರೆದು ಕೊಂಡನು; ಎಂದು ಪರಂಪರೆಯಿಂದ ಬಂದ ಪ್ರತೀತಿಯಿಂದ ತಿಳಿದು ಬರುತ್ತದೆ.

## ಕವಿ ಮತ್ತು ಕಾಲ ೫.

ಈಗ ನಮಗೆ ತಿಳಿದ ಮಟ್ಟಿಗೆ ಗುಬ್ಬಿಯ ಮೊದಲನೆಯ ಕವಿ ಯೆಂದರೆ ರಸವತ್ತಾದ ಪ್ರೌಢವಾದ ಭಾಷೆ, ಗಂಭೀರವಾದ ನಿರೂಪಣೆ, ಮನೋಜ್ಞವಾದ ಉಪಮೆಗಳಿಂದ ಯುಕ್ತವಾದ ಭಕ್ತಿ ಪ್ರಧಾನವಾದ ಭಾವಚಿಂತಾರತ್ನವೆಂಬ ಉತ್ತಮ ಕಾವ್ಯವನ್ನೂ ಇದಲ್ಲದೆ ವೀರಶೈವ ಧರ್ಮಸಾರ ಸಂಗ್ರಹವೆಂದು ಕರೆಯ ಬಹುದಾದ 'ವೀರಶೈವಾಮೃತ ಮಹಾ ಪುರಾಣವನ್ನು' ಬರೆದು ಕನ್ನಡನಾಡಿನ ವ್ಯಾಸನೆಂದು ಪ್ರಖ್ಯಾತ ನಾಗಿರುವ ಮಹಾಕವಿ ಮಲ್ಲಣಾರ್ಯನ ಪಿತಾಮಹ "ಶ್ರೀ ಮಲ್ಲಣ್ಣ ಕವಿ" ಯೇ ಗುಬ್ಬಿಯ ಮೊದಲನೆಯ ಕವಿಯು.

ಇವನ ಕಾಲ ಸುಮಾರು ಕ್ರಿ. ಶ. ೧೪೭೫ ಎಂದು ಕನ್ನಡ ಕವಿ ಚರಿತ್ರೆಕಾರರು. ರೆ ಕಿಟಲ್‌ರವರು ಇನ್ನುಳಿದ ಸಂಶೋಧಕರು ಅಭಿಪ್ರಾಯ ಪಟ್ಟಿರುತ್ತಾರೆ. ಈ ವಿಚಾರದಲ್ಲಿ ಎಲ್ಲರೂ ಏಕಮೇಭಿಪ್ರಾಯವಿದ್ದುದರಿಂದ ಈಗ ನಿರ್ಧರಿಸಿರುವ ಕಾಲವನ್ನೇ ನಿಶ್ಚಯವೆಂದು ನಂಬಬೇಕಾಗಿದೆ.

## ಕವಿಯ ಅನ್ವಯ ೬.

ಮಲ್ಲಣ್ಣಗಳ ಅನ್ವಯವು ಪಾವನ ಚಾರಿತ್ರದಿಂದ ಶಿವಯೋಗ ಸಂಪನ್ನತೆಯಿಂದ ಮಹಿಮಾಸ್ಪದತ್ವದಿಂದ ವಿದ್ಯಾ ಭೂಯಿಷ್ಠತೆಯಿಂದ ಪ್ರಖ್ಯಾತವಾಗಿದೆ. ವೀರಶೈವಾಂಮೃತ ಪುರಾಣದಲ್ಲಿ.

ಈ ವೀರಶೈವಾ ಮೃತಾಖ್ಯ ಸಂಗ್ರಹವ ನೀ
ಭೂವಳೆಯದಲ್ಲಿ ಕೃತಿಯಂ ಮಾಳ್ಪ ಶಿವಕವಿಯು
ದಾವನೆಂದರಿದು ಹಲಗೆಯದೇಶಿಕಂ ಮಲ್ಲಣಾರ್ಯನಂಕರೆದು
ನುಡಿದಂ

ನಾವು ಪೇಳ್ವೀ ಬೋಧೆಯಂ ಪದನ ಮಾಡುವೊಡೆ
ಪಾವನಚರಿತ್ರಕೇಳ್ ನೀನೆ ಯೋಗ್ಯಕಣಾ
ತಾವ ಕಾನ್ವಯದಮರಗುಂಡದ ಮಲ್ಲೇಶ್ವರಾಚಾರ್ಯನೇ
ಸಾಮಾನ್ಯನೇ

ಆವರ ಶಿಷ್ಯಂ ಶೂಲವನೇರಿದ ಮಹತ್ವವು
ಳ್ಳವಚಲಿತ ಗುರುಭಕ್ತನಾತನ ಕುಮಾರ ನಾ
ಪ್ರವರ ದೇಶಿಕ ಪಟ್ಟದ ವರ್ಧನಂ ಸೌಂದರ್ಯ ಮಲ್ಲಿಕಾರ್ಜುನ
ಪಂಡಿತಃ

ತವೆತತ್ತನೂಭವಂ ನಾಗನಾಥಾರ್ಯ ನಾ
ಶಿವನ ನುಡಿಸಿದ ನಾತನಣುಗನಹಿಯಂ ಲಿಂಗ
ಕವಧಾನದಿಂ ಛತ್ರವಂ ಮಾಡಿದ ಅಮರಗುಂಡಾಚಾರ್ಯನ
ಪುತ್ರನು

ಖ್ಯಾತನಾ ಪುಲ್ಕಸಾಂಗನಲ ಸದ್ಬ್ರಾಹ್ಮಣ
ವ್ರಾತ ಕಗ್ಗಳನ ಮಾಡುತ ವೇದವೋದಿಸಿದ

ಪ್ರೂತವಾನಸನಿಂತು ಮೆರೆವನ್ವಯದೊಳು ಗುಬ್ಬಿಯ
ಮಲ್ಲಣಾರ್ಯನು
ಜಾತನಾಗುತ್ತಲನುಭವ ಯೋಗಷಟ್‌ಸ್ಥಲ
ಖ್ಯಾತಮುಂ ಗಣಭಾಷ್ಯರತ್ನ ಮಾಲೆಯ ಮಾಡಿ
ವಾತುಲಕಂ ಟಿಪ್ಪಣವನೆಸಗಿದವನ ಪೌತ್ರನೀನದೇಂ ಬಡವನೇ

ಅಮರಗುಂಡದ ಮಲ್ಲೇಶ್ವರಾಚಾರ್ಯರು ಸಾಮಾನ್ಯರೇ! ಅವರ ಶಿಷ್ಯ ಶೂಲವನೇರಿದ ಗುರುಭಕ್ತಯ್ಯನು ಇವನು ಅಸಾಧಾರಣವಾದ ಪಂಡಿತ ಗುರುಸೇವಾತತ್ಪರ ಗುರುವಿನ ಆಜ್ಞಾತತ್ಪರ ಮಹಾಜ್ಞಾನಿ, ಮಹಿಮಾನ್ವಿತ ಈತನ ಭಕ್ತಿಯುತವಾದ ಚರಿತ್ರೆಯನ್ನು ಪಾಲ್ಕುರಿಕೆಯ ಸೋಮನಾಥನು ತೆಲಗು ಬಸವ ಪುರಾಣದಲ್ಲಿ ಭೀಮಕವಿಯು ಬಸವ ಪುರಾಣದಲ್ಲಿ ಷಡಕ್ಷರಿಯು ವೃಷಭೇಂದ ವಿಜಯದಲ್ಲಿ ಕಂಚಿಯ ಶಂಕರ ಕವಿಯು ಸಂಸ್ಕೃತ ಬಸವರಾಜ ವಿಜಯದಲ್ಲಿ ಚಿತ್ರಿಸಿರುತ್ತಾರೆ. ಗುರುಭಕ್ತನು ಒಂದಾನೊಂದು ದಿನ ರಾತ್ರಿಯ ನಾಲ್ಕನೆಯ ಜಾವದಲ್ಲಿ ಎದ್ದು ಗುರುಪೂಜೆಗೆ ಹೂ ಪತ್ರೆಯನ್ನು ತರುವದಕ್ಕಾಗಿ ಹೊರಟು ಬರುವಲ್ಲಿ ತನ್ನ ಕಾಲಿಗೆ ಗುರುವಿನ ಪಾದುಕೆಗಳು ಸೋಂಕಲು ಶಿವಾ ಶಿವಾ ಮಹಾಪಾಪವು ಸಂಭವಿಸಿತಲ್ಲಾ, "ಗುರುವಿಗೆ ಸಂಬಂಧ ಷಟ್ಕ ಪಾದುಕೆ ಪೀಠ ಹಾಸಿಗೆ ಸೋಪಲಾಪವುಗಳನ್ನು ನಮಸ್ಕರಿಸಬೇಕು. ಯಾವಾಗಲೂ ಕಾಲು ಸೋಂಕ ಕೂಡದು" ಎಂಬ ಪ್ರಮಾಣ ವಚನವನ್ನು ಮೀರಿ ಗುರುಪಾದುಕೆಯನ್ನು ಕಾಲಿನಿಂದ ಸೋಂಕಿದೆನಲ್ಲಾ! ಗುರುದ್ರೋಹಕ್ಕಿಂತಲೂ ಬೇರೆ ಮಹಾ ಪಾಪವಾವುದು? ಆದ್ದರಿಂದ ನನ್ನ ಕಾಲವನ್ನು ತುಂಡು ತುಂಡಾಗಿ ಕತ್ತರಿಸಿ ರಕ್ತವನ್ನು ತುಪ್ಪವನ್ನಾಗಿಯೂ ಮೂಳೆಗಳನ್ನೂ ಸಮಿತ್ತನ್ನಾಗಿಯೂ, ಮಾಡಿ ಶಿವಾಗ್ನಿಯಲ್ಲಿ ಹೋಮ ಮಾಡುತ್ತೇನೆ. ಎಂದು ನಿಶ್ಚೈಸಿ ತನ್ನ ಎರಡೂ ಕಾಲುಗಳನ್ನು ಕತ್ತರಿಸಿದನು. ಆತನ ಗುರುವಾದ ಅಮರಗುಂಡದ ಮಲ್ಲಿಕಾರ್ಜುನನು ಶಿಷ್ಯನ ವೃತ್ತಾಂತವನ್ನು ತಿಳಿದು ಶೀಘ್ರದಲ್ಲಿ ಬಂದನು. ಗುರುಭಕ್ತನು ಗುರುವನ್ನು ನೋಡಿ ತನ್ನನ್ನು ತಾನೇ ಮರೆತು ಭಯ ಭಕ್ತಿಯಿಂದೆದ್ದು ನಮಸ್ಕರಿಸುವದಕ್ಕೆ ಉದ್ಯುಕ್ತನಾಗಲು ಆ ಕ್ಷಣವೇ ಪಾದಗಳೆರಡೂ ಬಂದವು. ಆತನ ಗುರುಭಕ್ತಿಯ ಮಹಿಮೆಯನ್ನು ಎಲ್ಲರೂ ಕೊಂಡಾಡಿದರು.

ಗುರುಭಕ್ತಯ್ಯನ ಗುರುಭಕ್ತಿಗೆ ಗುರುಭಕ್ತನಲ್ಲಿರುವ ಗುರುಕೃಪೆಗೆ ಇತರ ಶಿಷ್ಯರೆಲ್ಲರೂ ಅಸೂಯೆಗೊಂಡರು. ಇದನ್ನು ಅಮರಗುಂಡದ ಮಲ್ಲಿಕಾರ್ಜುನ ಗುರುಗಳು ತಿಳಿದು ತನ್ನ ಮುಂದೆ ಹಾಸಿಗೆಯಿಂದ ಕೂಡಿದ ಒಂದು ಮಂಚವನ್ನು ಹಾಕಿಸಿ ಶಿಷ್ಯರನ್ನು ಒಬ್ಬೊಬ್ಬರನ್ನಾಗಿ ಕರೆದು ನೀವು ಈ ಮಂಚದ ಮೇಲೆ ಕುಳಿತು ಕೊಳ್ಳಿರೆಂದು ಹೇಳಿದರು. ಇದು ನೀತಿಯುಕ್ತವಾದುದಲ್ಲ ವಿಪರೀತವಾದ ಮಾತು ಎಂದು ಯಾರೂ ಸಮ್ಮತಿಸಲಿಲ್ಲ. ಗುರುಗಳು ತನ್ನ ಪಾದವನ್ನು ಒತ್ತುತ್ತಿರುವ ಗುರುಭಕ್ತನನ್ನು ನೋಡಿ ನೀನು ಈ ಮಂಚವನ್ನು ಹತ್ತೆಂದು ಹೇಳಿದರು. ಆಗ ಗುರುಭಕ್ತನು ಗುರುವಿನಾಜ್ಞೆಯ ನಡೆಯಿಸುವದೇ ಒಳ್ಳೇಯ ನಡತೆಯೆಂದು ಗುರುಪಾದಗಳಿಗೆರಗಿ ಆ ಮಂಚವನ್ನೇರಿದನು. ಆಗ ಇನ್ನುಳಿದ ಶಿಷ್ಯರೆಲ್ಲರು ಕೋಪದಿಂದ ಕೆರಳಿದವರಾಗಿ ಈತನು ಗುರುದ್ರೋಹಿಯೆಂದು ಹೊಡೆಯಲುದ್ಯುಕ್ತರಾದರು. ಗುರುಗಳು ಎಲ್ಲರನ್ನು ಕರೆದು ಮಠದ ಅಂಗಳದಲ್ಲಿ ಒಂದು ಶೂಲವನ್ನು ನಡಸಿ ಶಿಷ್ಯರನ್ನು ಕುರಿತು ನೀವು ಮಂಚವನ್ನು ಹತ್ತಿರಿ. ಇಲ್ಲದ್ದಿದ್ದರೆ ಈ ಶೂಲವನ್ನೇರಿರಿ ಎಂದೆನಲು ಎಲ್ಲರು ಗುರುಭಕ್ತನಿಗೆ ಶೂಲವನ್ನೇರಲು ಅಪ್ಪಣೆ ಮಾಡಿರಿ ಎಂದು ಹೇಳಿದರು. ಗುರುಗಳು ಗುರುಭಕ್ತನನ್ನು ಕರುಣಾಕಟಾಕ್ಷದಿಂದೀಕ್ಷಿಸಿ ಮೈದಡವಿ ಶೂಲವನ್ನು ತೋರಿಸಲು ಆತನು ಗುರುಪಾದಕ್ಕೆ ನಮಸ್ಕರಿಸಿ ಸಂತೋಷದಿಂದ ಮಂಚವನ್ನು ಹತ್ತಿದಂತೆ ಶೂಲವನ್ನೇರಿದನು. ತತ್‌ಕ್ಷಣವೇ ಆ ಶೂಲವು ಗುದದ್ವಾರದಲ್ಲಿ ಹೊಕ್ಕು ನೆತ್ತಿಯಲ್ಲಿ ಹೊರಟಿತು. ಇಂತಾದರೂ ಕೈಜೋಡಿಸಿಕೊಂಡು ಕುಳಿತಿರುವದನ್ನು ಕಂಡು ಗುರುಗಳು ಅವನ ಭಕ್ತಿಯನ್ನು ಬಹಳವಾಗಿ ಕೊಂಡಾಡಿ ಎಲೈ ಗುರುಭಕ್ತನೇ ನಿನ್ನ ಉನ್ನತವಾದ ಭಕ್ತಿ ನಿರರ್ಗಳವಾದುದು. ಇಳಿದು ಬಾ ಎನಲು ಕೂಡಲೇ ಶೂಲದ ಹಲಿಗೆಯು ಬಡಿದು ಅದರ ಮೇಲೆ ಎರಡೂ ಕೈಗಳನ್ನೂರಿ ವೇಗದಿಂದ ಹಾರಿ ಭೂಮಿಗೆ ಧುಮುಕಿ ಗುರುವಿನ ಪಾದಕ್ಕೆ ನಮಸ್ಕರಿಸಿದನು. ಗುರುಕೃಪೆಯಿಂದ ಭಕ್ತಿಯ ಮಹಿಮೆಯಿಂದ ಗುರುಭಕ್ತನಿಗೆ ಗಾಯದ ಬಾಧೆಯು ಆಗಲಿಲ್ಲ. ಈ ಮಹಿಮೆಯನ್ನು ಕಂಡು ಎಲ್ಲರೂ ಕೊಂಡಾಡಿದರು. ಗುರುಭಕ್ತಯ್ಯನನ್ನು ಗುರುಭಕ್ತಿನವಮರುದ್ಮಣಿ ಗುರುಭಕ್ತಿಸುಧಾಸರೋಧಿ

ಗುರುಭಕ್ತಿ ಸುಖಾಕರಮೂರ್ತಿ ಗುರುಭಕ್ತಿದುರೀಣ ಎಂದು ಮುಂತಾಗಿ ಕವಿಗಳು ಕರೆದಿರುತ್ತಾರೆ. ಇಂತಹ ಗುರುಭಕ್ತಯ್ಯನ ಕುಮಾರದೇಶಿಕ ಪಟ್ಟವರ್ಧನಸೌಂದರ್ಯ ಮಲ್ಲಿಕಾರ್ಜುನಪಂಡಿತ ಆತನ ತನೂಭವ ಶಿವನಂ ಮಾತನಾಡಿಸಿದ ನಾಗನಾಥಾರ್ಯನು ಆತನ ಮಗ ಸರ್ಪವಂ ಲಿಂಗಕ್ಕೆ ಛತ್ರವಂ ಮಾಡಿದ ಅಮರಗುಂಡಯ್ಯನು ಆತನ ಮಗ ಮಲ್ಲಣಾರ್ಯನು.

## ಮಲ್ಲಣ್ಣಗಳ ನಿಲವು ೭.

ಮಲ್ಲಣ್ಣಕವಿಯು ಸುಪ್ರಸಿದ್ಧನಾದ ಹರದನಹಳ್ಳಿಯ ಗೋಸಲ ಚೆನ್ನಬಸವೇಶ್ವರನ ಕರಕಮಲ ಸಂಜಾತ ಅಸಾಧಾರಣವಾದ ಪಂಡಿತ ನಾನಾ ಶಾಸ್ತ್ರಾವಲೋಕನಾಸಕ್ತ ಶಿವಾನುಭಾವಿ ಹರಗುರು ಚರಣ ಸೇವಾಸಕ್ತ ಶರಣರಲ್ಲಿ ಕಿಂಕರ ಷಟ್‌ಸ್ಥಲಾಚರಣೆಯಲ್ಲಿ ಧುರಂಧರ ದಾಸೋಹಂಭಾವಿ ಇತ್ಯನಂತ ಗುಣಗಳಿಂದ ಮತ್ತಂ ಭಕ್ತಿಜ್ಞಾನ ವೈರಾಗ್ಯಗಳಿಂದ ತಪಃ ಪ್ರಭಾವದಿಂದ ಪ್ರಜ್ವಲಿಸಿದನು. ಪುಲ್ಕಸನೆಂಬ ನೀಚ ಜಾತಿಯವನನ್ನು ಬ್ರಾಹ್ಮಣ ಸಮಾಜಕ್ಕೆ ಶ್ರೇಷ್ಠನಂ ಮಾಡಿ ಆತನಿಂದ ವೇದವನೋದಿಸಿದನು. ಪೂರ್ವಕಾಲದ ಶಿವಶರಣರಂತೆ ತಾನೂ ಶರಣನಾಗಿ ಜನಾಂಗದಲ್ಲಿ ಕ್ರಾಂತಿಯನ್ನು ಶಾಂತಿಯನ್ನು ಉಂಟು ಮಾಡಿದನು. ಧೀರನೂ, ಮಹಿಮಾಸ್ಪದನೂ, ಪಾವನಾತ್ಮನೂ, ಪುಣ್ಯ ಚರಿತನೂ, ಪ್ರಖ್ಯಾತನೂ ಆದನು.

## ಗ್ರಂಥ ಪರಿಚಯ ೮.

ವೀರಶೈವಾಮೃತ ಪುರಾಣದಲ್ಲಿ—

ಖಾತನಾ ಪುಲ್ಕಸಾಂಗನಲ ಸದ್ಬ್ರಾಹ್ಮಣ<br>
ವ್ರಾತಗ್ಗಳನ ಮಾಡುತ ವೇದವನೋದಿಸಿದ<br>
ಪೂತವಾಸನನಿಂತು ಮೆರೆವನ್ವಯದೊಳು ಗುಬ್ಬಿಯ<br>
ಮಲ್ಲಣಾರ್ಯನು<br>
ಜಾತನಾಗುತ್ತಲನುಭವಯೋಗಷಟ್‌ಸ್ಥಲ<br>
ಖ್ಯಾತಮಂ ಗಣಭಾಷಿತ ರತ್ನಮಾಲೆಯಮಾಡಿ<br>
ವಾತುಲಕಂ ಟಿಪ್ಪಣವನೆಸಗಿದನ ಪೌತ್ರಂ ನೀನದೇಂಬಡವನೇ

ಭಾವ ಚಿಂತಾರತ್ನದಲ್ಲಿ—

ಎಲೆ ಮಲ್ಲಣಾರ್ಯಕೇಳ್ ನಿನ್ನಯ ಪಿತಾಮಹಂ
ಲಲಿತವಾತುಲ ತಂತ್ರಕ್ಕೆ ಟೀಕಂ ಮಾಡಿ
ನಲಿದಾಗಮಗ್ರಂಥ ವಚನದಿಂ ಗಣಭಾಷ್ಯರತ್ನಮಾಲೆಯ ರಚಿಸಿದ

ಶಿವ್ಯೇಶ್ವರ ಪುರಾಣದಲ್ಲಿ—

ಅಮರಗುಂಡದ ಮಲ್ಲಿಕಾರ್ಜುನ
ನಮಲಘನ ದಿವ್ಯಾಜ್ಞೆಯಿಂ
ಕ್ರಮದೆ ಶೂಲವನಡರಿದುರು ಗುರುಭಕ್ತನನ್ವಯದೆ
ಅಮರ್ದುರಾಜಿಸಿ ಸಕಲಶಾಸ್ತ್ರಾ
ಗಮಂಗಳಂ ನೆರೆ ತಿಳಿದು ಸಾರಂ
ವಿಮಲ ವಾತುಲಕ್ಕೆ ಟೀಕಂ ಮಾಡಿ ಧರೆಯಲ್ಲಿ
ಲಾಲಿಸಲ್ ಗಣಭಾಷ್ಯರತ್ನ ಸು
ಮಾಲೆಯಂ ಮಾಡುತ್ತೆ ಮತ್ತೆ ವಿ
ಶಾಲ ಚರಸೇವೆಯೊಳು ವರ್ಧಿಸಿ ಷಟ್‌ಸ್ಥಲದೋರ್ಪಂ
ಲೋಲ ಗುಬ್ಬಿಯ ಮಲ್ಲಣಾರ್ಯ ಮಂ
ಶಾಳಿ ಪುತ್ರಂ ಶಿವನ ಮಹಿಮೆಯಂ
ಲೀಲೆಯಿಂ ಪ್ರಕಟಿಸುವವನ ವಿಶೇಷವೆಂತೆನಲು

ಇಂತು ಅನೇಕ ಕವಿಗಳು ಮಲ್ಲಣ್ಣನ ಮೇಲ್ಮೆಯನ್ನು ಅವನ ಕೃತಿಗಳನ್ನು ಎದೆ ದುಂಬಿ ಹೊಗಳಿದ್ದಾರೆ. ಮಲ್ಲಣ್ಣಕವಿಯು ವರಗುರು ಸಾಥನಾಜ್ಞೆಯಿಂ ನಮ್ಮ ಜನ ಬದುಕಲೆಂದು.

೧. ಗಣಭಾಷಿತ ರತ್ನಮಾಲೆ
೨. ವಾತುಲಾಗಮ ವ್ಯಾಖ್ಯಾನ

ಎಂಬೆರಡು ಗ್ರಂಥಗಳನ್ನು ಒರೆದು ಕನ್ನಡ ಸಾಹಿತ್ಯಕ್ಕೆ ವೀರಶೈವ ಸಾಹಿತ್ಯತತ್ವ ಸಂಸ್ಕೃತಿಗಳಿಗೆ ಪರಮೋಪಕಾರ ಮಾಡಿರುತ್ತಾನೆ.

ವಾತುಲಾಗಮ ವ್ಯಾಖ್ಯಾನ ಎಂಬ ಗ್ರಂಥವು ಇನ್ನೂ ಮುದ್ರಿತ ವಾಗಿರುವದಿಲ್ಲ. ಇದರಲ್ಲಿ ವೀರಶೈವಧರ್ಮದ ಪರವಾಗಿ ಕನ್ನಡವ್ಯಾಖ್ಯಾನ ಬಹಳ ಸ್ಪಷ್ಟವಾಗಿ ಬರೆಯಲ್ಪಟ್ಟಿದೆ.

ವಿದ್ಯಾನಿಧಿಯಾದ ವಿನಯಸಂಪನ್ನನಾದ ಮಲ್ಲಣ್ಣನು ಗಣಭಾಷಿತ ರತ್ನಮಾಲೆಯನ್ನು ಬರೆಯುವಾಗ.

ಶ್ರೀಗುರುವೇ ಪರಮಗುರುವೆ ಮ
ಹಾಗುರುವೆ ನಿಮ್ಮ ಕೃಪೆಯೊಳುಂ ಪರಮಾಮೃತ
ಸಾಗರ ವೆಂಬಂತಿದನು
ದ್ಯೋಗಿಸಿದೆಂ ಶಾಸ್ತ್ರ ವಚನಸಮ್ಮತದಿಂದಂ

ಗುರು ಪರಂ ಪರೆಯಂ ಹರುಷದಿಂ ಹಾಡಿ, ಭಕ್ತಿಯಿಂ ಬೇಡಿ, ಕರುಣಮಂ ಸೂಡಿ ಮುತ್ತಿನ ಹಾರದಂತೆ ಸ್ಪಟಿಕದ ಸಲಾಕೆಯಂತೆ ವಜ್ರದ ದೀಪ್ತಿಯಂತೆ, ಲಿಂಗಮೆಚ್ಚುವಂತೆ, ನುಡಿದಿರುವ ಶಿವಶರಣರ ವಚನಗಳನ್ನು ಮತ್ತು ವೇದ, ಶೃತಿ, ಸ್ಮೃತಿ, ಪುರಾಣ, ಇತಿಹಾಸ, ನಾನಾ ಧರ್ಮಗ್ರಂಥಗಳ ಪ್ರಮಾಣದಿಂ ತತ್ವವಿವೇಚನೆಯನ್ನು ಸ್ಥಲ ಕಟ್ಟಿಗೆ ಸರಿ ಬರುವ ರೀತಿಯಲ್ಲಿ ಆಯ್ದು ಹವಣರಿದು ಸರಗೊಳಿಸಿರುತ್ತಾನೆ. ಈ ತತ್ವಯಮವಾದ, ಸತ್ವಮಯವಾದ, ಮನೋಹರವಾದ ಮಾಲೆಯನ್ನು ರಚಿಸಿ "ಗಣಭಾಷಿತ ರತ್ನಮಾಲೆ" ಎಂದು ಹೆಸರಿಟ್ಟು ಕರೆದಿದ್ದಾನೆ. ಇದನ್ನು ತತ್ವನೇತ್ರರಿಗೆ ಶಿವಾನುಭಾವಿಗಳಿಗೆ ಕಿಂಕರತೆಯಿಂದ ಕಾಣಿಕೆ ಯನ್ನಾಗಿ ಸಮರ್ಪಿಸಿರುತ್ತಾನೆ. ಗಣ್ಯತೆಯನ್ನು ಗಳಿಸಿಕೊಂಡಿರುತ್ತಾನೆ.

## ವಚನವಾಙ್ಮಯದ ಬೆಳವಣಿಗೆ ೯.

೧೨ ನೆಯ ಶತಮಾನವು ವಚನ ವಾಙ್ಮಯದ ಉನ್ನತಿಯ ಮಹೋನ್ನತಿಯ ಕಾಲವಾಗಿದ್ದರೆ. ೧೫ ನೆಯ ಶತಮಾನದಲ್ಲಿ ಹಲವು ಜನ ಶಿವಾನುಭಾವಿಗಳು ಉದಯರಾಗಿ ಹಿಂದಿನ ಶಿವಶರಣರ ವಚನ ವಾಙ್ಮಯದ ರಚನೆಯ ಬಳಿವಿಡಿದು ಕೆಲವುವಚನಗಳನ್ನು ಸ್ವತಂತ್ರ ವಾಗಿ ರಚಿಸಿದರು. ಹಲವರು ವಚನಗಳನ್ನು ಸಂಗ್ರಹಿಸಿ ಅವುಗಳನ್ನು ಒಂದು ವ್ಯವಸ್ಥಿತರೀತಿಯಲ್ಲಿ ಜೋಡಿಸಿದರು. ವಚನಗಳು ಸೂತ್ರದಂತೆ ಅರ್ಥಗರ್ಭಿತವಾಗಿವೆ. ಶಿವಾನುಭವ ಶಾಸ್ತ್ರದ ಪಾರಿಭಾಷಿಕ ಶಬ್ದಗಳಿಂದ ಯುಕ್ತವಾಗಿರುತ್ತವೆ. ಅವುಗಳಿಗೆ ಟೀಕೆಯನ್ನು ಬರೆದರು. ಆಯಾ ವಚನಕಾರರ ವಚನಗಳನ್ನು ಸಂಭಾಷಣೆಗಳ ರೂಪವಾಗಿ ಜೋಡಿಸಿ ಅವುಗಳ ಹಿನ್ನೆಲೆಯಲ್ಲಿ ವಚನಕಾರರ ಚರಿತ್ರೆಗಳನ್ನು ಚಿತ್ರಿಸಿದರು.

ವಚನಗಳಲ್ಲಿ ಅಡಕವಾಗಿರುವ ಷಟ್‌ಸ್ಥಲ ತತ್ತ್ವವನ್ನು ದಾಹರಿಸಿ ಸಿದ್ಧಾಂತ ಗ್ರಂಥಗಳನ್ನು ಬರೆದರು. ಇವೇ ಮುಂತಾದ ಕಾರ್ಯಗಳನ್ನು ಭರದಿಂದ ಸಾಗಿಸಿದರು. ಮತ್ತೆ ಕೆಲವರು ಪುರಾತನ ವಚನಕಾರರ ಚರಿತ್ರೆಗಳನ್ನು ಕಾವ್ಯ, ಪುರಾಣ, ಹಾಡುಗಬ್ಬ, ಸಾಂಗತ್ಯ ಮೊದಲಾದ ರೂಪಗಳಲ್ಲಿ ರಚಿಸಿದರು. ಇಂತು ಹಲವುಯತ್ನ ಪ್ರಯತ್ನಗಳಿಂದ ಪದವರಿತು ಹವಣರಿದು ಪಾಕಗೊಳಿಸಿ ಬಗೆಬಗೆಯ ಪಡಿಪದಾರ್ಥಗಳಿಂದ ಕನ್ನಡ ಸಾಹಿತ್ಯ ದೇವಿಯ ಒಡಲವನ್ನು, ಮಡಿಲವನ್ನು, ತುಂಬಿದರು. ವಚನಕಾರರ ಸಂದೇಶವು ಬರಿ ಕನ್ನಡದಲ್ಲಿ ಮಾತ್ರವಲ್ಲದೆ ಸರ್ವತ್ರ ಪ್ರಚಾರವಾಗುವ ಹಾಗೆ ಸಂಸ್ಕೃತ ಸಿದ್ಧಾಂತ ಗ್ರಂಥಗಳ ರೂಪವಾಗಿ ಬರೆದರು. ಕನ್ನಡ ಸಾಹಿತ್ಯಕ್ಕೆ ಒಂದು ದಿವ್ಯವಾದ ತೇಜವನ್ನುಂಟುಮಾಡಿದರು.

೧೫-೧೬ನೆಯ ಶತಮಾನದಲ್ಲಿ ಹುಟ್ಟಿದ ಸ್ವಂತತ್ರ ವಚನಗಳಲ್ಲಿ ಮುಖ್ಯವಾದವುಗಳೆಂದರೆ ಮೊಗ್ಗಿಮಾಯಿದೇವನವಚನ, ಸೊಲಬಸವೇಶ್ವರನವಚನ, ಘನಲಿಂಗದೇವನವಚನ, ತೋಂಟದಸಿದ್ಧೇಶ್ವರನವಚನ, ಸ್ವತಂತ್ರ ಸಿದ್ಧಲಿಂಗೇಶ್ವರನವಚನ, ಎಮ್ಮೆ ಬಸವೇಶ್ವರನ ಕಾಲಜ್ಞಾನದ ವಚನಗಳು ಮತ್ತು ಮಹಾಲಿಂಗದೇವನ ಪ್ರಭುದೇವರ ಷಟ್‌ಸ್ಥಲ ಚಾರಿತ್ರವಚನದ ಟೀಕೆ. ಕುಮಾರಬಂಕನಾಥನ ಪ್ರಭುದೇವರ ಟೀಕಿನ ವಚನ ಕಲ್ಲುಮಠದ ಪ್ರಭುದೇವನ ಮಂತ್ರ. ಗೌಪ್ಯದ ಟೀಕೆ, ಮುಂತಾದವುಗಳು ಟೀಕಾಗ್ರಂಥಗಳಲ್ಲಿ ಮುಖ್ಯವಾದವುಗಳು. ಸಿದ್ಧಾಂತ ಗ್ರಂಥಗಳಲ್ಲಿ ಲಕ್ಕಣ್ಣ ದಂಡಾಧೀಶನ ಶಿವ ತತ್ತ್ವಚಿಂತಾಮಣಿ, ಜಕ್ಕಣಾಮಾತ್ಯನ ನೂರೊಂದು ಸ್ಥಲದ ಉತ್ಪತ್ತಿ, ಕಲ್ಲುಮಠದ ಪ್ರಭುದೇವನ ಲಿಂಗಲೀಲಾವಿಲಾಸ, ಮಾಯಿದೇವನ ಅನುಭವಸೂತ್ರ, ವಿಶೇಷಾರ್ಥ ಪ್ರಕಾಶಿಕೆ ಗುರುಬಸವನ ಯೋಗಾಂಗಭೂಷಣ, ತೋಂಟದ ಸಿದ್ಧಲಿಂಗನ ಷಟ್‌ಸ್ಥಲಜ್ಞಾನ ಸಾರಾಮೃತಸಾರ, ಮೊದಲಾದವು ಗಣ್ಯತೆಯನ್ನು ಪಡೆದಿರುತ್ತವೆ.

## ಸ್ಥಲ-ಕಟ್ಟು ೧೦.

ಸಚ್ಚಿದಾನಂದನೂ, ನಿತ್ಯಪರಿಪೂರ್ಣನೂ, ಅತ್ಯತಿಷ್ಠದಶಾಂಗುಲನೂ, ಅದ್ವಿತೀಯನೂ, ಪರಬ್ರಹ್ಮನೂ ನಿರ್ಮಲನೂ, ಮಹದಾದಿತತ್ತ್ವಗಳಿಗೆ

ನೆಲೆಯೂ, ಪ್ರಕೃತಿ ಪುರುಷಾತ್ಮಕ ವಿಶ್ವಕ್ಕೆಲ್ಲಲಯ ಜನ್ಮ ಭೂಮಿಯೂ ಆದ ಪರಶಿವನ ನಿಲುವಿಂಗೆ ಶಿವಶರಣರ ಪರಿಭಾಷೆಯಲ್ಲಿ ಸ್ಥಲವೆಂದು ಹೆಸರು.

ಪರಶಿವನ ಲೀಲಾವಿನೋದದಿಂದ ವಿಮರ್ಶಶಕ್ತಿಯು ಲಿಂಗ-ಅಂಗವೆಂದೆರಡಾಗಿ ತೋರಿತು. ಈ ಎರಡಳಿದು ಒಂದಾಗುವ ಬಗೆಯ ಅನುಭವವನ್ನು ಅಂಗೈಸಿಕೊಳ್ಳುವ ಕಟ್ಟಿನ ನಿಯಮಕ್ಕೆ ಸ್ಥಲಕಟ್ಟು ಎಂದು ಹೇಳಲಾಗಿದೆ. ನೂರೊಂದು ಸ್ಥಲದ ನಿರೂಪಣೆಯಾದರೂ ಷಟ್‌ಸ್ಥಲದ ಹೊಂದಿಕೆಯಲ್ಲಿಯೇ ಹೊರಹೊಮ್ಮಿದವುಗಳು. ಇದಲ್ಲದೆ ಸ್ಥಲಕಟ್ಟಿನ ವಿವೇಚನೆಯಲ್ಲಿಯೇ ೩-೬-೯-೧೮-೩೬-೨೧೬ ಸ್ಥಲಗಳು ಮತ್ತು ನಿಜಗುಣ ಸರ್ಪಭೂಷಣ ಶಿವಯೋಗಿಗಳು ಸೂಚಿಸಿರುವ ೫ ಸ್ಥಲಗಳು ಇವೆಲ್ಲವೂ ಷಟ್‌ಸ್ಥಲದ ಭದ್ರವಾದ ಅಸ್ತಿಭಾರದಲ್ಲಿ ಸ್ಥಲಕಟ್ಟಿನ ವಿಶಾಲವಾದ ವೈಭವಯುತವಾದ ಮಂದಿರಗಳು ನಿರ್ಮಿತವಾದವುಗಳಾಗಿರುತ್ತವೆ.[೪]

## ಮಲ್ಲಣ್ಣಗಳ ಸ್ಥಲಕಟ್ಟಿನ ನಿರೂಪಣೆ ೧೧.

ಮಲ್ಲಣ್ಣಕವಿಯು ಈ ಗಣಭಾಷಿತ ರತ್ನಮಾಲೆಯಲ್ಲಿ ಸ್ಥಲಗಳನ್ನು ಮಾರ್ಪಡಿಸಿ ಕೊಂಡಿರುತ್ತಾನೆ. ಈ ತೆರನಾದ ವಿಧಾನವು ಮತ್ತೆಲ್ಲಿಯೂ ಕಂಡು ಬರುವದಿಲ್ಲ. ಇಲ್ಲಿ ಅವನ ಪಾಂಡಿತ್ಯವನ್ನೂ ಪ್ರತಿಭೆಯನ್ನೂ ಹಾಗೂ ಅವನದೊಂದು ಹೊಸತಾದ ವಿಶಿಷ್ಟವಾದ ಅನುಭವದ ಕ್ರಮವನ್ನೇ ಕಾಣಬಹುದಾಗಿದೆ.

ಸರ್ವ ಧರ್ಮಶಾಸ್ತ್ರಗಳಲ್ಲಿ ಸಾಮಾನ್ಯ ವಿಶೇಷ ಧರ್ಮಗಳು ಪ್ರತಿಪಾದಿತವಾಗಿರುತ್ತವೆ. ಸಾಮಾನ್ಯ ಧರ್ಮಕ್ಕೆ ಸೀತಿ ಸತ್ಕ್ರಿಯೆಯೆಂದು ಕರೆಯು

---

೪. ಸ್ಥಲಕಟ್ಟಿನ ಸಾಹಿತ್ಯವು ಅಪಾರವಾಗಿದೆ ಈ ಬಗೆಗೆ ವಿದ್ವಾಂಸರಾದ ಧಾರವಾಡದ ಶ್ರೀ ವೀ. ರು. ಕೊಪ್ಪಳ ಎಂ. ಎ. ಬಿಟಿ. ಅವರು ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿಯ ಪತ್ರಿಕೆಯ ಸಂಪುಟ ೩ ಸಂಚಿಕೆ ೨ ರಲ್ಲಿ ವಿಮರ್ಶಾತ್ಮಕವಾದ ವಿಸ್ತೃತವಾದ ಲೇಖನವನ್ನು ಪ್ರಕಟಿಸಿರುತ್ತಾರೆ. ಅದರಿಂದ ಸ್ಥಲಕಟ್ಟಿನ ಇತಿಹಾಸವು ತಿಳಿಯುವಂತಿದೆ.

ತ್ತಾರೆ. ಸತ್ಕ್ರಿಯೆಯ ನೆಲಗಟ್ಟಿಲ್ಲದೆ ಧರ್ಮಮಂದಿರವನ್ನು ಕಟ್ಟಲು ಬಾರದು. ಸತ್ಕ್ರಿಯೆ ವಿರಹಿತವಾದ ಧರ್ಮ ಅಧರ್ಮ.

ಜೈನರು ಸಂಸಾರ ಬಂಧಪಾಪ ಪರಿಹಾರಕ್ಕಾಗಿ ಇರಬೇಕಾದ ಒಳ್ಳೆಯ ನಡತೆಗೆ 'ಸಮ್ಯಕ್ಚಾರಿತ್ರ' ವೆಂದು ಹೇಳುತ್ತಾರೆ. ಅಹಿಂಸೆ ಅಸ್ತೇಯ ಸೂನೃತ ಬ್ರಹ್ಮಚರ್ಯ ಅಪಗ್ರಹಗಳೇ ಪಂಚಮಹಾವ್ರತಗಳು. ಇಂತಹ ಸಚ್ಚರಿತ್ರದಿಂದ ಜೀವನು ಕೊಲಿಯಾಗುವನು ಇವನೇ ಮಹಾತ್ಮನು, ತೀರ್ಥಂಕರನು, ಜೀವನ್ಮುಕ್ತನು, ಉಪದೇಶಕನು ಎಂದು ಮುಂತಾಗಿ ಹೇಳುತ್ತಾರೆ.

ಬುದ್ಧನು ಮಾನವ ಜೀವನವೇ ದುಃಖಮಯವಾದದು. ಜನನ, ಜರಾ; ರೋಗ ಮರಣಗಳು ದುಃಖಮಯವಾದವುಗಳೆಂದು ಪ್ರತಿಪಾದಿಸಿದನು. ಸಂಸಾರದಿಂದ ಪಾರುಹೊಂದಿ ನಿರ್ವಾಣವನ್ನು ಹೊಂದಲಿಕ್ಕೆ ಸದಾಚಾರ, ಸತ್ಯಸಂಕಲ್ಪ, ಸತ್ಯ, ಅಹಿಂಸೆ, ದಯೆ, ದಾನ, ಮುಂತಾದ ಎಂಟು ಮಾರ್ಗಗಳನ್ನು ನಿಯೋಜಿಸಿರುತ್ತಾನೆ.

ಯೋಗ ಶಾಸ್ತ್ರಕಾರರಾದ ಹಿರಣ್ಯಗರ್ಭ, ಪಾತಂಜಲಿ ಮಹರ್ಷಿಗಳು, ಅಹಿಂಸಾ, ಸತ್ಯ, ಅಸ್ತೇಯ ಮೊದಲಾದ ಯಮ ನಿಯಮಗಳನ್ನು ಸಾಧಿಸದೆ ಯೋಗಾಭ್ಯಾಸಿಗೆ ಯೋಗಸಿದ್ಧಿ ಸದೆಂದು ಹೇಳಿರುತ್ತಾರೆ.

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯ ಬಡಬೇಡ
ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ
ಇದೇ ಅಂತರಂಗಶುದ್ಧಿ ಇದೇ ಬಹಿರಂಗಶುದ್ಧಿ"
ಎಂದು ಮುಂತಾಗಿ ಶಿವಶರಣರು ಸಂದೇಶವನ್ನಿತ್ತಿರುತ್ತಾರೆ

ತತ್ವ ಸತ್ಕ್ರಿಯೆಗಳೆರಡೂ ಜನಜೀವನದ ನಿತ್ಯದ ಬಳಕೆಯಲ್ಲಿ ಬೆಳೆದು ಬರಬೇಕೆಂಬುದೇ ಮಲ್ಲಣ್ಣಗಳ ಮನೀಷೆಯಾದುದರಿಂದ ಮನೋನಿರಸನಸ್ಥಲ, ಇಂದ್ರಿಯನಿರಸನಸ್ಥಲ, ಹಿಂಸಾನಿರಸನಸ್ಥಲ. ಹುಸಿನಿರಸನಸ್ಥಲ, ಕಳವುನಿರಸನಸ್ಥಲ, ಆಶಾನಿರಸನಸ್ಥಲ, ಪರದಾರನಿರಸನಸ್ಥಲ ಈ ಬಗೆಯಲ್ಲಿ ಕೆಲವು ಸ್ಥಲಗಳಿಂದ ಸಾಮಾನ್ಯ ಧರ್ಮವನ್ನು ಕೆಲವು ಸ್ಥಲಗಳಿಂದ ವಿಶೇಷಧರ್ಮವನ್ನು ಪ್ರತಿಪಾದಿಸಿರುತ್ತಾರೆ. ಆ ಸತ್ಕ್ರಿಯೆ, ತತ್ವ,

ಸಂಸ್ಕೃತಿಗಳ ಭೋಧೆಯು ಸುಲಭವಾದ ಸುಲಲಿತವಾದ ರೀತಿಯಲ್ಲಿ ಮುಮುಕ್ಷುವಿನ ಹೃದಯವನ್ನು ನೇರವಾಗಿ ಮುಟ್ಟಿ ತಟ್ಟಿ ಹಸನಾಗಿ ಮಾಡ ಬೇಕೆಂಬುದೇ ಈ ಬಗೆಯ ಸ್ಥಲಕಟ್ಟಿನ ರಚನೆಯ ರಹಸ್ಯವಾಗಿದೆ. ಇಲ್ಲಿ ಮಲ್ಲಣ್ಣಗಳ ತತ್ವಾಭ್ಯಾಸದ ತತ್ವಾಚರಣೆಯ ಆಳವಾದ ಅನುಭವವನ್ನು ಮುಮುಕ್ಷುವಿನಲ್ಲಿರುವ ಮಮತೆಯನ್ನು, ತತ್ವವಿವೇಚನೆಯ ವಿಚಕ್ಷಣತೆ ಯನ್ನು, ಬುದ್ಧಿಯ ಸಾಮರ್ಥ್ಯವನ್ನು ಒಂದು ನೂತನವಾದ ಮಾರ್ಗ ಕ್ರಮಣವನ್ನು, ಮಾರ್ಗದರ್ಶಿತ್ವವನ್ನು, ಧೈರ್ಯಕುಶಲತೆಗಳನ್ನು ಪ್ರದ ರ್ಶಿಸುತ್ತದೆ.

## ಗ್ರಂಥಸ್ವರೂಪು ೧೨.

ಈ "ಗಣಭಾಷಿತರತ್ನಮಾಲೆ"ಯಲ್ಲಿ ವೀರಶೈವ ತತ್ವವಿವೇಚನೆಯು ಸಪ್ರಮಾಣವಾದ, ಸಯುಕ್ತಿಕವಾದ, ಸವಿಸ್ತಾರವಾದ ರೀತಿಯಲ್ಲಿ ಸರಳ ವಾಗಿ ಪ್ರತಿಪಾದಿತವಾಗಿದೆ.

೧. ಅನುಭಾವಸ್ಥಲದಲ್ಲಿ ಆದ್ಯರ ವಚನಂಗಳು ಪಿರಿದು ವರ್ತಮಾ ನಾನುಭಾವಿಗಳ ನುಡಿಗಣದಿಂದಲ್ಲದೆ ದೇಹಾದಿಮಿಥ್ಯಂಗಳು ತೊಲಗಿ ಜೀವಭ್ರಾಂತಿಯಳಿದು ಮಹಾಲಿಂಗದೊಡತಣಸಂಗವು ಘಟಿಸದೆಂಬು ದನ್ನು.

೨. ಶರಣ ಸಂಗವಿಯೋಗಾವಸ್ಥಾಸ್ಥಲದಲ್ಲಿ— ಲಿಂಗಾನುಭಾವಿ ಗಳ ಸಂಗವನಗಲಿದಡೆ ಮಹಾದುಃಖವೆಂಬುದನ್ನು.

೩. ಶರೀರನಿರಸನಸ್ಥಲದಲ್ಲಿ— ಶರಣಸಂಗದಿಂದ ಉದಯವಾದ ಮಹಾಜ್ಞಾನಕ್ಕೆ ಅನ್ಯವಾದ ಮಾಯೆಯ ತೋರಿಕೆಯ ದೇಹಾದಿ ಮಿಥ್ಯಂಗಳು ಜಡವೆಂಬುದನ್ನು.

೪. ಮನೋ ನಿರಸನಸ್ಥಲದಲ್ಲಿ— ದೇಹವನವಲಂಬಿಸಿ ಮನವು ಸಕಲ ಪ್ರಪಂಚಿನಲ್ಲಿ ವಿಕಾರಿಸುತ್ತಿಹುದಾಗಿ ಮನವು ಭ್ರಾಂತೆಂದು.

೫. ಇಂದ್ರಿಯ ನಿರಸನಸ್ಥಲದಲ್ಲಿ— ಮನವನೆಮ್ಮಿ ತೋರುತ್ತಿಹ ಇಂದ್ರಿಯಂಗಳು ಸಕಲ ಜಿವರುಗಳಲ್ಲಿ ಹಿರಿಡು ಕಿರಿದೆನ್ನದೆ ಎಳತಟ ಗೊಳಿಸುತ್ತಿಹುದಾಗಿ ಆ ಇಂದ್ರಿಯಂಗಳು ಮಿಥ್ಯವೆಂದು.

೬. ಸಂಸಾರ ನಿರಸನಸ್ಥಲದಲ್ಲಿ— ಇಂದ್ರಿಯಂಗಳ ನಿಗ್ರಹಿಸದಿಪ್ಪ ಸಂಸಾರವು ನಿಸ್ಸಾರವೆಂಬುದನ್ನು.

೭. ಸಂಸಾರವ್ಯಾಪ್ತಿ ನಿರಸನಸ್ಥಲದಲ್ಲಿ— ಆ ಸಂಸಾರ ದೊಳಗಣ ವ್ಯಾಪ್ತಿಯ ನಿರಸನವನ್ನು.

೮. ನಿದ್ರಾ ನಿರಸನಸ್ಥಲದಲ್ಲಿ— ಆ ಸಂಸಾರ ವ್ಯಾಪ್ತಿಯ ಬೆಳೆ ಯಿಂದ ಸಕಲ ಪ್ರಾಣಿಗಳೂ ಮರೆದೊರಗಿ ಮತಿಭ್ರಷ್ಟರಾಗುವ ಹಾಗೆ ಮಾಡುವದು ನಿದ್ರೆಯೆಂದರಿದು ನಿದ್ರೆಯನಿರಸನವನ್ನು.

೯. ಆಶಾ ನಿರಸನಸ್ಥಲದಲ್ಲಿ- ಆ ಮರವೆಯು ನೈದಿಸುತ್ತಿದ್ದ ಸಂಸಾರ ವಾವುದರಿಂ ಕಾರಣವೆಂದು ಸ್ವಾನುಭಾವ ದೃಷ್ಟಿಯಿಂದ ನಿರೀಕ್ಷಿಸಿ ಆಶೆಯೇ ಕಾರಣವೆಂದರಿದು ಆಶೆಯ ಧಿಃಕರಿಸಿದುದನ್ನು.

೧೦. ದ್ವಂದ್ವಕರ್ಮ ನಿರಸನಸ್ಥಲದಲ್ಲಿ—ಆಶೆಯ ಉತ್ಪತ್ತಿ ಸ್ಥಾನ ವಾವುದೆಂದು ವಿಚಾರಿಸುವ ಸ್ವಾನುಭಾವಿಗಳಿಗೆ ಸುಖರೂಪದಿಂದ ತೋರು ತ್ತಿಹ ಸುಖವೇ ದುಃಖವಾಗಿಹುದೆಂಬುದನ್ನು.

೧೧. ತ್ರಿಬಂಧ ನಿರಸನಸ್ಥಲದಲ್ಲಿ— ಸುಖ ದುಃಖಂಗಳಿಗೆ ಕಾರ ಣವು ಹೊನ್ನು ಹೆಣ್ಣು ಮಣ್ಣುಗಳೆಂಬುದನರಿದು ಆ ಹೊನ್ನು ಹೆಣ್ಣು ಮಣ್ಣುಗಳ ನಿರಸನವನ್ನು.

೧೨. ಮಾಯಾವಿಲಾಸ ವಿಧಿಸ್ಥಲದಲ್ಲಿ— ಸಂಸಾರ ಪ್ರಪಂಚಿಕ ನೆಲ್ಲನಂ ಚೇಷ್ಟಿಸಿ ಜಗತ್ರಯವನೊಕ್ಕಲಿಕ್ಕಿ ಕೊಲ್ಲುತಿಪ್ಪುದೆಲ್ಲವು ಮಾಯೆ ಯೆಂಬುದನರಿದು ಆ ಮಾಯಾವಿಲಾಸ ವಿಧಿಯನೋಡಿ ಆಶ್ಚರ್ಯವನ್ನು.

೧೩. ಜನನ ಭಯಸ್ಥಲದಲ್ಲಿ— ಮಾಯೆಯ ವ್ಯವಹಾರದಿಂದ ಜೀವನು ಉದ್ಭಿಜ ಅಂಡಜ, ಸ್ವೇದಜ, ಜರಾಯುಜವೆಂಬ ಎಂಭತ್ತು ನಾಲ್ಕು ಲಕ್ಷಭೂತಗ್ರಾಮಂಗಳೊಳು ಪುಟ್ಟು ತಿಪ್ಪನ್ನಕ್ಕರ ಶರೀರಂಗಳಂ ತೊಟ್ಟು ಪರಿಭ್ರಮಣ ಗೊಂಬನೆಂಬ ಶಾಸ್ತ್ರೋಕ್ತಿಯನ್ನರಿದು ಆ ಜೀವಂಗೆ ಉತ್ಪತ್ತಿಯ ಭೀತಿಯನ್ನು.

೧೪. ಜ್ಞಾನಪರಾಮರಿಕೆಯ ಸ್ಥಲದಲ್ಲಿ— ಆ ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳೊಳಗೆ ಉತ್ತಮ ಶರೀರಿಯಾದ ಮಾನವನಾಗಿ ಹುಟ್ಟಿಯೂ ಶಿವಜ್ಞಾನ ವಿಲ್ಲದೆ ಕೆಟ್ಟು ಹೋಹುದು ಪ್ರಯೋಜನವಲ ವೆಂಬುದನ್ನು

೧೫. ಶಿವಕಾರುಣ್ಯಾಹ್ವಾನಸ್ಥಲದಲ್ಲಿ— ಆ ಭ ವ ಜಾ ಡ್ಯ ತೆ ಯ

ಜೀವನ ಬುಧ್ಯನುಮಾನ ಒಂದರಲ್ಲಿಯೇ ಬಿಡದಾದ ಕಾರಣ ಪರಶಿವನ ಕರುಣಾ ಕಟಾಕ್ಷವ ನಾಹ್ವಾನಿಸಬೇಕೆಂಬುದನ್ನು.

೧೬. ದೃಷ್ಟನಷ್ಟಸ್ಥಲದಲ್ಲಿ— ಶಿವಕಾರುಣ್ಯದಿಂದುದಯವಾದ ವಿರಕ್ತಿಜ್ಞಾನದಿಂ ದೇಹಾದಿ ಪ್ರಪಂಚಿಕ ತೋರಿಕೆಯುಳ್ಳವು ನಷ್ಟವಹುದೇ ದೃಷ್ಟವೆಂಬುದನ್ನು.

೧೭. ವೈರಾಗ್ಯಸ್ಥಲದಲ್ಲಿ— ನಷ್ಟವಾಗುವ ಪ್ರಪಂಚಿನಲ್ಲಿ ಮನವ ನಿಕ್ಕಿ ಸತ್ತು ಹೋಗಲಾಗದೆ ಸಕಲ ಸಂಸಾರ ಬಂಧನವ ಹರಿದು ತಥ್ಯ ಮಿಥ್ಯಂಗಳಂ ತೊರೆದು ಶಿವಾರ್ಚನಾ ತತ್ಪರಾಯಣತ್ವವ ಪಡೆವುದಕ್ಕೆ ವೈರಾಗ್ಯವೇ ಕಾರಣವೆಂಬುದನ್ನು.

೧೮. ಅನರ್ಘಜೀವಿತಸ್ಥಲದಲ್ಲಿ— ವೈರಾಗ್ಯವಿಡಿದು ಶಿವಾರ್ಚನೆಯ ಮಾಡುವವರುಗಳ ಜೀವನವೇ ಜೀವನವಲ್ಲದೆ ಉಳಿದಂತೆ ಜೀವಿಸುವರುಗಳ ಜೀವನವ ಪ್ರಯೋಜನ ವೆಂಬುದನ್ನು.

೧೯. ಅನ್ಯದೈವ ನಿರಸನಸ್ಥಲದಲ್ಲಿ— ದೇವತಾಲಕ್ಷಣವು ಶ್ರೀ. ಮಹಾದೇವರಿಗಲ್ಲದೆ ಉಳಿದ ಬ್ರಹ್ಮ ವಿಷ್ಣ್ವಾದಿ ದೇವತೆಗಳಿಗೆ ಇಲ್ಲವೆಂಬುದನ್ನು ವಿಷ್ಣ್ವಾದಿಗಳ ಹುಟ್ಟಿಸುವ ಕಾವ ಕೊಲುವದಕ್ಕೆ ಶಿವನೆ ಕರ್ತನೆಂಬುದನರಿದು ಶಿವಗನ್ಯರಾದ ಅಲ್ಪದೇವತೆಗಳಿಗೆ ದೇವತ್ವವಿಲ್ಲವೆಂಬುದನ್ನು.

೨೦. ಅನ್ಯದೇವತಾಭಜನ ನಿರಸನಸ್ಥಲದಲ್ಲಿ— ಶ್ರೀ ಮಹಾದೇವನೊಬ್ಬನೇ ಪೂಜಾಯೋಗ್ಯನಲ್ಲದೆ ಮಿಕ್ಕಾದ ದೇವತೆಗಳಿಗೆ ಪೂಜೆಸಲ್ಲದೆಂಬುದನ್ನು.

೨೧. ಶಿವಲಿಂಗಾಚನಪ್ರತಿಷ್ಠಾಸ್ಥಲದಲ್ಲಿ— ಪೂಜೆಗೆಯೋಗ್ಯವಾದ ಶ್ರೀಮಹಾದೇವನ ಆರಾರು ಪೂರ್ವದಲ್ಲಿ ಪೂಜಿಸಿದರೆಂದಡೆ ದೇವದಾನವ ಮಾನವರು ಭಜಿದರೆಂಬುದನ್ನು.

೨೨. ವಾಗದ್ವೈತ ನಿರಸನಸ್ಥಲದಲ್ಲಿ— ಶಿವಲಿಂಗಾರ್ಚನೆಯ ದೆಶೆಯಿಂದ ಮಹದೈಶ್ವರ್ಯ ಪದಂಗಳಂ ಪಡೆದು ದೇವದಾನವ ಮಾನವರೆಲ್ಲರು ಅಹಂಬ್ರಹ್ಮವೆಂದು ಕೆಟ್ಟರೆಂಬುದನ್ನು.

೨೩. ಶೂನ್ಯಸ್ಥಲದಲ್ಲಿ— ಪರಬ್ರಹ್ಮದೊಡನೆ ದೇವದಾನವ ಮಾನವರು ಸರಿಯಿಲ್ಲವೆಂಬುನ್ನು.

೨೪. ಸ್ವಯಂಭುಲಿಂಗ ಉಮಾಪತಿಸ್ಥಲದಲ್ಲಿ— ಶಿವನು ತನ್ನ ಲೀಲೆಯಿಂದ ಜಗತ್ತಂ ಸೃಷ್ಟಿಸಬೇಕಾಗಿ ಸಾಕಾರ ಮೂರ್ತಿಯಾದ ನೆಂಬುದನ್ನು.

೨೫. ವಿಶ್ವೋತ್ಪತ್ತಿಸ್ಥಲದಲ್ಲಿ— ಪಾರ್ವತೀ ವಲ್ಲಭನು ಸಚರಾ ಚರವೆಲ್ಲವ ರಚಿಸಿದನೆಂಬುದನ್ನು.

೨೬. ದೇಹದೇಹಿಗಳುತ್ಪತ್ತಿಸ್ಥಲದಲ್ಲಿ— ಪರಮೇಶ್ವರನು ದೇವ ದಾನವ ಮಾನವರೆಲ್ಲರ ಉತ್ಪತ್ತಿ ಮಾಡಿದನೆಂಬುದನ್ನು.

೨೭. ಅಷ್ಟಮೂರ್ತಿ ನಿರಸನಸ್ಥಲದಲ್ಲಿ—ದೇವದಾನವ ಮಾನವರ ಶಿವನೆನ್ನ ಲಾಗದೆಂಬುದನ್ನು.

೨೮. ಸರ್ವಗತ ನಿರಸನಸ್ಥಲದಲ್ಲಿ— ಶಿವನಿಂದ ಉತ್ಪತ್ತಿಯಾದ ಸಮುಸ್ತ ಜೀವಜಂತುಗಳನ್ನು ಶಿವನೆನ್ನ ಲಾಗದೆಂಬುದನ್ನು.

೨೯. ವಿದ್ಯಾವಾದ ನಿರಸನಸ್ಥಲದಲ್ಲಿ— ಶಿವನಿಂದಲಾದ ಸಮುಸ್ತ ವಿದ್ಯಂಗಳ ನರಿದಾತನು ಶಿವಂಗೆ ಸಮವಲ್ಲೆಂಬುದನ್ನು.

೩೦. ಕರ್ಮವಾದ ನಿರಸನಸ್ಥಲದಲ್ಲಿ— ಶಿವನಿಂದಾದ ತೀರ್ಥ ಯಾತ್ರೆ ಜಪ ತಪ ನಿತ್ಯ ಕರ್ಮಂಗಳ ಮಾಡುವಾತ ಲಿಂಗ ಭಕ್ತಂಗೆ ಸರಿಯಲ್ಲ ವೆಂಬುದನ್ನು.

೩೧. ಕರ್ಮಯೋಗನಿರಸನಸ್ಥಲದಲ್ಲಿ- ಕರ್ಮವಾದಮಂಬಿಟ್ಟು ಲಿಂಗಭಕ್ತನಾದೆ ನೆಂಬುವಂಗೆ ಅಷ್ಟಾಂಗಯೋಗಸಲ್ಲದೆಂಬುದನ್ನು.

೩೨. ಊರ್ಧ್ವ ಪುಂಡ್ರ ನಿರಸನಸ್ಥಲದಲ್ಲಿ— ಕರ್ಮಯೋಗ ಮಂಬಿಟ್ಟು ಲಿಂಗಭಕ್ತನಾದೆ ನೆಂಬುವಂಗೆ ಶಂಖ ಚಕ್ರಾದಿಗಳಾದ ಆಯುಧಂಗಳಿಂದ ಒಡಲು ಮುಡುಹಂ ಸುಡಿಸಿಕೊಂಬುದು ಕ್ರಮ ವಲ್ಲೆಂಬುದನ್ನು.

೩೩. ಅದೀಕ್ಷಾಲಿಂಗಾರ್ಚನ ನಿರಸನಸ್ಥಲದಲ್ಲಿ—ಊರ್ಧ್ವ ಪುಂಡ್ರ ಮಂಬಿಟ್ಟು ಶಿವಭಕ್ತನಾದೆ ನೆಂಬಾತಂಗೆ ಗುರುವಿಲ್ಲದೆ ಲಿಂಗವನರ್ಚಿಸ ಲಾಗದೆಂಬುದನ್ನು.

೩೪. ಶೈವದೀಕ್ಷಾ ನಿರಸನಸ್ಥಲದಲ್ಲಿ— ಗುರುಕಾರುಣ್ಯ ವಿಡಿದು ಭಕ್ತನಾಗಿ ಲಿಂಗಾರ್ಚನೆಯಂ ಮಾಡುವೆನೆಂಬಾತನು ಅನ್ಯದರ್ಶನಂಗ ಳಲ್ಲಿ ದೀಕ್ಷೆಯಾಗಲಾಗದೆಂಬುದನ್ನು.

೩೫. ಪುನರ್ದೀಕ್ಷಾ ಪ್ರಸ್ತಾಪಸ್ಥಲದಲ್ಲಿ—ಶೈವಗುರುವಿನ ಕೈಯಲ್ಲಿ ಸಾಹಿತ್ಯವಾದ ಲಿಂಗವನು ವೀರಶೈವ ಗುರುವಿನ ಕೈಯಲ್ಲಿ ಕೊಟ್ಟು ಕೊಳಬೇಕೆಂಬುದನ್ನು.

೩೬. ಭವಿಸಂಗ ನಿರಸನಸ್ಥಲದಲ್ಲಿ—ಶೈವದೀಕ್ಷೆಯಂ ಬಿಟ್ಟು ಪುನರ್ದೀಕ್ಷೆಯಾದೆನೆಂಬಾತಂಗೆ ಇತರ ಭವಿಗಳೊಡತಣಸಂಗವು ಪ್ರಯೋಜನವಲ್ಲೆಂಬುದನ್ನು.

೩೭. ಭವಿಪಾಕ ನಿರಸನಸ್ಥಲದಲ್ಲಿ— ಭವಿಗಳು ತಮ್ಮ ಉದ್ಧಾರಕ್ಕಾಗಿ ಮಾಡುವ ಅಪವಿತ್ರಪಾಕಗಳನು ಸದಾಚಾರ ಸನ್ನಿತರು ತಮ್ಮ ಲಿಂಗಕ್ಕೆ ಕೊಡುವುದು ಅಕ್ರಮವೆಂಬುದನ್ನು.

೩೮. ಪರದಾರ ನಿರಸನಸ್ಥಲದಲ್ಲಿ—ಭವಿಗಳು ವರ್ತಿಸುವ ಪಂಚಮಹಾ ಪಾತಕಂಗಳಂ ಬಿಟ್ಟಲ್ಲದೆ ಶಿವಾಚಾರ ನೆಲೆಗೊಳ್ಳದು. ಅವಾವೆಂದಡೆ ಪರದಾರ, ಕಳವು, ಹುಸಿ, ಹಿಂಸೆ, ತಾಮಸ, ಭಕ್ತಸಂಗವೆಂಬಿವರಿಂದ ಮನವು ದುರ್ವ್ಯಾಪಾರಕ್ಕೊಳಗಾಗಿ ಕೆಡುವುದೆಂಬುವನರಿದು ಅನ್ಯ ಸ್ತ್ರೀಯರುಗಳಲ್ಲಿ ವರ್ತಿಸುವದು ಶಿವಭಕ್ತರುಗಳಿಗೆ ಕಷ್ಟಗುಣವೆಂಬುದನ್ನು.

೩೯. ಕಳವು ನಿರಸನಸ್ಥಲದಲ್ಲಿ— ಪರದಾರವಂ ಬಿಟ್ಟು ಲಿಂಗಸಾಹಿತ್ಯವಾದೆನೆಂಬಾತಂಗೆ ಕಳವುಶೌಚವಂ ಕೆಡಿಸುವದೆಂಬುದನ್ನರಿದು ಇನ್ನು ಕಳವ ಶಿವಭಕ್ತರು ಬಿಡಬೇಕೆಂಬುದನ್ನು.

೪೦. ಹುಸಿ ನಿರಸನಸ್ಥಲದಲ್ಲಿ— ಕಳವ ಬಿಟ್ಟು ಶಿವಭಕ್ತನಾದೆನೆಂಬುವಂಗೆ ಹುಸಿಯುವಾಕ್ಯ ಚಿತ್ತವಂ ಕೆಡಿಸುವುದೆಂಬುದನರಿದು ಹುಸಿಯ ಬಿಡಬೇಕೆಂಬುದನ್ನು.

೪೧. ಹಿಂಸಾ ನಿರಸನಸ್ಥಲದಲ್ಲಿ— ಹುಸಿಯಂ ಬಿಟ್ಟು ಶಿವಭಕ್ತನಾದೆನೆಂಬುವಂಗೆ ಹಿಂಸೆಯು ಹೊಲ್ಲವೆಂಬುದನರಿದು ಹಿಂಸೆ ಭಕ್ತರ್ಗೆ ಯೋಗ್ಯವಲ್ಲವೆಂಬುದನ್ನು.

೪೨. ತಾಮಸಭಕ್ತಸಂಗ ನಿರಸನಸ್ಥಲದಲ್ಲಿ— ಅನ್ಯಶೈವ, ಭವಿಸಂಗ, ಭವಿಪಾಕ, ಪರದಾರ, ಕಳವು, ಹಿಂಸ, ಹುಸಿಯೆಂಬೀ ಸಪ್ತಮಹಾಪಾತಕಂಗಳಂ ಬಿಟ್ಟಂತಹ ಸದಾಚಾರ ಸದ್ಭಕ್ತರು ಸದಾಚಾರ ಸಂಪನ್ನ

ರಲ್ಲದ ಅಸಾಚಾರ ಸಂಬಂಧಿಗಳೊಡನೆಸಂಗಮಂ ಮಾಡಲಾಗದೆಂಬು ದನ್ನು.

೪೩. ತಾಮಸದೀಕ್ಷಾ ಸಿರಸನಸ್ಥಲದಲ್ಲಿ— ಸದ್ಭಕ್ತಿ ಸಂಪನ್ನ ರಾಗಿರ್ದವರುಗಳು ಶಿವಾಚಾರ ಪಥವ ನರಿಯದ ಗುರುವಿನಲ್ಲಿ ಕಾರು ಣ್ಯವ ಪಡೆಯಲಾಗದು. ಅದು ಕಾರಣ ಹೀನರಾದ ಭವಭಾರಿಗಳಿಗೆ ಶಿವ ಪಥವ ಬಲ್ಲಂತಹ ಗುರುಸಾಹಿತ್ಯವ ಮಾಡಲಾಗದೆಂಬುದನ್ನು.

೪೪. ಸಹಜದೀಕ್ಷಾ ಸ್ಥಲದಲ್ಲಿ— ಸಹಜ ಭಕ್ತರುಗಳಿಗೆ ನಿಜ ದೇಶಿಕೇಂದ್ರನು ಮಾಡುವ ದೀಕ್ಷಾ ವಿಧಾನವನ್ನು.

೪೫. ದೀಕ್ಷಾವಿಧಿ ಕ್ರಮಸ್ಥಲದಲ್ಲಿ— ಸಜ್ಜನ ಶುದ್ಧ ಶಿವಾಚಾರ ಸಂಪನ್ನರುಗಳಿಗೆ ಮಹಾದೇಶಿಕೇಂದ್ರನು ಮಾಡಿದ ದೀಕ್ಷಾವಿಧಾನವನ್ನು.

೪೬. ಗುರುಶಿಷ್ಯ ಪ್ರವೇಶಸ್ಥಲದಲ್ಲಿ— ನಿರ್ಮಲಾತ್ಮಕರಾದ ಶಿಷ್ಯೋತ್ತಮರುಗಳನ್ನು ಶ್ರೀಗುರು ದೀಕ್ಷಾವಿಧಾನದಿಂದ ತನ್ನಂತೆ ಮಾಡಿಕೊಂಡ ಪರಿಯನ್ನು.

೪೭. ಗುರುಮಹಾತ್ಮ್ಯಸ್ಥಲದಲ್ಲಿ— ಶ್ರೀಗುರು ಮೂರ್ತಿಯ ಮಹಾತ್ಮ್ಯೆಯನ್ನು.

೪೮. ವಿಭೂತಿಮಹಾತ್ಮ್ಯೆ ಸ್ಥಲದಲ್ಲಿ— ಶ್ರೀಗುರು ತಚ್ಛಿಷ್ಯನ ಅಂಗದ ಮೇಲೆ ಧರಿಸಿದ ಭಸ್ಮದ ಮಹಾತ್ಮ್ಯೆಯನು.

೪೯. ರುದ್ರಾಕ್ಷಮಹಾತ್ಮ್ಯೆ ಸ್ಥಲದಲ್ಲಿ— ಶ್ರೀ ವಿಭೂತಿಯಂ ಧರಿಸಿದ ಶಿವಭಕ್ತರು ರುದ್ರಾಕ್ಷಿಯಂ ಧರಿಸಬೇಕೆಂಬುದನ್ನು.

೫೦. ಪಂಚಾಕ್ಷರಿಮಾಹಾತ್ಮ್ಯೆ ಸ್ಥಲದಲ್ಲಿ— ರುದ್ರಾಕ್ಷಿಯಂ ಧರಿ ಸಿದಾತನು ಏಳು ಕೋಟಿ ಮಹಾಮಂತ್ರಂಗಳಿಗೆಯು ಉಪಮಂತ್ರ ಕೋಟ್ಯಾನು ಕೋಟಿಗಳಿಗೆಯು ಪಂಚಾಕ್ಷರಿಯುಮಂತ್ರವೇ ಮಹಾಘನ ಮಹಿಮೆಯುಳ್ಳದೆಂಬುದನರಿದು ವಿಶ್ವಾಸದಿಂದ ಶಿವಭಕ್ತರು ಜಪಿಸ ಬೇಕೆಂಬುದನ್ನು.

೫೧. ಲಿಂಗಧಾರಣ ಮಹಾತ್ಮ್ಯೆ ಸ್ಥಲದಲ್ಲಿ— ಪಂಚಾಕ್ಷರಿಯುಂಜ ಪಿಸಿದಾತನು ಶ್ರೀಗುರುಕೃಪೆಯಿಂದ ವ್ಯಕ್ತೀಕರಿಸಿ ಕೊಟ್ಟಲಿಂಗವೇ ಕೇವಲ ಬ್ರಹ್ಮವೆಂದು ಲಿಂಗವಧರಿಸ ಬೇಕೆಂಬುದನ್ನು.

೫೨. ಶಿವಲಿಂಗಾರ್ಚನಾಸ್ಥಲದಲ್ಲಿ— ಶಿವಲಿಂಗಾರ್ಚನೆಗೆ ಸಮ ವಾದ ಪುಣ್ಯವಿಲ್ಲೆಂಬುದನರಿದು ಶಿವಭಕ್ತರು ವಿಶ್ವಾಸದಿಂದ ಶಿವಲಿಂಗಕ್ಕೆ ಅರ್ಚನೆ ಪೂಜೆನೆಯ ಮಾಡಬೇಕೆಂಬುದನ್ನು.

೫೩. ಲಿಂಗಾರ್ಪಿತಸ್ಥಲದಲ್ಲಿ— ಶಿವಲಿಂಗಾರ್ಚನೆಯ ಮಾಡಿದಾ ತನು ಸಕಲದ್ರವ್ಯಂಗಳಂ ಲಿಂಗಕ್ಕೆ ಕೊಟ್ಟಲ್ಲದೆ ಕೊಳಲಾಗದೆಂಬುದನ್ನು.

೫೪. ಪಾದೋದಕ ಮಹಾತ್ಮ್ಯೆಸ್ಥಲದಲ್ಲಿ— ಲಿಂಗಾರ್ಪಿತವಂ ಮಾಡಿದಾತನು ಪಾದ ತೀರ್ಥದೊಡನೆ ಸಮಸ್ತ ತೀರ್ಥಂಗಳು ಸಮಭಾರ ವೆಂಬುದನರಿದು ಶಿವಭಕ್ತರು ವಿಶ್ವಾಸದಿಂದ ಶಿವಪಾದೋದಕಮಂ ಕೊಳ್ಳಬೇಕೆಂಬುದನ್ನು.

೫೫. ಪ್ರಸಾದ ಮಹಾತ್ಮ್ಯೆಸ್ಥಲದಲ್ಲಿ– ಪಾದೋದಕಮಂ ಕೊಂಬ ಶಿವಭಕ್ತರು ಶಿವಪ್ರಸಾದವ ಕೊಳಬೇಕೆಂಬುದನ್ನು.

೫೬. ಸದ್ಭಕ್ತ ವರ್ಣಾಧಿಕ್ಯಸ್ಥಲದಲ್ಲಿ— ಸಹಜಗುರುವಿನ ಕೈ ಯಲ್ಲಿ ಕಾರುಣ್ಯಮಂ ಪಡೆದು ವಿಭೂತಿ ರುದ್ರಾಕ್ಷಿಯಂ ಧರಿಸಿ ಪಂಚಾ-ಕ್ಷರಿಯಂ ಜಪಿಸಿ, ಲಿಂಗಮಂ ಧರಿಸಿಕೊಂಡು ಲಿಂಗಾರ್ಚನೆಯಂ ಮಾಡಿ ಲಿಂಗಕ್ಕರ್ಪಿಸಿ, ಪಾದೋದಕಮಂ ಕೊಂಡು ಪ್ರಸಾದಮಂ ಸ್ವೀಕರಿಸಿ ಶಿವಭಕ್ತಿಸಂಪನ್ನರಾದ ವೀರಮಾಹೇಶ್ವರರುಗಳು ಸಮಸ್ತ ವರ್ಣಗಳಿಂದಧಿ ಕರೆಂಬುದನ್ನು.

೫೭. ಪೂರ್ವಾಶ್ರಮ ನಿರಸನಸ್ಥಲದಲ್ಲಿ-ಶ್ರೀಗುರು ಹಸ್ತಸರೋಜ ಸಂಭವರಾದ ವೀರಮಾಹೇಶ್ವರರುಗಳೇ ಜಾತಿವರ್ಣರಹಿತರೆಂಬುದನ್ನು.

೫೮. ಗುರುಭಕ್ತಿ ಶುಶ್ರೂಷಾಸ್ಥಲದಲ್ಲಿ— ಪೂರ್ವಾಶ್ರಯವ ಬಿಟ್ಟ ಸದ್ಭಕ್ತನು ಸದ್ಗುರುವಿನ ಸೇವೆಯನ್ನು ಮಾಡಬೇಕೆಂಬುದನ್ನು.

೫೯. ಪಾತ್ರಾಪಾತ್ರ ವಿವರಣಸ್ಥಲದಲ್ಲಿ— ಗುರುಭಕ್ತಿ ಸಂಪನ್ನ ರಾದ ವೀರಮಾಹೇಶ್ವರರು ಅಪಾತ್ರದಾನವ ಮಾಡುವದು ಕ್ರಮವಲ್ಲ ವೆಂಬುದನ್ನು.

೬೦. ತಾಮಸಭಕ್ತ ನಿರಸನಸ್ಥಲದಲ್ಲಿ— ಅಂಗದ ಮೇಲೆ ಲಿಂಗ ವಿದ್ದು ಶಿವಾಚಾರದ ಸಕೀಲವನರಿದಾಚರಿಸಲರಿಯದೆ ತಾಮಸಿಗಳಾ ಗಿರ್ದವರು ಸದ್ಭಕ್ತಿಸ್ಥಲಕ್ಕೆ ಸಲ್ಲರೆಂಬುದನ್ನು.

೬೧. ತಾಮಸಮಾಹೇಶ ನಿರಸನಸ್ಥಲದಲ್ಲಿ— ತಾಮಸ ಭಕ್ತಂಗೆ ಶಿವ ಭಕ್ತಿನಿಷ್ಠೆ ದೊರಕೊಳ್ಳದೆಂಬುದನ್ನು.

೬೨. ತಾಮಸಪ್ರಸಾದ ನಿರಸನಸ್ಥಲದಲ್ಲಿ— ತಾಮಸ ಮಾಹೇಶ್ವ ರಂಗೆ ಪ್ರಸಾದ ನಿಷ್ಠೆ ದೊರಕೊಳ್ಳದೆಂಬುದನ್ನು.

೬೩. ತಾಮಸಪ್ರಾಣಲಿಂಗಿ ನಿರಸನಸ್ಥಲದಲ್ಲಿ— ತಾಮಸ ಪ್ರಸಾ ದಿಗೆ ಪ್ರಾಣಲಿಂಗ ನಿಷ್ಠೆ ದೊರಕೊಳ್ಳದೆಂಬುದನ್ನು.

೬೪. ತಾಮಸಶರಣ ನಿರಸನಸ್ಥಲದಲ್ಲಿ–ತಾಮಸ ಪ್ರಾಣ ಲಿಂಗಿಗೆ ಶರಸ್ಥಲ ನೆಲೆಗೊಳ್ಳದೆಂಬುದನ್ನು.

೬೫. ತಾಮಸೈಕ್ಯ ನಿರಸನಸ್ಥಲದಲ್ಲಿ— ತಾಮಸ ಶರಣಂಗೆ ಐಕ್ಯ ಸ್ಥಲ ಅಳವಡದೆಂಬುದನ್ನು.

೬೬. ಸ್ಥಾವರಲಿಂಗಪೂಜಾ ನಿರಸನಸ್ಥಲದಲ್ಲಿ— ಐಕ್ಯನು ಏಕ ಲಿಂಗನಿಷ್ಠಾ ಪರತ್ವಮಂ ದೃಢಕರಿಸಬೇಕಾಗಿ ಕ್ಷೇತ್ರಲಿಂಗಗಳ ಸಮಭ್ಯರ್ಚಿ ಸಲಾಗದೆಂಬುದನ್ನು.

೬೭. ಉಪವಾಸ ನಿರಸನಸ್ಥಲದಲ್ಲಿ—ಏಕಲಿಂಗ ನಿಷ್ಠಾಪರರಪ್ಪ ಶಿವಭಕ್ತರು ತಿಥಿವಾರಂಗಳ ಮಾಡಲಾಗದೆಂಬುದನ್ನು

೬೮. ಶಿವಲಿಂಗಾರ್ಚನಾ ವಿಧಿಕ್ರಮಸ್ಥಲದಲ್ಲಿ— ಉಪವಾಸಾದಿ ಕರ್ಮಗಳಂ ಬಿಟ್ಟ ಸದ್ಭಕ್ತರು ತಮ್ಮ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಶೋಡಶೋಪಚಾರ ಕ್ರಿಯೆಗಳ ಮಾಡಬೇಕೆಂಬುದನ್ನು.

೬೯. ಶಿವಲಿಂಗಪೂಜಾ ಶ್ರದ್ಧಾಸ್ಥಲದಲ್ಲಿ— ಕ್ರಮವಿಡಿದು ಶಿವ ಲಿಂಗಾರ್ಚನೆಯಂ ಮಾಡುವಲ್ಲಿ ಅಷ್ಟ ವಿಧಾರ್ಚನೆ ಶೋಡಶೋಪ ಚಾರಂಗಳಿಂದ ಮಾಡಬೇಕೆಂಬುದನ್ನು.

೭೦. ಅಭಿನ್ನ ಲಿಂಗಸ್ಥಲದಲ್ಲಿ— ಇಷ್ಟ ಲಿಂಗಮಂ ಪ್ರಾಣದ ಮಧ್ಯದಲ್ಲಿ ಧರಿಸಿ ಪೂಜಿಸುತ್ತಿರಲು ಇಷ್ಟ ಪ್ರಾಣಕ್ಕೆ ಭಿನ್ನವಿಲ್ಲೆಂದರಿ-ಯದೆ ಇಷ್ಟಲಿಂಗ ಪತನವಾಯಿತೆಂದು ಪ್ರಾಣತ್ಯಾಗಮಂ ಮಾಡಲಾಗ ದೆಂಬುದನ್ನು.

೭೧. ಜಂಗಮಲಿಂಗ ಶ್ರದ್ಧಾಸ್ಥಲದಲ್ಲಿ— ಜಂಗಮ ಲಿಂಗವೇ ಸದ್ಭಕ್ತನ ಪ್ರಾಣಸ್ವರೂಪವೆಂಬುದನ್ನು.

೭೨. ಜಂಗಮ ಲಿಂಗಾರ್ಪಿತಸ್ಥಲದಲ್ಲಿ- ಜಂಗಮಲಿಂಗಕ್ಕೆ ಸಕಲ ಭೋಗಂಗಳಂ ಕೊಟ್ಟಲ್ಲದೆ ಕೊಳಲಾಗದೆಂಬುದನ್ನು.

೭೩. ತೀರ್ಥಪ್ರಸಾದ ಲಿಂಗಾರ್ಪಿತಸ್ಥಲದಲ್ಲಿ— ಜಂಗಮಲಿಂಗದ ಪಾದತೀರ್ಥ ಪ್ರಸಾದಮಂ ಇಷ್ಟಲಿಂಗಕ್ಕೆ ಕೊಟ್ಟಲ್ಲದೆ ಕೊಳಲಾಗ ದೆಂಬುದನ್ನು.

೭೪. ತಾಮಸಶೀಲ ನಿರಸನಸ್ಥಲದಲ್ಲಿ—ಜಂಗಮಲಿಂಗಕ್ಕೆ ಸಕಲ ಪದಾರ್ಥಂಗಳಂ ಸಮರ್ಪಿಸಿ ಪ್ರಸಾದಮಂ ಕೊಂಬುದು ಇಂತಲ್ಲದೆ ಜಂಗಮ ಪ್ರಸಾದವಿರಹಿತವಾಗಿ ಕೊಂಡನಾದರೆ ಆ ಭಕ್ತಂಗೆ ಪ್ರಸಾದ ವಿಲ್ಲೆಂಬುದನ್ನು.

೭೫. ತಾಮಸ ಸಹ ಭೋಜನ ನಿರಸನಸ್ಥಲದಲ್ಲಿ— ಶಿವಭಕ್ತರು ಭಯವ ಮರೆದು ಲಿಂಗದೊಡನೆ ಸಹಭೋಜನವಂ ಮಾಡುವದು. ಶಿವನ ಕಾರುಣ್ಯಕ್ಕೆ ದೂರವಪ್ಪುದರಿಂದಲೇ ಭಕ್ತಂಗೆ ಭಯ ಭೀತಿಯೇ ಕಾರಣ ವೆಂಬುದನ್ನು.

೭೬. ವಾಗದ್ವೈತ ನಿರಸನಸ್ಥಲದಲ್ಲಿ— ಸತ್ಕ್ರಿಯಾ ಮಾರ್ಗ ದೊಡನೆ ಗುರುಲಿಂಗ ಜಂಗಮಕ್ಕೆ ದಾಸೋಹವ ಮಾಡುವಾತನೇ ಸದ್ಭ ಕ್ತನು ಉಳಿದಂತೆ ಗುರುಲಿಂಗಜಂಗಮಕ್ಕೆ ದಾಸೋಹವಲ್ಲದೆ ವಾಗದ್ವೈತ ವನುಡಿವಾತನು ಸದ್ಭಕ್ತಸ್ಥಲಕ್ಕೆ ಸಲ್ಲನೆಂಬುವನ್ನು.

೭೭. ತಾಮಸ ಸ್ವಾನುಭಾವ ನಿರಸನಸ್ಥಲದಲ್ಲಿ— ಗುರುಲಿಂಗ ಜಂಗಮದ ನೆಲೆಯ ನರಿಯದೆ ಬರಿಯ ಮಾತನೆ ಪಸರಿಸುವ ನುಡಿಯು ಸಲ್ಲದೆಂಬುದನ್ನು.

೭೮. ದಾಸೋಹ ಪ್ರತಿಷ್ಠಾಸ್ಥಲದಲ್ಲಿ— ಸದ್ಭಕ್ತನು ಗುರುಲಿಂಗ ಜಂಗಮಕ್ಕೆ ದಾಸೋಹವಿಲ್ಲದೆ ಸಂಸಾರಕ್ಕಾಗಿ ಬದುಕುವದು ಅಪ್ರಯೋ ಜನವೆಂಬುದನ್ನು.

೭೯. ಕಾಮ್ಯ ಪ್ರತಿಷ್ಠಾಸ್ಥಲದಲ್ಲಿ- ಸದ್ಭಕ್ತರೂ ಗುರುಲಿಂಗಜಂಗ ಮಕ್ಕೆ ದಾಸೋಹವ ಮಾಡೆ ಕರ್ಮಫಲ ಸಿದ್ಧಿಸುವದೆಂಬುದನ್ನು.

೮೦. ಕಾಮ್ಯ ನಿರಸನಸ್ಥಲದಲ್ಲಿ— ಸದ್ಭಕ್ತರು ಗುರುಲಿಂಗಜಂಗ ಮಕ್ಕೆ ದಾಸೋಹವಂ ಮಾಡುವಲ್ಲಿ ಫಲಪದಂಗಳಂ ಬಯಸುವದು ಅಕ್ರ ಮವೆಂಬುದನ್ನು.

೮೧. ಸದ್ಭಕ್ತ ಚಾರಿತ್ರಸ್ಥಲದಲ್ಲಿ— ಪಂಚಾಚಾರ ವಿಡಿದಾಚರಿಸುವ ಸದ್ಭಕ್ತಸ್ಥಲವದೊಂದು ಸಮಸ್ತಸ್ಥಲಗಳಿಗೆಯೂ ಪ್ರಥಮಸ್ಥಾನವಾಗಿ ಸದ್ಭಕ್ತಚಾರಿತ್ರವನ್ನು.

೮೨. ಷಟ್‌ಸ್ಥಲ ನಿರ್ಣಯಸ್ಥಲದಲ್ಲಿ— ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂಬ ಷಟ್‌ಸ್ಥಲದಭೇದವನು ಬೇರೆ ಬೇರೆ ಸ್ಥಲಪ್ರತಿಷ್ಠೆಯನ್ನು.

೮೩. ಶಿವಭಕ್ತ ಪರೀಕ್ಷಾಸ್ಥಲದಲ್ಲಿ— ಷಟ್‌ಸ್ಥಲಸಂಪನ್ನರಾದ ಸದ್ಭಕ್ತರ ಭಕ್ತಿಪರೀಕ್ಷೆಯ ನೋಡಿದಲ್ಲದೆ ಶಿವನೊಲಿಯನೆಂಬುದನ್ನು.

೮೪. ಅನ್ಯೈಷ್ಠಿಕ ನಿರಸನಸ್ಥಲದಲ್ಲಿ— ಸದ್ಭಕ್ತರು ಜಂಗಮಲಿಂಗದಲ್ಲಿ ಅರ್ಥಪ್ರಾಣಾಭಿಮಾನಂಗಳಂ ವಂಚಿಸಿ ತಮ್ಮ ಉದರ ಹೊರೆವವರು ಸದ್ಭಕ್ತಿನೈಷ್ಠಿಕಾಸ್ಥಲಕ್ಕೆ ಸಲ್ಲರೆಂಬುದನ್ನು.

೮೫. ಸದ್ಭಕ್ತಿ ನೈಷ್ಠಿಕಾಸ್ಥಲದಲ್ಲಿ— ವೀರಮಾಹೇಶ್ವರರು ಜಂಗಮಾರ್ಚನೆಯ ಮಾಡುವೆಡೆಯಲ್ಲಿ ಸತಿಸುತರ ಮೇಲೆ ಬಂದಡಂ ತನ್ನ ತನುವಿನ ಮೇಲೆ ಬಂದಡಂ ಓಸರಿಸದೆ ನಿಷ್ಠೆ ಮುಂತಾಗಿ ಮಾಡಬೇಕೆಂಬುದನ್ನು.

೮೬. ವೀರದಾಸತ್ವ ನಿಷ್ಠಾಸ್ಥಲದಲ್ಲಿ— ವೀರಮಾಹೇಶ್ವರರು ಶಿವನಿಂದೆಯಂ ಕೇಳಲಾಗದೆಂಬುದನ್ನು.

೮೭. ವಿಶ್ವಾಸ ಪ್ರತಿಷ್ಠಾಸ್ಥಲದಲ್ಲಿ— ವೀರಮಾಹೇಶ್ವರರು ಗುರುಲಿಂಗಜಂಗಮದಲ್ಲಿ ಗುಣಾವಗುಣಂಗಳ ನೋಡದೆ ಶಿವನೆಂದು ನಂಬಿ ವಿಶ್ವಾಸವಂ ಮಾಡಬೇಕೆಂಬುದನ್ನು.

೮೮. ಶಿವಲಿಂಗ ವಿಕಳಾವಸ್ಥೆಯಸ್ಥಲದಲ್ಲಿ— ಸದ್ಭಕ್ತರ ಮನಭಾವ ಕರಣಂಗಳು ಲಿಂಗದಲ್ಲಿ ಸೆಲೆಗೊಂಡು ದಶಾವಸ್ಥೆಯ ಮೋಹ ವಿರಬೇಕೆಂಬುದನ್ನು.

೮೯. ಶಿವಲಿಂಗ ಕೋಟಾತುರಸ್ಥಲದಲ್ಲಿ— ಸದ್ಭಕ್ತರು ಅರಿವು ಮರವೆಗಳನತಿಗಳೆಂದು ಲಿಂಗದಲ್ಲಿ ಸಂಯೋಗವ ಮಾಡಬೇಕೆಂಬುದನ್ನು.

೯೦. ಶಿವಲಿಂಗ ಯೋಗಾನಂದಸ್ಥಲದಲ್ಲಿ— ಸದ್ಭಕ್ತರು ಶಿವ

ಲಿಂಗದಲ್ಲಿ ಬೆರಸಿ ಲಿಂಗ ಪ್ರಾಣಮನವೇಕೀಕರಿಸಿ ಲಿಂಗಾಂಗವಾಗಿ ವರ್ತಿಸುತ್ತಿರಬೇಕೆಂಬುದನ್ನು.

೯೧. ಬಾಹ್ಯಾಭ್ಯಂತರ ಲಿಂಗಸಂಯೋಗಸ್ಥಲದಲ್ಲಿ— ಸದ್ಭಕ್ತರು ಅಂತರಂಗ ಬಹಿರಂಗದಲ್ಲಿ ಲಿಂಗವ ಕೂಡಿರ್ದ ಭೇದವನರುಪುವದನ್ನು.

೯೨. ಭಿನ್ನಭಾಜನ ನಿರಸನಸ್ಥಲದಲ್ಲಿ- ಮಹಾಘನಲಿಂಗಕ್ಕೆ ಸದ್ಭಕ್ತನ ಅಂಗವೇ ಭಾಜನವಲ್ಲದೆ ಬೇರೆ ಭಾಜನಲ್ಲೆಂಬುದನ್ನು.

೯೩. ಸಾವಧಾನಾರ್ಪಿತಸ್ಥಲದಲ್ಲಿ—ಏಕಭಾಜನವಮಾಡಿದ ಸದ್ಭಕ್ತನ ಲಿಂಗದಲ್ಲಿ ಸಕಲದ್ರವ್ಯಂಗಳ ಭೋಗಿಸುವನೆಂಬುದನ್ನು.

೯೪. ಭಕ್ತದೇಹಿಕ ಲಿಂಗಸ್ಥಲದಲ್ಲಿ- ಶ್ರೀಮಹಾದೇವಂಗೆ ಸದ್ಭಕ್ತನೇ ದೇಹವಲ್ಲದೆ ಬೇರೊಂದು ದೇಹವಿಲ್ಲೆಂದು ಭಕ್ತದೇಹಿಕ ಲಿಂಗಸ್ಥಲವೆಂಬುದನ್ನು.

೯೫. ಅನಾಗಮಸ್ಥಲದಲ್ಲಿ— ಭಕ್ತದೇಹಿಕ ದೇವನಾದ ಶಿವನು ವೇದ ಶಾಸ್ತ್ರ ಪುರಾಣಾಗಮಂಗಳಿಗೆ ಒಲಿಯನೆಂಬುದನ್ನು.

೯೬. ಶರಣಚಾರಿತ್ರಸ್ಥಲದಲ್ಲಿ— ಶಿವನೊಲಿದ ಶರಣರು ಸಕಲ ಸಂಸಾರ ಪ್ರಪಂಚನೊಳಿದ್ದು ಲೇಪವಿಲ್ಲದೆ ನಿರ್ಲೇಪಿಗಳಾಗಿರ್ದರೆಂಬುದನ್ನು.

೯೭. ಸ್ತುತಿನಿಂದಾ ನಿರಸನಸ್ಥಲದಲ್ಲಿ— ನಿರ್ಲೇಪಿಯಾದ ಶರಣನು ಸ್ತುತಿನಿಂದೆಗಳು ಸಮವೆಂದು ಮನದಲ್ಲಿ ತಾಳಲಾಗದೆಂಬುವನ್ನು.

೯೮. ನಿರಹಂಭಾವಸ್ಥಲದಲ್ಲಿ— ಸ್ತುತಿ ನಿಂದೆಯಂ ಬಿಟ್ಟು ಸದ್ಭಕ್ತಿಯಾದಿಯಾದ ಷಡಧ್ವಭಕ್ತಿಸಂಪನ್ನರಾದಡೆಯೂ ಸ್ವಾಮಿಭೃತ್ಯ ಸಂಬಂಧವನುಳ್ಳಂತಹ ಸದ್ಭಕ್ತರುಗಳು ತಮ್ಮ ಗುಣಂಗಳಿಗೆ ತಾವು ಮೈಯೂನದೆ ಹಮ್ಮಳಿದಿರಬೇಕೆಂಬುವನ್ನು.

೯೯. ಸದ್ಭಕ್ತ ಸುಶ್ರೂಷಾಸ್ಥಲದಲ್ಲಿ— ಹಮ್ಮಿನ ಕಠಿಣಮಂ ತೊಡೆದು ನಿರ್ಮೂಲವಂ ಮಾಡುವದಕ್ಕೆ ಗುರುಲಿಂಗಜಂಗಮಕ್ಕೆ ಅರ್ಥ ಪ್ರಾಣಾಭಿಮಾನವಂ ಕೊಟ್ಟು ಹಮ್ಮುಮತೆಯನಳಿದಿಹ ಮಹಾಲಿಂಗಾಂಗಿಗಳ ಸೇವೆಯೇ ಕಾರಣವೆಂಬುದನ್ನು.

೧೦೦. ಸದ್ಭಕ್ತ ನಮಸ್ಕಾರಸ್ಥಲದಲ್ಲಿ- ಸದ್ಭಕ್ತಿ ಲಕ್ಷಣವಾಗಿರ್ದ

ವರುಗಳಿಗೆ ಅನವರತವು ತಲೆವಾಗಿ ನಮಸ್ಕಾರವಂ ಮಾಡುತಿರ್ದಲ್ಲದೆ ಅಪಮಾದಿ ನಾನಾ ಜಡಭಾವಂಗಳಳಿಯು ವೆಂಬುದನ್ನು.

೧೦೧. ಸದ್ಭಕ್ತ ಮಾಹತ್ಮ್ಯಸ್ಥಲದಲ್ಲಿ—ನಮಸ್ಕಾರಕ್ಕೆ ಯೋಗ್ಯ ರುಗಳಾಗಿದ್ದ ಪುರಾತನರ ಮಹಿಮೆಗೆ ದೇವದಾನವ ಮಾನವ ಮೊದಲಾದ ದೇಹಿಗಳು ಸರಿಯಲ್ಲವೆಂಬುದನ್ನು.

ಇಂತು ಆ ಘನ ಮಹಿಮೆಯುಳ್ಳ ಸದ್ಭಕ್ತರುಗಳು ಮರ್ತ್ಯ ದೊಳಗೆ ಜಡಮಾನವರಂತೆ, ತಾಮಸ ಜೀವಿಗಳಂತೆ, ಭವಭಾರಿಗಳಂತೆ ಸುಮ್ಮನೆ ಇರಬಾರದೆಂದು ಅನುಭವಾದಿ ಸದ್ಭಕ್ತಮಹಿಮಾಂತವಾದ ನೂರೊಂದು ಸ್ಥಲವಿಡಿದು ಆಚರಿಸಿ ಶಿವನೊಳು ಸಮರಸೈಕ್ಯವನೈದ ವಿಚಾರಗಳನ್ನು ವೇದಾಗಮಶಾಸ್ತ್ರ ಪುರಾಣೇತಿಹಾಸಾದಿ ನಾನಾ ಧರ್ಮ ಶಾಸ್ತ್ರೋಕ್ತ ಗ್ರಂಥಂಗಳಿಂದ ಮತ್ತು ಬಸವರಾಜದೇವರು, ಚೆನ್ನಬಸವ ರಾಜದೇವರು, ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂ-ಗಳು ನೂರೊಂದು ಸ್ಥಲದಲ್ಲಿ ನಡೆದು ನುಡಿದ ವಚನಂಗಳಿಂದ ತತ್ವ ವಿವೇಚನೆಯು ಸುಸ್ಪಷ್ಟವಾಗಿ **ಈ ಗಣಭಾಷಿತ ರತ್ನಮಾಲೆಯಲ್ಲಿ** ಪ್ರತಿ ಪಾದಿತವಾಗಿದೆ. ವೀರಶೈವ ಸಿದ್ಧಾಂತ ಗ್ರಂಥಗಳಲ್ಲಿ ಇದು ಒಂದು ಸಿದ್ಧಾಂತಗ್ರಂಥವೆಂದೆನಿಸಿದೆ. ಮತ್ತು ವೇದಗಳಿಂದ ಶಿವಶರಣರ ಅನು ಭವದ ವಚನಗಳು ಆವ ಬಗೆಯಿಂದಲೂ ಕಡಿಮೆಯಲ್ಲವೆಂಬುದನ್ನು "ಅನುಭವಿಯು ವೇನವೇ ವೇದ ಸರ್ವಜ್ಞ" ಎಂದು ನುಡಿದಿರುವ ಸರ್ವ ಜ್ಞನ ಸತ್ಯ ವಚನವನ್ನು ಸ್ವಾರ್ಥಕ ಗೊಳಿಸುವಂತಿದೆ. ವೇದಾಗಮೋಪ ನಿಷತ್ತುಗಳು ವೀರಶೈವರಿಗೆ ಸಮ್ಮತವಾದವುಗಳೆಂಬುದನ್ನು ತೋರ್ಪಡಿಸಿ ದಂತಿದೆ,

## ಗ್ರಂಥ ಗೌರವ ೧೩.

ಈ ಗಣಭಾಷಿತರತ್ನಮಾಲೆಯನ್ನು ಪ್ರಾಚೀನ ಅನೇಕ ಕವಿಗಳು ಪೊಗಳಿರುತ್ತಾರೆ. ಪಂಡಿತರು ಮಾನ್ಯಮಾಡಿದ್ದಾರೆ. ಬಹಳಕಾಲ ದಿಂದಲೂ ಎಲ್ಲರ ಮನ್ನಣೆಯನ್ನೂ ಪಡೆಯುತ್ತ ಬಂದಿದೆ. ಈ ವಿಚಾರ ದಲ್ಲಿ ಅವರಿವರ ಮಾತೇಕೆ ಮಲ್ಲಣ್ಣಗಳ ಮನ್ನಣೆಯ ಮಾತುಗಳೇ ಈ ಗ್ರಂಥದ ಘನತೆಗೌರವಗಳಿಗೆ ಪರಿಸ್ಫುಟವಾದ ನಿದರ್ಶನವಾಗಿದೆ.

" ಇದು ಶ್ರೀಮದ ನಿರ್ವಾಚ್ಯ ಸ್ವರೂಪರಪ್ಪ ಪರಶಿವ ಸಾಕಾರ ಸ್ವರೂಪರಾದ ಅಸಂಖ್ಯಾತ ಮಹಾಗಣಂಗಳು ಪರಮ ಕಲ್ಯಾಣಪುರ ದೊಳು ವಿರಚಿಸಿ ಹರಭಕ್ತಿಮಾರ್ಗಮಂ ಸ್ಥಲವಿಟ್ಟು ನುಡಿದ ವಚನಂಗಳಂ ವರಗುರುನಾಥನಾಜ್ಞೆಯಿಂ ಧರೆಯೊಳು ನೂತನಗಣಂಳರಿಯ ಲೊರೆ ದನು ಭವಾನಂದ ಸುಖಾಂಭೋರಾಶಿ ಪರಮುಷಟ್‌ಸ್ಥಲ ಮಾರ್ಗದ ಕರು ವನು ಪರಮಲಿಂಗಾಂಗದ ಶಿರಿಯು ಹರನೊಳಿರೆವಳಿದಿಪ್ಪುದಕ್ಕೆ ಪರಮ ಚಾರಿತ್ರ ವೆನಿಸುವ ಗಣಭಾಷ್ಯರತ್ನಮಾಲೆಯ ಓರೆವೆನು ವೇದಾಗಮಶಾಸ್ತ್ರ ಪುರಾಣೇತಿಹಾಸಾದಿ ನಾನಾ ಧರ್ಮ ಶಾಸ್ತ್ರೋಕ್ತ ಗ್ರಂಥಗಳಿಂ ಆಧ್ಯರ ವಚನ ಗಳಿಂ ನೂರೊಂದುಸ್ಥಲಮಾಗೆ ಸೇರಿಸಿದ ಹರಶರಣರಣುಗಂ ಗುಬ್ಬಿಯ ಮಲ್ಲಣ್ಣಗಳುಮಾಡಿದ ಗಣಭಾಷ್ಯರತ್ನಮಾಲೆಯು "

ವೃತ್ತಂ

" ಇದು ಪರಮವೀರಶೈವ ಸಿದ್ಧಾಂತ ಜ್ಞಾನ  
ಇದು ವೀರಶೈವ ಪ್ರತಿಷ್ಠಾಪನಾಚಾರ್ಯ  
ಇದು ದಿವ್ಯವೇದಾಂತ ಶಿರೋಮಣಿ  
ಇದು ಸಮಸ್ತ ಶಾಸ್ತ್ರ ಮುಖ್ಯ ಮುಖದರ್ಪಣ  
ಇದು ಮಹಾಜ್ಞಾನ ಪ್ರವರ್ಧನ ಪರಮಾನುಭವ ಸಂಬೋಧೆ  
ಇದು ಸರ್ವಾಚಾರ ಸಂಪನ್ನರ ಸಮಾರೂಢ ಸಂಗ್ರಹ  
ಇದು ಪರಮ ರಾಜಯೋಗ ಸಾಧ್ಯ ಸನ್ನಿಧಾನ  
ಇದು ರಸಾಂಮೃತ ಪ್ರಸನ್ನ ಪ್ರಸಾದವು

ಇದು ಅಜ್ಞಾನ ತಿಮಿರಾಂಜನಮಪ್ಪ ಮಹಾ ಪ್ರಸಂಗಮಂ ಬಸವ ರಾಜದೇವರು, ಚೆನ್ನಬಸವರಾಜದೇವರು, ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳು ನೂರೊಂದು ಸ್ಥಲದಲ್ಲಿ ನಡೆದು ನುಡಿದ ವಚನಂಗಳು ಸ್ಥಲಭಿನ್ನವಾಗಿರ್ದಡೆ ಚೆಂದವಲ್ಲೆಂದು ಕಂಠಮಾಲೆಯ ಪವಣಿಗೆಯನರಿದು ಸೇರಿಸಿದೆನು. ನಿಮ್ಮ ಕಾರುಣ್ಯದ ಶಿಶು ಗುಬ್ಬಿಯ ಮಲ್ಲಣ್ಣಗಳು ಶಿವಗಣಂಗಳ ಶಿವಾನುಭವಸೂತ್ರಮಂ ಮಾಡಿ ಶಿವ ಗಣಂಗಳ ಮುಖಕ್ಕೆ ನಿರ್ಮಲ ದರ್ಪಣಮೆನೆ ಸಮರ್ಪಿಸಿದೆನು. ಈ ಗ್ರಂಥದ ವಿಚಾರದಲ್ಲಿ ಇದಕ್ಕೂ ಹೆಚ್ಚಾಗಿ ಹೇಳುವವೇನಿದೆ ?

ಈ ಗಣಭಾಷಿತರತ್ನಮಾಲೆಯಲ್ಲಿ ೩೮ ಜನ ಶಿವಶರಣರ ವಚನಗಳು ಪ್ರಾಮುಖ್ಯವಾದ ೫೩ ಸಂಸ್ಕೃತ ಗ್ರಂಥಗಳ ಶ್ಲೋಕಗಳು ಉದಾಹೃತವಾಗಿವೆ. ಸಂಸ್ಕೃತದ ಎಲ್ಲ ಶ್ಲೋಕಗಳು ಕನ್ನಡ, ಸುಂದರ, ತಾತ್ಪರ್ಯಾರ್ಥದಿಂದ ಯುಕ್ತವಾಗಿವೆ.

ಇದರಲ್ಲಿ ಅಂಗಸ್ಥಲ, ಲಿಂಗಸ್ಥಲ, ನಿರಂಗಲಿಂಗಸ್ಥಲವೆಂಬ ಮೂರು ಸ್ಥಲಗಳಾಗಿ ವಿಭಾಜಿತವಾಗಿದೆ. ಆ ಆ ಸ್ಥಲಗಳಿಗೆ ಸೇರ್ಪಡೆಯಾಗಿರುವ ವಚನಗಳ ಶ್ಲೋಕಗಳ ಸಂಖ್ಯೆಯು ವಿವರವು ಇಂತಿದೆ.

| | ಸ್ಥಲ | ಶ್ಲೋಕ | ವಚನ | ಕೂಡಿ |
|---|---|---|---|---|
| ೪೪. | ಅಂಗಸ್ಥಲ | ೨೩೪ | ೨೨೫ | ೪೫೯ |
| ೪೫. | ಲಿಂಗಸ್ಥಲ | ೧೯೫ | ೧೯೩ | ೩೮೮ |
| ೧೨. | ನಿರಂಗಲಿಂಗಸ್ಥಲ | ೫೧ | ೬೭ | ೧೧೮ |
| ೧೦೧ | | ೪೮೦ | ೪೮೫ | ೯೬೫ |

ಈ ಬಗೆಯಲ್ಲಿ "ಗಣಭಾಷಿತ ರತ್ನಮಾಲೆಯಂ" ರಚಿಸಿದ.

ಮಲ್ಲಣ್ಣನ ಜಾಣ್ಮೆಯೋ ಜಾಣ್ಮೆ
ಮಲ್ಲಣ್ಣನ ರೀತಿಯೋ ರೀತಿ
ಮಲ್ಲಣ್ಣನ ಕಾಣ್ಕೆಯೋ ಕಾಣ್ಕೆ
ಮಲ್ಲಣ್ಣನ ಬಾಳ್ವೆಯೋ ಬಾಳ್ವೆ
ಮಲ್ಲಣ್ಣನೇ ಧನ್ಯನು ಮಲ್ಲಣ್ಣನೇ ಮಾನ್ಯನು ಲೋಕದೊಳ್

## ಶ್ರೀ ಮೃತ್ಯುಂಜಯ ಸ್ವಾಮಿಗಳ ಮನ್ನಣೆಯ ಮಾರ್ಗ ೧೪.

ಧಾರವಾಡದ ಶ್ರೀಮುರುಘಾಮಠಾಧ್ಯಕ್ಷರಾದ ಶ್ರೀ. ಮ. ನಿ. ಮೃತ್ಯುಂಜಯಸ್ವಾಮಿಗಳವರು ತಮ್ಮ ಪವಿತ್ರ ಕಾರ್ಯ ಕಲಾಪಗಳಿಂದ ಕನ್ನಡ ನಾಡಿಗೆ ಸುಪರಿಚಿತರು.ಇವರು ದಯೆ, ದಾಕ್ಷಿಣ್ಯ, ವಿರತಿ, ಕರುಣೆ, ಕಿಂಕರತ್ವ, ಕಾರ್ಯದಕ್ಷತೆ, ಕಷ್ಟಸಹಿಷ್ಣುತೆಗಳನ್ನು ಸೌಹಾರ್ದಭಾವ, ಭಕ್ತಿಭಾವ, ದಾಸೋಹಂಭಾವಗಳನ್ನು ಮತ್ತು ಉಜ್ವಲವಾದ ಸಮಾಜ ಪ್ರೇಮ, ಸಾಹಿತ್ಯಪ್ರೇಮ ಮೊದಲಾದ ಮನ್ನಣೆಯ ಗುಣಗಳನ್ನು ಮೈಗೂಡಿಸಿ ಕೊಂಡಿರುತ್ತಾರೆ.

ಇವರು ಧಾರವಾಡದ ಪ್ರಸಾದ ನಿಲಯದ ಸಂಸ್ಥಾಪಕರಾಗಿ ಸಂಚಾಲಕರಾಗಿ ವಿದ್ಯಾರ್ಥಿಗಳಿಗೆ ಅಭಯ ವಸತಿ ಅನ್ನ ವಿದ್ಯಾದಾನಗಳನ್ನು ವಿಪುಲವಾಗಿ ಮಾಡಿರುತ್ತಾರೆ. ಮಿಗಿಲಾದ ಪುಣ್ಯ-ಕೀರ್ತಿಗಳನ್ನು ಸಂಪಾದಿಸಿಕೊಂಡಿರುತ್ತಾರೆ.

ಪ್ರಪಂಚದಲ್ಲಿ ಅನೇಕ ಸಾಮ್ರಾಜ್ಯಗಳು ಅಳಿದು ಹೋಗಿರುತ್ತವೆ. ಅಪಾರ ಧನವ್ಯಯದಿಂದ ಕಟ್ಟಿದ ಕಟ್ಟಡಗಳು ಕುಸಿದು ಹೋಗಿವೆ. ವಿಪುಲವಾದ ಸಂಪತ್ತೆಲ್ಲವು ಕಾಲಚಕ್ರದಲ್ಲಿ ಸಿಲುಕಿ ಕಾಣದಾಗಿದೆ.

ಸಾಹಿತ್ಯ ಮತ್ತು ತತ್ವಗಳು ಮಾತ್ರ ಸೂರ್ಯಚಂದ್ರರು ಇರುವ ಪರ್ಯಂತರ ಅಚ್ಚಳಿಯದೆ ನಿಚ್ಚಳವಾಗಿ ಉಳಿದಿರುತ್ತವೆ. ಒಂದು ಧರ್ಮದ ಜನಾಂಗವು ಅಳಿದು ಹೋದರು ಆ ಜನಾಂಗಕ್ಕೆ ಸಂಬಂಧಿಸಿದ ಸಾಹಿತ್ಯ ಮತ್ತು ತತ್ವಗಳು ಉಳಿದಿದ್ದರೆ ಅದರ ಪ್ರಭಾವದಿಂದ ಜನತೆಯು ಮತ್ತೆ ಎಚ್ಚತ್ತು ತಲೆಯೆತ್ತಿ ತನ್ನ ಧರ್ಮದ ಅಸ್ತಿತ್ವವನ್ನು ಕಾದುಕೊಳ್ಳುತ್ತದೆ—ಎಂಬ ಮಹತ್ವದ ಮಾತುಗಳನ್ನು ಶ್ರೀ ಮೃತ್ಯುಂಜಯ ಸ್ವಾಮಿಗಳವರು ನೆನೆದು ಪರಮ ಪವಿತ್ರವಾದ ಈ ಗ್ರಂಥ ಪ್ರಕಟನೆಯ ಕಾರ್ಯದಲ್ಲಿ ನಿರತರಾಗಿರುವುದು ಅತ್ಯಂತ ಸ್ತುತ್ಯವಾದ ಸಂಗತಿಯಾಗಿದೆ.

ಶ್ರೀ ಮೃತ್ಯುಂಜಯ ಸ್ವಾಮಿಗಳವರಿಂದ ಮುಂದೆ ಧಾರವಾಡದ ಶ್ರೀಮುರುಘಾಮಠಕ್ಕೆ ಉತ್ತರಾಧಿಕಾರಿಗಳಾಗಿರುವ ಶ್ರೀ. ಮ. ನಿ. ಮಹಾಂತ ಸ್ವಾಮಿಗಳವರು ಸಕಲ ಸದ್ಗುಣ ಸಮನ್ವಿತರು ಶಾಂತಿ ವಿರತಿ ದಾಸೋಹಂಭಾವಗಳನ್ನೂ ಅಳವಡಿಸಿ ಕೊಂಡಿರುತ್ತಾರೆ. ಸಮಾಜ ತತ್ವ ಸಾಹಿತ್ಯಗಳಲ್ಲಿ ವಿಶೇಷವಾದ ಅಭಿಮಾನ ಆಸಕ್ತಿ ಉಳ್ಳವರಾಗಿ ಪ್ರಶಂಸನೀಯರಾಗಿರುತ್ತಾರೆ. ತಮ್ಮ ಗುರುಗಳ ಮಾರ್ಗಾನುಯಾಯಿಗಳಾಗಿ ಅವರು ಕೈಕೊಂಡಿರುವ ಸಕಲಕಾರ್ಯಗಳನ್ನು ಶ್ರದ್ಧೆಯಿಂದ ನೆರವೇರಿಸುತ್ತಲಿದ್ದಾರೆ. ಇಂತಹ ಪವಿತ್ರ ಕಾರ್ಯದಲ್ಲಿ ನಿರತರಾದ ಉಭಯ ಶ್ರೀಗಳವರಿಗೆ ನನ್ನ ಭಕ್ತಿಯುತವಾದ ಅನಂತ ವಂದನೆಗಳು.

## ನೆರವಿತ್ತವರ ನೆನವು ೧೫.

ಧಾರವಾಡ ಶ್ರೀಮುರುಘಾಮಠದ "ಬಾಲಲೀಲಾ ಮಹಾಂತ ಶಿವ

ಯೋಗೀಶ್ವರ ಗ್ರಂಥಮಾಲೆ" ಯಿಂದ ಈ ಮೊದಲು ನಮ್ಮಿಂದ ಸಂಶೋಧಿತವಾಗಿ ಸಂಪಾದಿತವಾದ ಶ್ರೀ ಷಣ್ಮುಖಸ್ವಾಮಿಕೃತ ಅಖಂಡೇಶ್ವರ ವಚನವು ಎರಡನೇಯ ಗ್ರಂಥವಾಗಿ ಪ್ರಕಟವಾಗಿರುವದು ಸರಿಯಷ್ಟೇ? ಅದು ಸಕಲ ವಿಧದಿಂದಲೂ ಮುದ್ದಾಗಿ ಸಕಲರಿಂದ ವಿಶೇಷವಾದ ಮಾನ ಮನ್ನಣೆಗಳನ್ನು ಸಂಪಾದಿಸಿಕೊಂಡಿದೆ ಎಂದು ಹೇಳಲು ಹರ್ಷನೆನಿಸಿದೆ.

ಶ್ರೀಮಲ್ಲಣ್ಣಕವಿ ವಿರಚಿತವಾದ ಈ ಗಣಭಾಷಿತ ರತ್ನಮಾಲೆಯು ಈ ಗ್ರಂಥಮಾಲೆಯ ೩ನೇಯ ಗ್ರಂಥವಾಗಿದೆ. ಇದರಿಂದ ನನ್ನ ಹೆಚ್ಚು ಹೆಚ್ಚಾದ ಈ ಬಗೆಯ ಪ್ರಯತ್ನವು ಪ್ರೋತ್ಸಾಹಕ್ಕೆ ಪುರಸ್ಕಾರಕ್ಕೆ ಸಾಧನವಾಗಿದೆ.

ಈ ಗ್ರಂಥವನ್ನು ಶುದ್ಧವಾಗಿ ಸಿದ್ಧಪಡಿಸುವ ಕಾರ್ಯಕ್ಕಾಗಿ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘಾರಾಜೇಂದ್ರ ಮಹಾಸ್ವಾಮಿಗಳವರು ತಮ್ಮ ಬೃಹನ್ಮಠದ ಶಾರದಾಭಂಡಾರದಿಂದ ತಾಳೆಗರಿಯ ಮೇಲೆ ಬರೆದ ಒಂದು ಪ್ರತಿಯನ್ನಿತ್ತು ಸಹಾಯಮಾಡಿರುತ್ತಾರೆ. ಪ್ರಯುಕ್ತ ಭಕ್ತಿಯುತವಾದ ಅನಂತ ನಮಸ್ಕಾರಗಳು.

ಹುಬ್ಬಳ್ಳಿಯ ರುದ್ರಾಕ್ಷಿ ಮಠಾಧ್ಯಕ್ಷರಾದ ಶ್ರೀ ಶಿವಾಕ್ಷರ ಸ್ವಾಮಿಗಳವರು, ಶ್ರೀ ಶಿವಯೋಗಮಂದಿರ ಸಂಸ್ಥೆಯವರು ತಾಳೆಗರಿಯ ಮತ್ತು ಕೋರಿಯ ಕಾಗದದ ಮೇಲೆ ಬರೆದ ಪ್ರತಿಗಳನ್ನಿತ್ತಿರುತ್ತಾರೆ. ಮತ್ತು ಹುಬ್ಬಳ್ಳಿಯ ಹೊಸ ಮಠಾಧ್ಯಕ್ಷರಾದ ಶ್ರೀಶಿವಬಸವಸ್ವಾಮಿಗಳವರು ಈ ಗ್ರಂಥವನ್ನು ಶುದ್ಧವಾಗಿ ಸಿದ್ಧಪಡಿಸುವದರಲ್ಲಿ ಅಚ್ಚಿಗೆ ಕೊಡುವ ಪ್ರತಿಯನ್ನು ಸಿದ್ಧಪಡಿಸುವ ಕಾರ್ಯದಲ್ಲಿ ನನಗೆ ನೇಹದಿಂದ ನೆರವಾಗಿರುತ್ತಾರೆ. ಇವರೆಲ್ಲರಿಗೂ ಅಭಿವಂದನೆಗಳು.

ಧಾರವಾಡದ ಶ್ರೀತೋಂಟದಾರ್ಯ ಮುದ್ರಣಾಲಯದ ಮೇಲಾಧಿಕಾರಿಗಳಾದ ಸಹೃದಯರಾದ ಶ್ರೀಮಾನ್ ಎಂ. ಜಿ. ವಿರೂಪಾಕ್ಷನ್ ಹಾಗೂ ಶ್ರೀಮಾನ್ ಶಿ. ಬ. ಹರಿಯರ ಅವರು ಎಲ್ಲ ಬಗೆಯ ಸಹಾಯ ಸೌಕರ್ಯಗಳನ್ನು ನೀಡಿರುತ್ತಾರೆ. ನಾವು ಕೊಟ್ಟ ಹಲವು ತೊಂದರೆ

ಗಳನ್ನು ತಾಳ್ಮೆಯಿಂದ ಸಹಿಸಿಕೊಂಡು ಆದರಾಭಿಮಾನದಿಂದ ಈ ಗ್ರಂಥ ವನ್ನು ಅಂದವಾಗಿಯೂ, ಸುಂದರವಾಗಿಯೂ ಮುದ್ರಣ ಮಾಡಿಕೊಟ್ಟಿ ರುತ್ತಾರೆ. ಅವರಿಗೆ ಅತ್ಯಂತ ಕೃತಜ್ಞರಾಗಿರುತ್ತೇವೆ.

ಶ್ರೀ ತೋಂಟದಾರ್ಯ ಪ್ರೆಸ್ಸಿನ ಎಲ್ಲ ಕೆಲಸಗಾರರು ವಿಶ್ವಾಸದಿಂದ ಉತ್ಸಾಹದಿಂದ ಈ ಗ್ರಂಥದ ಕಾರ್ಯವನ್ನು ಪೂರೈಸಿಕೊಟ್ಟಿರುತ್ತಾರೆ. ಅವರ ಉಪಕಾರವನ್ನು ಮರೆಯುವ ಹಾಗಿಲ್ಲ.

**ದಿನಾಂಕ**
೧೨-೧೨-೧೯೪೭

**ಶ್ರೀ ಪ್ರಭು ಸ್ವಾಮಿಗಳು**



॥ ಶ್ರೀಗುರು ಬಸವಲಿಂಗಾಯ ನಮಃ ॥

**ಗುಬ್ಬಿ ಮಲ್ಲಣ್ಣ**

**ವಿರಚಿತ**

# ಗಣಭಾಷ್ಯರತ್ನಮಾಲೆ

ಶ್ರೀಗುರುವೆ ಪರಮ ಗುರುವೆ ಮ
ಹಾ ಗುರುವೇ ನಿಮ್ಮ ಕೃಪೆಯೊಳುಂ ಪರಮಾಮೃತ-
ಸಾಗರವೆಂಬಂತಿದನು-
ದ್ಯೋಗಿಸಿದೆಂ ಶಾಸ್ತ್ರವಚನ ಸಮ್ಮತದಿಂದಂ ॥

ಇದು ಶ್ರೀಮದನಿರ್ವಾಚ್ಯಸ್ವರೂಪರಪ್ಪಪರಶಿವಸಾಕಾರಸ್ವರೂಪರಾದ ಅಸಂಖ್ಯಾತ ಮಹಾಗಣಂಗಳು ಪರಮಕಲ್ಯಾಣಪುರದೊಳು ವಿರಚಿಸಿ ಹರಭಕ್ತಿಮಾರ್ಗಮಂ ಸ್ಥಲವಿಟ್ಟು ನುಡಿದ ವಚನಂಗಳಂ ವರಗುರುನಾಥನಾಜ್ಞೆಯಿಂ ಧರೆಯೊಳು ನೂತನ ಗಣಂಗಳರಿಯಲೊರೆದನುಭವಾನಂದ ಸುಖಾಂಭೋರಾಶಿ ಪರಮ ಷಟ್‌ಸ್ಥಲ ಮಾರ್ಗದ ಕರುವನು ಪರಮ ಲಿಂಗಾಂಗ ಸಂಬಂಧದ ಸಿರಿಯು ಹರನೊಳಿರವಳಿದಿಪ್ಪುದಕ್ಕೆ ಪರಮಚಾರಿತ್ರವೆನಿಸುವ 'ಭಾಷ್ಯರತ್ನಮಾಲೆ'ಯಂ ಒರೆವೆನು.

ವೇದಾಗಮಶಾಸ್ತ್ರಪುರಾಣೇತಿಹಾಸಾದಿ ನಾನಾ ಧರ್ಮ ಶಾಸ್ತ್ರೋಕ್ತ ಗ್ರಂಥಂಗಳಿಂ ಆದ್ಯರ ವಚನಂಗಳಿಂ ನೂರೊಂದು ಸ್ಥಲಮಾಗೆ ಸೇರಿಸಿದ 'ಹರಶರಣರಣುಗಂ ಗುಬ್ಬಿಯ ಮಲ್ಲಣ್ಣಗಳು' ಮಾಡಿದ ಭಾಷ್ಯರತ್ನಮಾಲೆಯು.

# ಅಂಗಸ್ಥಲಗಳು ೪೪

## ಅನುಭಾವಸ್ಥಲ ೧

ಶಿವರಹಸ್ಯದಲ್ಲಿ—

ದಿವೇ ದಿನೇ ವಿಶೇಷಂ ಚ ಮಾಸೇ ಮಾಸೇ ಮಹದ್ಘನಂ ।
ವರ್ಷೇ ವರ್ಷೇ ಮಹಾಚೋದ್ಯಂ ಸದ್ಭಕ್ತಸ್ಯ ಸುಲಕ್ಷಣಂ ॥೧॥

ದಿನದಿನಕ್ಕೆ ವಿಶೇಷವಿಶೇಷವಾಗಿ ತಿಂಗಳುತಿಂಗಳುಗಳಲ್ಲಿ ಘನಘನವಾಗಿ ವರ್ಷವರ್ಷಕ್ಕೆ ಮಹಾಶ್ಚರ್ಯವಾಗಿ ಸ್ಥಲಗಳಿಂ ವರ್ತಿಸುವುದು ಸದ್ಭಕ್ತರ ಲಕ್ಷಣವು.

ವೇದಶಾಸ್ತ್ರಪುರಾಣಾನಿ ಜ್ಞೇಯಾ ವೇಶ್ಯಾವಧೂರಿವ ।
ಜ್ಞೇಯಾ ತು ಶಾಂಕರೀ ವಿದ್ಯಾ ಗುಪ್ತಾ ಕುಲವಧೂರಿವ ॥೨॥

ವೇದಶಾಸ್ತ್ರ ಪುರಾಣಾಗಮಂಗಳು ವೇಶ್ಯಾಸ್ತ್ರೀಯಳೋಪಾದಿಯೆಂದರಿಯಲು ತಕ್ಕವು. ಶಿವಸಂಬಂಧವಪ್ಪ ಪುರಾಣಾಗಮಂಗಳು ಕುಲಸ್ತ್ರೀಯೋಪಾದಿಯೆಂದರಿವುದು.

ಶಿವಶಾಸ್ತ್ರಮಧೀಯಾನಾಸ್ತೇ ತರಂತಿ ಭವಾರ್ಣವಂ ।
ಅಸಚ್ಛಾಸ್ತ್ರಮಧೀಯಾನಾ ಮೃತ್ಯುಪಾಶವಶಂಗತಾಃ ॥೩॥

ಶಿವಾಗಮಂಗಳನೋದುವವರು ಸಂಸಾರವೆಂಬ ಸಮುದ್ರವಂ ದಾಂಟುವರು. ಶಿವಸಂಬಂಧವಲ್ಲದಾಗಮ ಪುರಾಣಂಗಳನೋದುವವರು ಮೃತ್ಯುಪಾಶಕ್ಕೊಳಗಹರು.

ವಾತಪಿತ್ಥಕಫೋತ್ಥಸ್ಯ ಜ್ವರಸ್ಯಾಸ್ತಿ ಪ್ರತಿಕ್ರಿಯಾ ।
ಮಹಾಮೋಹಜ್ವರಾರ್ತಾನಾಂ ಶ್ರುತೋಽಪಿ ನ ಶ್ರುತಂ ಶ್ರುತಂ ॥೪॥

ವಾತ ಪಿತ್ಥ ಶ್ಲೇಷ್ಮದಿಂದ ಹುಟ್ಟಿದ ಜ್ವರಕ್ಕೆ ಪ್ರತೀಕಾರವುಂಟು. ದೊಡ್ಡಿತ್ತಾದ ಅಜ್ಞಾನವೆಂಬ ಜ್ವರದಿಂದ ಪೀಡಿತರಾದವರಿಗೆ ಶಿವಾಗಮಂಗಳು ಕೇಳಲಿಕ್ಕೆ ಯೋಗ್ಯವಲ್ಲ.

ಯೇ ಶ್ರಾವಯಂತಿ ಸುಧಿಯಃ ಶಿವಕರ್ಮಭಕ್ತಾಃ ।
ಶೃಣ್ವಂತಿ ಯೇ ಪ್ರಮುದಿತಾಶ್ಚ ಶ್ರುತೇ ಕ್ಷಣಂ ವಾ ॥
ತ್ರಿಸಪ್ತಪೂರುಷಯುತಾಃ ಪರಮೇಶಲೋಕೇ ।
ಮೋದಂತೇ ತೇ ಪುನರಿಹೈವ ಚ ನಿಷ್ಕಲಂಕಾಃ ॥೫॥

ಯಾರು ಶಿವಕಥೆಗಳನ್ನು ಒಳ್ಳೆಯ ಬುದ್ಧಿಯುಳ್ಳವರಾಗಿ ಕೇಳಿಸುವವರೋ ಯಾರು ಭಕ್ತಿಯಿಂದ ಕೇಳುತ್ತಿಹರೋ ಯಾರು ಅದಕ್ಕೆ ಸಂತೋಷಿಸುತ್ತಿಹರೋ ಯಾರು ಕೇಳುವವರನ್ನು ನೋಡುತ್ತಲಾದರೂ ಇರುವರೋ ಅವರು ಇಪ್ಪತ್ತೊಂದು ಕುಲದಲ್ಲಿ ಹುಟ್ಟಿದ ಪುರುಷರಿಂ ಕೂಡಿ ಶಿವಲೋಕದಲ್ಲಿ ಸಂತೋಷಿಸುತ್ತಿಹರು. ಅವರು ಪುನಃ ಭೂಲೋಕದಲ್ಲಿ ನಿಃಕಲಂಕರೆನಿಸುವರು.

ಜ್ಞಾನಿಭಿಸ್ತು ಸಮಾಸ್ತೇ ವೈ ಕೃತಪೂಜಾ ಸದಕ್ಷಿಣಂ ।
ಪ್ರವರ್ತಯಂತಿ ಯೇ ಕೇಚಿತ್ ಭವಪುಸ್ತಕವಾಚನಂ ॥೬॥

ಯಾರು ಶಿವಶಾಸ್ತ್ರವಹ ಪುಸ್ತಕವನೋದುವರೋ ಅವರು ಮಹಾಜ್ಞಾನಿಗಳಿಗೆ ಸಮಾನರಾದವರು. ಅವರು ದಕ್ಷಿಣೆ ಸಹಿತವಾಗಿ ಶಿವಪೂಜೆಯಂ ಮಾಡಿದವರು.

ತ್ರಿಪ್ರದಾಯ ಮಹೀಂ ಪೂರ್ಣಾಂ ಸರ್ವರತ್ನೈಸ್ತು ಸಂಯುತಾಂ ।
ಶ್ಲೋಕಾರ್ಧಶ್ರವಣಾದೇವ ಯತ್ಫಲಂ ತದವಾಪ್ನುಯಾತ್ ॥೭॥

ಸಮಸ್ತ ರತ್ನಂಗಳಿಂ ತುಂಬಿರುವ ಭೂಮಿಯನ್ನು ಮೂರು ಬಾರಿ ದಾನವಂ ಕೊಡಲಾಗಿ ಆವ ಫಲವು ಲಭಿಸುವುದೋ ಶಿವನಂ ತಿಳಿಯುವುದಕ್ಕೆ ಯೋಗ್ಯವಾದ ಶ್ಲೋಕಾರ್ಧವಂ ಕೇಳಿದ ಮಾತ್ರದಲ್ಲಿಯೇ ಆ ಫಲವನ್ನು ಪಡೆಯುವನು.

ಯಃ ಶ್ರೋತೄಣಾಂ ಶಾಂಕರೀಯಂ ಶಾಸ್ತ್ರಂ ಕಾಮ್ಯಾದಿಕಂ ತಥಾ ।
ನ ಶ್ರಾವಯತ್ಯಭಿಜ್ಞಶ್ಚ ತಮಾಹುರ್ಬ್ರಹ್ಮಘಾತಕಂ ॥೮॥

ಆವನಾದರೂ ಬಲ್ಲವನು ಈಶ್ವರ ಸಂಬಂಧವಾದ ಶಾಸ್ತ್ರವನ್ನು ಕಾಮಿಕಾದಿ ಆಗಮಂಗಳನ್ನು ಕೇಳುವವರಿಗೆ ಕೇಳಿಸದಿರುವನೋ ಅವನು ಬ್ರಾಹ್ಮಣನಂ ಕೊಂದಾತನೆಂದು ಬಲ್ಲವರು ಹೇಳುವರು.

ಸೂತಸಂಹಿತೆಯಲ್ಲಿ--

ಪ್ರಕ್ಷೀಣಾಶೇಷಪಾಪಸ್ಯ ಶುದ್ಧಾಂತಃಕರಣಸ್ಯ ತು ।
ದೇವದೇವಪರಿಜ್ಞಾನೇ ಜಾಯತೇ ಭಕ್ತಿರುತ್ತಮಾ ॥೯॥

ತ್ರಿಕರಣಶುದ್ಧವಾಗಿ ಶಿವಕಥನವಂ ಕೇಳಿದವನಿಗೆ ತಾನು ಮಾಡಿದ ದೋಷದೋಷಗಳೆಲ್ಲವು ನಾಶವಾಗುವವು. ಆದಕಾರಣ ಸದ್ವಚನದಿಂದ ಸುವ್ರತ ಉಂಟಾಗುವದು. ಸಮಸ್ತ ಪಾಪಗಳು ನಾಶವಾದತ್ರಿಕರಣಶುದ್ಧನಾದವನಿಗೆ ಮಹಾದೇವನನ್ನು ತಿಳಿಯುವದರಲ್ಲಿ ಶ್ರೇಷ್ಠವಾದ ಭಕ್ತಿಯುಂಟಾಗುತ್ತದೆ.

ಶಿವವಾರ್ತಾಶ್ರುತೌ ಯಸ್ತು ಯದ್ಯಾಲಸ್ಯಪರಾಙ್ಮುಖಃ ।
ಸಂದಹ್ಯ ಸ್ವಕೃತಂ ಪುಣ್ಯಂ ರೌರವಂ ನರಕಂ ವ್ರಜೇತ್ ॥೧೦॥

ಶಿವಕಥನವಂ ಕೇಳುವಾಗ ಆವುದಾನೊಂದಾಲಸ್ಯದಿಂದಾದರು ಅಲ್ಲದೆ ಮತ್ತೊಂದು ಕಾರ್ಯಾರ್ಥಚಿಂತನೆಯಿಂದಿದ್ದರೆ ತಾನು ಮಾಡಿದ ಪುಣ್ಯವು ದಹನವಾಗಿ ಪಾಪರೂಪವಾದ ನರಕವಂ ಹೊಂದುವನು.

ಪಾರವಶ್ಯಯುತೋ ಮಧ್ಯೇ ಕಥಾವಿಘ್ನಂ ಕರೋತಿ ಯಃ ।
ಅಪೂಜ್ಯಂ ಜ್ಞಾನವಕ್ತಾರಂ ನರಕಂ ಪ್ರತಿಪದ್ಯತೇ ॥೧೧॥

ಆ ಶಿವಮಹಾತ್ಮೆಯಂ ಕೇಳುವ ಮಧ್ಯಕಾಲದಲ್ಲಿ ಅನ್ಯಚಿತ್ತವಾಗಿದ್ದರು, ಬೇಡೆಂದು ತಡೆದರು, ಉಪದೇಶಕನನ್ನು ಅಪೂಜ್ಯನೆಂದರೂ ನರಕವಾಗುವದು. ಅದು ಕಾರಣ ಶಿವಜ್ಞಾನವನ್ನು ಶಿವ ವಿಷಯವನ್ನು ಸುಚಿತ್ತದಿಂದ ಕೇಳುವುದು.

ಅಹೋರಾತ್ರೇ ತು ಪಕ್ಷೇ ತು ಮಾಸೇ ಸಂವತ್ಸರೇಽಪಿ ಚ ।
ಉಪವಾಸಾದಿ ವ್ರತಾನಾಂ ತು ಯತ್ಫಲಂ ತತ್ಫಲಂ ಶ್ರುತೇಃ ॥೧೨॥

ಹಗಲು ಇರುಳು ಹದಿನೈದು ದಿವ ತಿಂಗಳು ವರುಷಪರ್ಯಂತವು ಮಾಡಿದ ಉಪವಾಸಾದಿ ವ್ರತಗಳ ಫಲವು ಮಹಾತಪಸ್ಸಿನಿಂದೆಷ್ಟು ಫಲವು ಲಭಿಸುವುದೋ ಶಿವಪುರಾಣಂಗಳಂ ಕೇಳಿದಡೆ ಅಷ್ಟು ಫಲವು ತಪ್ಪದೆ ಉಂಟಾಗುವುದು.

ಸರ್ವಲೋಕೋಪಕಾರಾರ್ಥಮಾತ್ಮನಶ್ಚಾಪಿ ಮುಕ್ತಯೇ ।
ಯೇ ಬ್ರುವಂತಿ ಶಿವಜ್ಞಾನಬೋಧನಂ ಸರ್ವಜಂತುಷು ।
ತೇಷಾಂ ಪುಣ್ಯಫಲಂ ವಕ್ಷ್ಯೇ ಶ್ರೋತ್ರೃಣಾಂ ಚ ವಿಶೇಷತಃ ।
ಪರಮಾಯುಷ್ಯಸತ್ಕೀರ್ತ್ಯಪತ್ಯಬಂಧುಸುಖಂ ಸ್ತ್ರಿಯಾಂ ।
ಇಹ ಸಂಪ್ರಾಪ್ಯ ವಿಪುಲಾಂ ಪರಾಂ ಶಾಂತಿಮವಾಪ್ನುಯುಃ ॥೧೩॥

ಯಾರು ಎಲ್ಲ ಪ್ರಾಣಿಗಳಲ್ಲಿ ಶಿವಶಾಸ್ತ್ರವನರಿವ ರೀತಿಯನ್ನು ಎಲ್ಲ ಲೋಕಕ್ಕೆ ಉಪಕಾರಾರ್ಥವಾಗಿಯೂ ತಮ್ಮ ಮೋಕ್ಷಾರ್ಥವಾಗಿಯೂ ಬೋಧಿಸುವರೋ ಯಾರು ಕೇಳುತ್ತಿರುವರೋ ವಿಶೇಷವಾಗಿ ಅವರುಗಳ ಫಲವಂ ಹೇಳುವೆನು. ದೀರ್ಘಾಯುಷ್ಯ ಕೀರ್ತಿ ಸಂತಾನ ಬಂಧು ಸ್ತ್ರೀಯರ ಐಶ್ವರ್ಯವೆಂಬ ಸುಖವನ್ನು ಈ ಲೋಕದಲ್ಲಿ ಬಹಳವಾಗಿ ಅನುಭವಿಸಿ ಉತ್ಕೃಷ್ಟವಾದ ಶಾಂತಿಯನ್ನು ಹೊಂದುವರು.

## ವಚನಗಳು

೧

ಪಾತಾಳದಗ್ಗವಣಿಯುನು ನೇಣಿಲ್ಲದೆ
ಸೋಪಾನದ ಬಲದಿಂದಲ್ಲದೆ ತೆಗೆಯಬಹುದೇ ?
ಶಬ್ದಸೋಪಾನವ ಕಟ್ಟಿ ನಡೆಸಿದರು ಪುರಾತನರು
ದೇವಲೋಕದ ಬಟ್ಟೆ ಕಾಣಿರೋ !
ಮರ್ತ್ಯಲೋಕದವರ ಮನದ ಮೈಲಿಗೆಯ ಕಳೆಯಲೆಂದು
ಗೀತಮಾತೆಂಬ ಜ್ಯೋತಿಯ ಬೆಳಗಿ ಕೊಟ್ಟರು
ಕೂಡಲಚೆನ್ನಸಂಗನ ಶರಣರು

೨

ಶಿವವಚನ ಗುರುವಚನ ಪುರಾತನರ ವಚನವ ಕೇಳಿ ಬದುಕಿರಯ್ಯಾ
ಕೇಳಿದರೆ ಕೃತಾರ್ಥರಪ್ಪಿರಿ
ತನುಕರಗಿ ಮನಕೊರಗಿ ಭಾವಬೆಚ್ಚು
ಶರಣರಲ್ಲಿ ಅನುಭಾವವ ಕೇಳಿದರೆ ಅದೇ ಮುಕ್ತಿ ನೋಡಿರೇ
ಇಂತಲ್ಲದೆ ಮನವ್ಯಾಕುಲವಾಗಿ ಗೀತಗಳಂ ತನುಮುಟ್ಟಿ ಕೇಳಿದಡೆ
ಉಪದೇಶವೆಂತು ಸಲುವುದಯ್ಯ ಮಹಾಲಿಂಗ ಕಲ್ಲೇಶ್ವರಾ
ಗುರುವಚನ ಪರಾಙ್ಮುಖರಿಗೆ ಎಂದೆಂದು ಭವಹಿಂಗದು ನೋಡಾ

೩

ಕೇಳಿರೇ ಕೇಳಿರೇ ಪುರಾತನ ವಚನೋಪದೇಶವ
ಮುನ್ನೊಂದು ಗೀಜಗನುದುಪದೇಶದಿಂದ
ಪೌಲಸ್ತ್ಯನಂದು ಪಡೆಯನೇ ದಶಮುಖನ
ತಲೆಯ ಪರಿದಿಕ್ಕಿ ಪರಮನೆಡೆಯ ಕಾಣದೆ
ನಳನಳಿಪತಂತಿಯುಪದೇಶದಿಂದ
ಪಡೆಯನೇ ಅರಸು ಪದವಿಯನಂದು ದಶಮುಖನು
ತರುಣಿ (ಹರಿಣಿ) ಹರ್ಷೋಪದೇಶದಿಂದ
ಸುಪಥವನೈದನೇ ವಿನಾಶಕ್ತಿರಾಯನು

ರಂಭೆಯಉಪದೇಶದಿಂದ ಶಂಭುವಿನೋಲಗದಲ್ಲಿ ಕುಳ್ಳಿರನೇ ಶ್ವೇತನು
ಇದುಕಾರಣ ನಮ್ಮ ಕೂಡಲಸಂಗನ ಶರಣರ ವಚನೋಪದೇಶವ ಕೇಳಿದವರಿಗೆ
ದುರಿತಪಾತಕಂಗಳು ಬಿಟ್ಟು ಮನನಿರತರಾಗಿಪ್ಪರಯ್ಯ ಲಿಂಗದಲ್ಲಿ

೪

ಅನುಭಾವವಿಲ್ಲದವನ ಭಕ್ತಿ ತಲೆಕೆಳಗಪ್ಪುದಯ್ಯಾ
ಅನುಭಾವವೇ ಭಕ್ತಿಗಾಧಾರ
ಅನುಭಾವವೇ ಭಕ್ತಿಗೆ ನೆಲೆವನೆ
ಅನುಭಾವವುಳ್ಳವರ ಕಂಡರೆ
ತುರ್ಯ ತುರ್ಯ ಸಂಭಾಷಣೆಯಂ ಮಾಡದಿದ್ದರೆ
ನರಕದಲ್ಲಿಕ್ಕಯ್ಯಾ ರಾಮನಾಥಾ

೫

ಭಕ್ತಿಗೆ ಅನುಭಾವವೇ ಬೀಜ ಕಾಣಿರೆ
ಭಕ್ತಿಗೆ ಅನುಭಾವವೇ ಆಚಾರ ಕಾಣಿರೆ
ಅನುಭಾವವಿಲ್ಲದವನ ಭಕ್ತಿ ಎಳತಟಗೊಳಿಸಿತ್ತು
ಅನುಭಾವವ ಮಾಡುವಲ್ಲಿ ವಿನಯದಿಂದ ಕೇಳದಿದ್ದಡೆ
ಕೂಡಲಚೆನ್ನಸಂಗಯ್ಯ ಘೋರನರಕದಲ್ಲಿಕ್ಕದೆ ಬಿಡುವನೆ

೬

ಕಡೆಗೀಲಿಲ್ಲದ ಬಂಡಿ ಹೊಡಗೆಡವುದ ಮಾಬುದೇ ?
ಕಡೆಗೀಲು ಬಂಡಿಗಾಧಾರ
ಕಡು ದರ್ಪವೇರಿದ ಒಡಲೆಂಬ ಬಂಡಿಗೆ
ಮೃಡಶರಣರ ನುಡಿಗಡಣವೇ
ಕಡೆಗೀಲು ಕಾಣಾ ರಾಮನಾಥಾ

೭

ಕರಿಯನಿತ್ತಡೆ ಒಲ್ಲೆ
ಸಿರಿಯನಿತ್ತಡೆ ಒಲ್ಲೆ

ಹಿರಿದಪ್ಪ ರಾಜ್ಯವಿತ್ತಡೆ ಒಲ್ಲೆ
ನಿಮ್ಮ ಶರಣರ ಸೂಳ್ನುಡಿಯನೊಂದರಗಳಿಗೆ ಇತ್ತಡೆ
ನಿನ್ನನಿತ್ತೆ ಕಾಣಾ ರಾಮನಾಥಾ

೮

ಹಾಲತೊರೆಗೆ ಬೆಲ್ಲದಂತಹ ಕೆಸರು
ಸಕ್ಕರೆಯಂತಹ ಮಳಲು
ತವರಾಜದಂತಹ ನೊರೆತೊರೆಗಳು
ಇಂತಪ್ಪ ಆದ್ಯರ ವಚನವಿರಲು
ಬೇರೆ ಭಾವಿಯ ತೋಡಿ ಉಪ್ಪನೀರ
ಸವಿದಂತಾಯಿತ್ತಯ್ಯಾ ಎನ್ನ ಯುಕ್ತಿ
ನಿಮ್ಮ ವಚನಂಗಳ ಕೇಳದೆ ಅನ್ಯ ಪುರಾಣಂಗಳ ಕೇಳಿ
ಕೆಟ್ಟೆನಯ್ಯಾ ಕೂಡಲ ಸಂಗಮದೇವಾ

೯

ತರುಮರಾದಿಗಳಲ್ಲಿ ಹೋಗಿ ಅನಂತಕಾಲ ತಪಸ್ಸು ಮಾಡುವದನ್ನು
ಒಂದು ನಿಮಿಷ ಗುರುಚರಣ ಸೇವೆ ಸಾಲದೇ?
ಅನಂತಕಾಲ ಗುರುಚರಣ ಸೇವೆ ಮಾಡುವುದನ್ನು
ಒಂದು ನಿಮಿಷ ಲಿಂಗಾರ್ಚನೆ ಸಾಲದೆ?
ಅನಂತಕಾಲ ಲಿಂಗಾರ್ಚನೆಯ ಮಾಡುವುದನ್ನು
ಒಂದು ನಿಮಿಷ ಜಂಗಮ ತೃಪ್ತಿ ಸಾಲದೇ?
ಅನಂತಕಾಲ ಜಂಗಮ ತೃಪ್ತಿಯ ಮಾಡುವುದನ್ನು
ಒಂದು ನಿಮಿಷ ನಿಮ್ಮ ಶರಣರ ಅನುಭಾವ ಸಾಲದೆ?
ಕೂಡಲ ಚೆನ್ನಸಂಗಮದೇವಾ

ಈ ಪ್ರಕಾರದಿಂದಾದ್ಯರವಚನಂಗಳ್ಪಿಡಿದು ವರ್ತಮಾನಾನುಭಾವಿಗಳ ನುಡಿಗಡಣದಿಂದಲ್ಲದೆ ದೇಹಾದಿ ಮಿಥ್ಯಂಗಳು ತೊಲಗಿ ಜೀವಭ್ರಾಂತಿ ಯಳಿದು ಮಹಾಲಿಂಗವೊಡತಣಸಂಗವು ಘಟಿಸದೆಂದು ಅನುಭಾವಸ್ಥಲ ಪ್ರತಿಷ್ಠೆಯ ಮಾಡಿ ನುಡಿದ ಮಹಾಪುರಾತನರು ಆ ಲಿಂಗಾನುಭಾವಿಗಳ ಸಂಗವನಗಲಿದಡೆ ಮಹಾದುಃಖವೆಂಬುದನರಿದು ನುಡಿದ ವಚನಂಗಳು.

ಶಿವಧರ್ಮೇ—

ಯತ್ರ ತಿಷ್ಠತಿ ಲಿಂಗಾಂಗಸಂಬಂಧೀ ತತ್ಪರಾಯಣಃ ।
ನಿಮಿಷಂ ನಿಮಿಷಾರ್ಧಂ ವಾ ತಚ್ಛಿವಕ್ಷೇತ್ರಮುಚ್ಯತೇ ॥೧॥

ಶಿವನಲ್ಲಿ ತತ್ಪರನಾದ ಮಹಾತ್ಮನು ಆವ ಠಾವಿನಲ್ಲಿ ನಿಮಿಷವಾದರು ನಿಮಿಷಾರ್ಧವಾದರು ಇರುತ್ತಾನೋ ಆತನಿದ್ದ ಠಾವು ಶಿವಕ್ಷೇತ್ರವೆಂದು ಹೇಳಲ್ಪಡುವುದು.

ಗಂಗಾಸ್ನಾನಾಧಿಕಂ ಪುಣ್ಯಂ ದರ್ಶನಾಚ್ಛಿವಯೋಗಿನಃ ।
ಸರ್ವತೀರ್ಥಾಭಿಷೇಕೇಭ್ಯಸ್ತತ್ಸಂಭಾಷಣಮುತ್ತಮಂ ॥೨॥

ಒಬ್ಬ ಶಿವಯೋಗಿಯ ಕಂಡಡೆ- ಗಂಗಾಸ್ನಾನದಿಂದಧಿಕವಹ ಪುಣ್ಯವು, ಆತನೊಡನೆ ಸಂಭಾಷಣೆಯ ಮಾಡಿದಡೆ ಸಕಲ ತೀರ್ಥದಿಂದಧಿಕವಾದ ಪುಣ್ಯವಹುದು.

ಲಿಂಗಾಂಗಸಂಗಿನಾಂ ಪುಂಸಾಂ ಯೇಽದೃಗ್ವಿಷಯವರ್ತಿನಃ ।
ತೇ ಸರ್ವಪಾಪನಿರ್ಮುಕ್ತಾ ಯಾಸ್ಯಂತಿ ಪರಮಾಂ ಗತಿಂ ॥೩॥

ಆರು ಲಿಂಗಾಂಗ ಸಂಬಂಧವುಳ್ಳ ಮಹಾಪುರುಷರ ದೃಷ್ಟಿಗೆ ಬೀಳುವರೋ ಅವರುಗಳು ಸಕಲ ಪಾಪಂಗಳಿಂ ಬಿಡಲ್ಪಟ್ಟವರಾಗಿ ಶಿವಲೋಕವನ್ನೈದುತ್ತಿಹರು.

ಲಿಂಗಾಂಗಸಂಗಿನಂ ಮರ್ತ್ಯಂ ಲಿಂಗಧ್ಯಾನಪರಾಯಣಂ ।
ಅನುವ್ರಜತಿ ಯೋ ಮರ್ತ್ಯಸ್ಸೋಽಪಿ ಮುಕ್ತಿಮವಾಪ್ನುಯಾತ್ ॥೪॥

ಲಿಂಗಾಂಗಸಂಬಂಧವುಳ್ಳ ಲಿಂಗಧ್ಯಾನದಲ್ಲಿ ತತ್ಪರನಾದ ಮಹಾಪುರುಷನನ್ನು ಆವನೊಬ್ಬ ಮನುಷ್ಯನು ಬೆಂಬಳಿವಿಡಿದು ಹೋಗುವನೋ ಅವನು ಮೋಕ್ಷವನ್ನೈದುತ್ತಿಹನು.

ಯುಗಪಚ್ಛಿವಲಿಂಗೈಕ್ಯಪಾದಸ್ಪೃಷ್ಟರಜಾಂಸಿ ಚ ।
ಪತಂತಿ ಮಸ್ತಕೇ ಯಸ್ಯ ಸ ಮುಕ್ತೋ ನಾತ್ರ ಸಂಶಯಃ ॥೫॥

ಆ ಆತನ ಶಿರಸ್ಸಿನಲ್ಲಿ ಶಿವಲಿಂಗವಿರುವುದೋ ಆ ಲಿಂಗೈಕ್ಯನ ಪಾದ ಸೋಂಕಿದ ಧೂಳು ಒಂದು ಬಾರಿ ಬೀಳುತ್ತಿರಲು ಆತ ಮುಕ್ತನಹುದಕ್ಕೆ ಸಂದೇಹವಿಲ್ಲ

ಪ್ರಾಣಲಿಂಗೈಕ್ಯನಿಷ್ಠಸ್ಯ ದೇಹಸ್ಪೃಷ್ಟಸಮೀರಣಃ ।
ಯತ್ರ ಗಚ್ಛತಿ ತತ್ರಸ್ಥಾ ಮರ್ತ್ಯಾ ಮುಕ್ತಾ ನ ಸಂಶಯಃ ॥೬॥

ಪ್ರಾಣಲಿಂಗದಲ್ಲಿ ಏಕನಿಷ್ಠೆಯುಳ್ಳ ಮಹಾಪುರುಷನ ಶರೀರವ ಸೋಂಕಿದ ಗಾಳಿಯು ಎಲ್ಲಿಯ್ಯೆದುವದೋ ಅಲ್ಲಿದ್ದ ಮನುಷ್ಯರು ಮುಕ್ತರಹುದಕ್ಕೆ ಸಂದೇಹವಿಲ್ಲ.

## ವಚನಗಳು

೧

ಮಡಕೆಯ ಮಾಡುವರೆ ಮಣ್ಣೇ ಮೊದಲು
ತೊಡಿಗೆಯ ಮಾಡುವರೆ ಹೊನ್ನೇ ಮೊದಲು
ಶಿವಪಥವನರಿವಡೆ ಗುರುಕರುಣವೆ ಮೊದಲು
ಕೂಡಲಸಂಗಮದೇವರನರಿವಡೆ ಶರಣರ ಸಂಗವೆ ಮೊದಲು

೨

ಜ್ಞಾನದ ಬಲದಿಂದ ಅಜ್ಞಾನ ಕೆಡುವುದು ನೋಡಯ್ಯಾ
ಜ್ಯೋತಿಯ ಬೆಳಗಿನಿಂದ ಕತ್ತಲೆ ಕೆಡುವುದು ನೋಡಯ್ಯಾ
ಸರುಷದ ಬಲದಿಂದ ಅಸತ್ಯ ಕೆಡುವುದು ನೋಡಯ್ಯಾ
ಕೂಡಲಸಂಗಮದೇವಯ್ಯ ನಿಮ್ಮ ಅನುಭಾವಿಗಳ ಸಂಗದಿಂದ
ಎನ್ನ ಭವ ಕೆಡುವುದು ನೋಡಯ್ಯಾ

೩

ಜಜ್ಜನೆಜರಿದೆನು ಜಜ್ಜನೆಜರಿದೆನು ಜಜ್ಜನೆಜರಿದೆನು ನೋಡಯ್ಯಾ
ಬಿಬ್ಬನೆ ಬಿರಿದೆನು ಬಿಬ್ಬನೆ ಬಿರಿದೆನು ಬಿಬ್ಬನೆ ಬಿರಿದೆನು ನೋಡಯ್ಯಾ

ನಾನೊಬ್ಬನೆ ಉಳಿದೆನು ನಾನೊಬ್ಬನೆ ಉಳಿದೆನು ನಾನೊಬ್ಬನೆ
ಉಳಿದೆನು ನೋಡಯ್ಯಾ
ಕೂಡಲಸಂಗಮದೇವಯ್ಯಾ ನಿಮ್ಮನುಭಾವಿಗಳ
ಸಂಗವನಗಲಿದ ಕಾರಣ

೪

ಅಯ್ಯಾ ನಿಮ್ಮವರನಗಲಿ ಬದುಕಲಾರೆನು ಶಿವಘೋ ಶಿವಘೋ
ಕಂಗಳಶ್ರುಗಳಿಂದ ಮುಂದುಗಾಣೆನಾಗಿ
ಲಿಂಗಸಂಗಿಗಳನಗಲಿ ನಾನೆಂತು ಬದುಕುವೆನಯ್ಯಾ?
ಕೂಡಲಸಂಗಮದೇವಾ ನಿಮ್ಮ ಶರಣರ ತೋರಿ ಬದುಕಿಸಯ್ಯಾ
ನಿಮ್ಮ ಧರ್ಮ

೫

ಅಯ್ಯಾ ಆರಾರ ಸಂಗವೇನೇನು ಮಾಡುವದಯ್ಯಾ
ಕೀಡಿ ಕುಂಡಲಿಗನಾಗದೇ?
ಚಂದನದ ಸನ್ನಿಧಿಯಲ್ಲಿ ಬೇವು ಬಬ್ಬುಲಿ
ತಾರೆ ಮರಂಗಳು ಶ್ರೀಗಂಧವಾಗವೇ?
ಕೂಡಲಸಂಗನ ಶರಣರ ಸನ್ನಿಧಿಯಲ್ಲಿ ಕರ್ಮ ನಿರ್ಮಲವಾಗದಿಹುದೆ?

೬

ಕಂಡಡೆ ಮನೋಹರವಯ್ಯಾ
ಕಾಣದಿರ್ದಡೆ ಅವಸ್ಥೆಯಯ್ಯಾ
ಹಗಲಿರುಳಹುದು ಇರುಳು ಹಗಲಹುದು
ಎಂತದನಾಳವಾಡಿ ಕಳವೆ ಒಂದುಯುಗ ಪೆಲುಗೆಡದಂತೆ
ಕೂಡಲಸಂಗನ ಶರಣರನಗಲುವ ಧಾವತಿಗಿಂದ ಮರಣವೇ ಲೇಸಯ್ಯಾ

೭

ಕೂರ್ಪರನಗಲುವಾತನಾತ್ಮಘಾತುಕನವ್ವಾ
ದಿಬ್ಬುವ ಕೈದುಡುಕಿದೊಡೆ ಕೈ ಬೇವುದಲ್ಲದೆ ಮೈ ಬೇಯುದು

ಒಲಿದವರನಗಲಿದರೆ ಸರ್ವಾಂಗವು ಬೇವುದವ್ವಾ
ಮಹಾಲಿಂಗ ಗಜೇಶ್ವರನ ಶರಣರನಗಲಿ
ಆವಿಗೆಯ ಮಧ್ಯದ ಘಟದಂತೆ ಆದೆನವ್ವಾ

೮

ಪರುಷದ ಹೊರೆಯಲ್ಲಿ ಕಬ್ಬುನವಿದ್ದು ಹೊನ್ನಾಯಿತ್ತು ನೋಡಿರೇ
ಚಂಗಳೆಯ ನೆರೆಯುವರು ಲಿಂಗವನೋಂತರೆ ಹೇಳಾ
ಕೂಡಲಸಂಗಮದೇವಂಗೆ ಚೇಲಾಳನೆಂಬ ಬಾಗಿನವನಿಕ್ಕಿದರೆ ಹೇಳಾ

೯

ಒಲಿದವರ ಕೊಲುವರೆ ಮಸೆದ ಕೂರಲಗೇಕೆ?
ಅವರನೊಲ್ಲೆನೆಂದರೆ ಸಾಲದೆ?
ಮಳಲಪ್ರತಿಮೆಯನಡಿಗಡಿಗೆ ನೀರಲ್ಲಿ ತೊಳೆದಂತೆ
ಅವರನೊಲ್ಲೆನೆಂದರೆ ಸಾಲದೆ?
ಮಹಾಲಿಂಗ ಗಜೇಶ್ವರನ ಶರಣರನಗಲಿದಡೆ
ತುಪ್ಪದಲ್ಲಿ ಕಿಚ್ಚ ನಂದಿಸಿದಂತಾದೆನವ್ವಾ

೧೦

ಅಯ್ಯಾ ಸಜ್ಜನಸದ್ಭಾವರ ಸಂಗದಿಂದ
ಮಹಾನುಭಾವರ ಕಾಣಬಹುದು
ಮಹಾನುಭಾವರ ಸಂಗದಿಂದ ಶ್ರೀಗುರುವ ಕಾಣಬಹುದು
ಶ್ರೀ ಗುರುವಿನ ಸಂಗದಿಂದ ಲಿಂಗವ ಕಾಣಬಹುದು
ಲಿಂಗಸಂಗದಿಂದ ಜಂಗಮವ ಕಾಣಬಹುದು
ಜಂಗಮದಿಂದ ಪ್ರಸಾದವ ಕಾಣಬಹುದು
ಪ್ರಸಾದದಿಂದ ಆಚಾರವ ಕಾಣಬಹುದು
ಆಚಾರದಿಂದ ತನ್ನ ತಾನರಿಯಬಹುದು
ಇದುಕಾರಣದಿಂದ ಕೂಡಲಸಂಗಮದೇವಯ್ಯಾ
ನಿಮ್ಮ ಸಜ್ಜನಸದ್ಭಾವಿಗಳ ಸಂಗವನೆ ಕರುಣಿಸಯ್ಯಾ

## ಶರೀರನಿರಸನ ಸ್ಥಲ: ೩

ಈ ಪ್ರಕಾರದಿಂದ ಶರಣಸಂಗವನಗಲಬಾರದೆಂಬುದುಂ ಪ್ರತಿಷ್ಠೆಯಂ ಮಾಡಿ ನುಡಿದವರ್ಮಹಾಪುರಾತನರು ಆ ಶರಣಸಂಗದಿಂದ ಉದಯವಾದ ಮಹಾಜ್ಞಾನಕ್ಕೆ ಅನ್ಯವಾದ ಮಾಯೆಯ ತೋರಿಕೆಯ ದೇಹಾದಿ ಮಿಥ್ಯಂಗಳು ಜಡವೆಂಬುದ ವಿಡಂಬಿಸಿ ನುಡಿದ ವಚನಂಗಳು.

ವಿಷ್ಣುಪುರಾಣೇ—

ತಥಾ ಶರೀರಂ ನಿಃಸಾರಂ ಯೋನಿಯಂತ್ರಪ್ರಪೀಡನಾತ್ ।
ಸಂವರ್ತಿಸಾಂಗಪ್ರತ್ಯಂಗ ಜರಾಯುಪರಿವೇಷ್ಟಿತಮ್ ॥೧॥

ಅಂಗಪ್ರತ್ಯಂಗಗಳೊಡನೆ ಕೂಡಿದುದಾಗಿ ಮಾಸಿನಿಂದ ಸುತ್ತಲ್ಪಟ್ಟುದಾಗಿ ಜನನಕ್ಕೆ ಸಮ್ಮುಖವಾಗಿ ವರ್ತಿಸುತ್ತಿರ್ದುದಾಗಿ ಯೋನಿಯೆಂಬ ಗಾಣ ದಿಂದ ಅತ್ಯಂತ ಪೀಡಿಸಲ್ಪಟ್ಟುದಾಗಿ ದೇಹವು ಸಾರವಿಲ್ಲದಾದುದು.

ಮಾಂಸಾಸೃಕ್ಪೂಯವಿಣ್ಮೂತ್ರಸ್ನಾಯುಮಜ್ಜಾಸ್ಥಿಸಂಹತೌ ।
ದೇಹೇ ಚೇತ್ ಪ್ರೀತಿಮಾನ್ಮೂಢೋ ಭವಿತಾ ನರಕೇಽಪಿ ಸಃ ॥೨॥

ಮಾಂಸ ನೆತ್ತರ ಕೀವು ಅಮೇಧ್ಯ ಮೂತ್ರ ನರಗಳು ಕೊಬ್ಬು ಎಲುವುಗಳು ಇಂತಿವುಗಳ ಸಮೂಹವಾದ ದೇಹದಲ್ಲಿ ಯಾವ ಮೂಢನು ಸಂತೋಷಿ ಸುವನೋ ಅವನು ನರಕದಲ್ಲಿಯೂ ಪ್ರೀತಿಯುಳ್ಳವನಾಗುವನು.

ಅಮೇಧ್ಯಪೂರ್ಣಂ ಕ್ರಿಮಿಜಂತುಸಂಕುಲಂ
ಸ್ವಭಾವದುರ್ಗಂಧಮಶೌಚಮಧ್ರುವಮ್ ।
ಕಲೇವರಂ ಮೂತ್ರಪುರೀಷಭಾಜನಂ
ರಮಂತೇ ಮೂರ್ಖಾ ವಿರಮಂತಿ ಪಂಡಿತಾಃ ॥೩॥

ಅಮೇಧ್ಯದಿಂದ ತುಂಬಿದ ಹುಳುಗಳ ಜಂತುಗಳ ಸಮೂಹಗಳುಳ್ಳ ಸಹಜ ವಾಗಿ ನಾರುತ್ತಿರುವ ಶುಚಿಯಿಲ್ಲದ ಕೆಡುತ್ತಿರುವ ಮಲಮೂತ್ರಗಳಿಗೆ ಪಾತ್ರೆಯೆನಿಸಿದ ಶರೀರವನ್ನು ಅಜ್ಞಾನಿಗಳು ಇಚ್ಛಿಸುವರಲ್ಲದೆ ಜ್ಞಾನಿಗಳು ಇಚ್ಛಿಸರು.

ಶಿವಧರ್ಮೇ—

ಅಸ್ಥಿಪಟ್ಟಿತುಲಾಸ್ತಂಭಂ ಸ್ನಾಯುಬಂಧೇನ ಯಂತ್ರಿತಮ್ ।
ರಕ್ತಮಾಂಸಮೃದಾ ಲಿಪ್ತಂ ವಿಣ್ಮೂತ್ರದ್ರವ್ಯಭಾಜನಮ್ ॥೪॥
ಕೇಶರೋಮತೃಣಚ್ಛನ್ನಂ ರೋಗಾಯತನಮಾತರಮ್ ।
ವದನೈಕ ಮಹದ್ವಾರಂ ಗವಾಕ್ಷಾಷ್ಟಕಭೂಷಿತಮ್ ॥೫॥
ಓಷ್ಠದ್ವಯಕವಾಟಂ ಚ ದಂತಜಿಹ್ವಾರ್ಗಳಾನ್ವಿತಮ್ ।
ನಾಡೀಸ್ವೇದಪ್ರವಾಹಂ ಚ ಕಫಪಿತ್ತಪರಿಪ್ಲುತಮ್ ॥೬॥
ಜರಾಶೋಕ ಸಮಾವಿಷ್ಟಂ ಕಾಲಚಕ್ರೇಣ ವೇಷ್ಟಿತಮ್ ।

ಎಲುವಿನ ಹಲಗೆತೊಲೆಕಂಬಗಳುಳ್ಳ ನರಗಳೆಂಬ ಬಳ್ಳಿಗಳಿಂದ ಕಟ್ಟಲ್ಪಟ್ಟ ರಕ್ತಮಾಂಸಗಳೆಂಬ ಮಣ್ಣಿನಿಂದ ಮೆತ್ತಲ್ಪಟ್ಟ ಮಲಮೂತ್ರಗಳಿಗೆ ಪಾತ್ರವೆನಿಸಿದ ರೋಗಗಳಿಗೆ ತಾಯ್ಮನೆಯೆನಿಸಿದ ರೋಮಗಳೆಂಬ ಹುಲ್ಲಿನಿಂದ ಹೊದಿಸಲ್ಪಟ್ಟ ಬಾಯಿಯೆಂಬ ದೊಡ್ಡಬಾಗಿಲುಳ್ಳ ಎಂಟು ಗವಾಕ್ಷಗಳುಳ್ಳ ತುಟಿಗಳೆಂಬ ಕದಗಳುಳ್ಳ ಹಲ್ಲುನಾಲಿಗೆಗಳೆಂಬ ಒದೆಮರದಿಂ ಕೂಡಿದ ನಾಡಿಗಳ ಬೆವರೆಂಬ ಪ್ರವಾಹವುಳ್ಳ ಶ್ಲೇಷ್ಮಪಿತ್ತಂಗಳಿಂ ತುಂಬಿದ ಮುಪ್ಪು ರೋಗದುಃಖಂಗಳಿಂ ಕೂಡಿದ ಯಮಬಾಧೆಯೆಂಬ ಕಿಚ್ಚಿನಿಂ ಬೇಯುವ ದೇಹವು ಅಜ್ಞಾನಿಗೆ ಪ್ರೀತಿಯಲ್ಲದೆ ಜ್ಞಾನಿಗೆ ಪ್ರೀತಿಯಲ್ಲ.

## ವಚನಗಳು

೧

ಎಲುವಿನ ಪಂಜರ ನರಗಳ ಜಾಳಿಗೆ ಅಮೇಧ್ಯದ ಹುತ್ತ
ಮೂತ್ರದ ಬಾವಿ ಶ್ಲೇಷ್ಮದ ಕೆಸರು ಕೀವಿನ ಸೋನೆ
ನೆತ್ತರ ಮಡು ನಾಡಿಗಳ ಸುತ್ತುವಳ್ಳಿ ಪ್ರಾಣನೇಣ ಜಂತ್ರ
ಮಾಂಸದ ಗಟ್ಟಿಯ ತೆಪ್ಪ ಕಿಸುಕುಳದ ಹೇಸಿಕೆ
ಅತಿಹೇಯದ ಮಲಿನ ಮುಸುಕಿದ ರೋಮ
ತೊಗಲ ಪಾಕುಳ ಕ್ರಿಮಿಯ ಸಂಕುಳ
ಬಲಿದ ಪರರೇತೋರಜಸ್ಸಿನಲ್ಲಿ ಜನಿಸುವ
ಉತ್ಪತ್ತಿಸ್ಥಿತಿಲಯದ ಬೀಜ ಆಧಿವ್ಯಾಧಿಯ ತವರ್ಮನೆ

ಮೋಹದ ಬಲೆ ವಿಷಯದ ಭವದುಃಖದಾಗರ
ತೋರಿಕೆಡುವ ತನು ಇದು ನಿನ್ನದೆಂದು
ಮಾಡಬಾರದ ಪಾಪಂಗಳಂ ಮಾಡಿ
ಬಾರದ ಭವಂಗಳಲ್ಲಿ ಬಂದು ದೇಹದಿಚ್ಛೆಗೆ ನಡೆದು
ಹೂಸಿ ಮೆತ್ತಿ ಹೊದಿಸಿದ ಈ ದೇಹದಂತುವ ಕಂಡು
ಮರುಗುವೆ ಮರುಳು ಮಾನವಾ
ಅಘೋರ ನರಕದಲ್ಲಿ ಕೆಡುವಾಗ ಅಡ್ಡಬಪ್ಪವರಾರು ಹೇಳಾ
ಅಹಂ ಮಮತೆಯೆಂಬ ದೇಹದಿಚ್ಛೆಯ ಬಿಟ್ಟು
ಸೋऽಹಂ ಬ್ರಹ್ಮಾಸ್ಮಿ ಯೆಂದು ಕೇಡಿಲ್ಲದ ಪದವ ಮಾಡಿಕೋ
ಮರುಳೇ
ಮೋಹ ಬೇಡ ಕೆಡುವೆ ನಿನ್ನಲ್ಲಿ ನೀನೆ. ತಿಳಿದುನೋಡಾ
ಸಿಮ್ಮಲಿಗೆಯ ಚೆನ್ನರಾಮಾ

೨

ಎಲು ತೊಗಲು ನರ ಮಾಂಸ ಪುರೀಷ ಶ್ಲೇಷ್ಮ ರಕ್ತ
ಶುಕ್ಲ ಕ್ರಿಮಿ ಕೊಕ್ಕರ ಜರೆ ಮರಣ ಜಂತು
ಹಲವು ರೋಗಗಳ ತವರ್ಮನೆ ನೋಡುವರೆ ಪಾಪದಪುಂಜ
ಇಂತೀ ಹೇಸಿಕೆಯೊಳಗೆ ಏತರ ಸುಖವನರಸುವೆ?
ಈ ಸುಖದಾಶೆಯ ವಿಚಾರಿಸಿ ನೋಡಿದರೆ
ಸಕಲ ದುಃಖದಾಗರ ನರಕದ ಪಾಕುಳ
ಅಂಗನೆಯರಿಂತೆಂದು ತಿಳಿದು ವಿರಕ್ತನಾದ
ಪರಮ ಸೌಖ್ಯಾಂಗ ನೀನೆ ಸಿಮ್ಮಲಿಗೆಯ ಚೆನ್ನರಾಮಾ

೩

ಅಮೇಧ್ಯದ ಹಡಿಕೆ ಮೂತ್ರದ ಕುಡಿಕೆ
ಎಲುವಿನ ತಡಿಕೆ ಕೀವಿನ ಹಡಿಕೆ ಸುಡಲೀ ದೇಹವ
ಒಡಲುವಿಡಿದು ಕೆಡದಿರು ಚೆನ್ನಮಲ್ಲಿಕಾರ್ಜುನನರಿ ಮರುಳೇ

೬

ಅಸ್ಥಿ ಚರ್ಮ ಮಾಂಸ ರಕ್ತ ಖಂಡದ ಚೀಲ
ಲೆಕ್ಕಕ್ಕೆ ಬದುಕುವರೆ ಹುರುಳಿಲ್ಲ ಸಂಸಾರ
ಎಂದಿಗೆ ನಾನೀ ಹೊತ್ತ ಹೊರೆಯನಿಳುಹುವೆನೊ
ಎಂದಿಗೆ ನಾನಿದ ಸವೆಸಿ ಬಳಸಿ ಕಳೆವೆನಯ್ಯ
ಎಡಹಿ ಕೊಡನುದಕವ ನಡುನೀರಲೊಡೆವಂತೆ
ಎನ್ನೊಡಲೊಡೆದು ನಿಮ್ಮನೆಂದಿಗೆ ಬೆರೆಸುವೆನು ಉಳಿಯುಮೇಶ್ವರಾ

೫

ದೊಡ್ಡವೆರಡು ಕಂಬಗಳ ಮಧ್ಯದಲ್ಲಿ ಚಿಕ್ಕವೆರಡು ಕಂಬ
ಇಂತೀ ನಾಲ್ಕರ ಮಧ್ಯದ ಮನೆ ಅಸ್ಥಿಯುಗಳು ನರದಕಟ್ಟು
ಮಜ್ಜೆಯ ಸಾರ ಮಾಂಸದ ಗೋಡೆ ಚರ್ಮದ ಹೊದಿಕೆ
ಶೋಣಿತದ ಸಾರಣೆ
ಶುಕ್ಲದ ಕಂಬದಿಂದಲಿಪ್ಪುದೊಂದು ಚಿತ್ರದ ಮನೆ ನೋಡಾ
ಆ ಮನೆಗೆ ಒಂಬತ್ತು ಬಾಗಿಲು ಈಡಪಿಂಗಳವೆಂಬ ಗಾಳಿಯ ಬಾದಳ
ಮೃದುಕಠಿಣವೆಂಬೆರಡಗುಳಿಯ ಭೇದವು ನೋಡಾ
ಇತ್ತಲೆಯ ಮೇಲಿಪ್ಪ ಸುಷುಮ್ನ ನಾಳವ ಮುಚ್ಚಿ
ದಿವರಾತ್ರವೆಂಬ ಮರವರುವಿನ ಉಭಯದ ಕದ ಕೆತ್ತು
ಮನೆ ನಷ್ಟವಾಗಿ ಹೋದಡೆಯೂ ಮನೆಯೊಡೆಯು
ಮತ್ತೊಂದು ಮನೆಗೆ ಹೋಹುದು ತಪ್ಪದು ನೋಡಾ
ಇಂತಪ್ಪ ಮನೆಗೆ ಮರಳಿ ಬಾರದಂತೆ ಮಾಡಯ್ಯಾ
ಕಾಮ ಭೀಮ ಜೀವ ಧನದೊಡೆಯಾ ನಿಮ್ಮ ಧರ್ಮ ನಿಮ್ಮ ಧರ್ಮ

## ಮನೋನಿರಸನ ಸ್ಥಲ : ೪

ಈ ಪ್ರಕಾರದಿಂದ ದೇಹವನು ಹೇಯವೆಂದು ಕಳೆದು ನುಡಿದರ್ಮಹಾ ಪುರಾತನರು. ಇಂತೀ ದೇಹವನವಲಂಬಿಸಿ ಮನವು ಸಕಲ ಪ್ರಪಂಚಿನಲ್ಲಿ ವಿಕಾರಿಸುತ್ತಿಹುದಾಗಿ ಆ ಮನವು ಭ್ರಾಂತಿಯೆಂದು ನುಡಿದ ವಚನಂಗಳು.

ಮನಃ ಕರೋತಿ ಕರ್ಮಾಣಿ ಮನೋ ಲಿಪ್ಯತಿ ಪಾತಕೈಃ ।
ಮನಸಾ ಶಿವಭಕ್ತಾನಾಂ ನ ಕರ್ಮ ನ ಚ ಪಾತಕಮ್ ॥೧॥

ಮನವೇ ಕರ್ಮಂಗಳಂ ಮಾಡುವುದು ಮನವೇ ಪಾಪಂಗಳಲ್ಲಿ ಲೇಪನ ವಹುದು. ಆ ಮನವೇ ಶಿವಭಕ್ತನಾದಡೆ ಕರ್ಮವೂ ಇಲ್ಲ ಪಾಪವೂ ಇಲ್ಲ.

ಶಿವಧರ್ಮೇ—

ಕ್ಷಣಮಾಯಾತಿ ಪಾತಾಲೇ ಕ್ಷಣಂ ಯಾತಿ ನಭಸ್ಥಲೇ ।
ಕ್ಷಣಂ ವಹತಿ ದಿಕ್ಪುಂಜೇ ಮನಶ್ಚರತಿ ಮರ್ಕಟಃ ॥೨॥

ಮನವು ಮರ್ಕಟತನವ ಕೈಕೊಂಡು ಒಂದು ಕ್ಷಣದಲ್ಲಿ ಪಾತಾಳಕ್ಕೆ ಒಂದು ಕ್ಷಣದಲ್ಲಿ ಆಕಾಶಕ್ಕೆ ಮತ್ತೊಂದು ಕ್ಷಣದಲ್ಲಿ ಹತ್ತು ದಿಕ್ಕುಗಳಲ್ಲಿ ಹರಿವುದು. ಇಂತಪ್ಪ ಕೋಡಗಮನವ ನಿಲ್ಲಿಸಿದಲ್ಲದೆ ಶಿವಭಕ್ತನಾಗಲರಿಯನು.

ಮಚ್ಚಿತ್ತ ಮರ್ಕಟಮಿಮಂ ಚಪಲಸ್ವಭಾವಂ ದುಃಖಪ್ರದೇಷು
ವಿಷಯೇಷು ವೃಥಾ ಭ್ರಮಂತಮ್
ಶಂಭೋ ಬಧಾನ ಕೃಪಯಾ ದೃಢಭಕ್ತಿರಜ್ವಾ ಸರ್ವಪ್ರದೇ
ತ್ವದನುಚಿಂತನಕಲ್ಪವೃಕ್ಷೇ ॥೩॥

ಚಂಚಲತ್ವವೇ ಸ್ವಭಾವವಾಗಿರುವ ದುಃಖಂಗಳನುಂಟುಮಾಡುವ ವಿಷಯಂ ಗಳಲ್ಲಿ ವೃಥಾ ಹರಿದಾಡುತ್ತಿರುವ ಎನ್ನ ಮನವೆಂಬ ಕೋಡಗವನ್ನು ಎಲೈ ಪರಮಾತ್ಮನೇ ಎಲ್ಲ ಸುಖಂಗಳಂ ಕೊಡುವ ನಿನ್ನ ನೆನಹೆಂಬ ಕಲ್ಪವೃಕ್ಷದ ಮೂಲದಲ್ಲಿ ಸದ್ಭಕ್ತಿಯೆಂಬ ಬಲುಹಗ್ಗದಲ್ಲಿ ಯಾವಾಗಲೂ ಕಟ್ಟು.

ಮನಮಾರ್ಜಾಲಸಂಚಾರೇ ಮೂಷಕೋ ವಿಷಯಗ್ರಹೀ ।
ದ್ವಿಸಾಕ್ಷಿ ಪರಮಾತ್ಮೈವ ಕರ್ಮನಿರ್ಲೇಪ ನಿಶ್ಚಯಮ್ ॥೪॥

ಮಾರ್ಜಾಲವು ತಿರುಗಾಡುವಾಗ ಇಲಿಯನ್ನೇ ಹೇಗೆ ನೆನೆಯುವದೋ, ಮನವು ಸಂಚರಿಸುವಾಗ ವಿಷಯಂಗಳಂ ಹೇಗೆ ಗ್ರಹಿಸುವದೋ ಹಾಗೆ ಕರ್ಮವಂ ಮಾಡುತ್ತ ಪರಮಾತ್ಮನ ಸಂಧಾನ ಉಳ್ಳಾತನು ಕರ್ಮಗಳಿಂದ ನಿರ್ಲೇಪನೆನಿಸುವನು.

## ವಚನಗಳು

೧

ಇನ್ನೇವೆ ನಿನ್ನೇವೆನಯ್ಯಾ
ಎನ್ನ ಮನವೆಂಬ ಮರ್ಕಟನ ದಾಳಿ ಘನವಾಯಿತ್ತು
ಎನ್ನ ನಿಂದಲ್ಲಿ ನಿಲ್ಲಲೀಯದು
ಎನ್ನ ಕುಳಿತಲ್ಲಿ ಕುಳ್ಳಿರಲೀಯದು
ಕ್ಷಣದಲ್ಲಿ ಪಾತಾಳಕ್ಕೈದುತ್ತದೆ
ಕ್ಷಣದಲ್ಲಿ ಆಕಾಶಕ್ಕೈದುತ್ತದೆ
ಕ್ಷಣದಲ್ಲಿ ದಿಗ್ದೇಶಕ್ಕೈದುತ್ತದೆ ಕೂಡಲ ಸಂಗಮದೇವಾ
ಈ ಮನವೆಂಬ ಮರ್ಕಟನ ದಾಳಿಯುಸೆಂದಿಗೆ ನೀಗಿ
ಎಂದು ನಿಮ್ಮನೊಡಗೂಡುವೆನಯ್ಯಾ

೨

ಎನ್ನ ಮನವೆಂಬ ಮರ್ಕಟನು
ತನುವಿಕಾರವೆಂಬ ಅಲ್ಪಸುಖದಾಶೆಗಾಡಿ ವೃಥಾ ಭ್ರಮಣಗೊಂಡು
ನಾನಾದೆಸೆಗೆ ಲಂಘಿಸಿ ಅಳಲಿಸಿ ಬಳಲಿಸುತ್ತಿದೆ ನೋಡಾ
ಕೂಡಲಸಂಗಮದೇವರೆಂಬ ವೃಕ್ಷಕ್ಕೆ ಲಂಘಿಸಿ
ಅಪರಿಮಿತ ಸುಖನೈದುದ ನೋಡಾ

೩

ಸುಡು ಈ ಮನವನು ಎನ್ನನುಡುಹನ ಮಾಡಿ ಕಾಡಿತ್ತು
ನಡೆವಲ್ಲಿ ನುಡಿವಲ್ಲಿ ಅಧಿಕನೆಂದೆನಿಸಿತ್ತು
ಬೆಡಗಿನ ಕೀಲು ಕಳೆದು ಹೋಹಾಗ
ನಂಬಿದ ಕಡುಸ್ನೇಹದ ಮಡದಿ ಮುಟ್ಟಲಮ್ಮಳು ನೋಡಾ
ಒಡಲನುರಿಕೊಂಬುದು ಒಡವೆಯನರಸುಕೊಂಬ
ಒಡನಿದ್ದ ಸತಿಯ ಮತ್ತೊಬ್ಬ ಚೆನ್ನಿಗ ಕೊಂಬ
ಮುನ್ನ ಮಾಡಿದ ಕರ್ಮ ಬೆನ್ನು ಬಿಡದನ್ನಕ್ಕರ
ಇನ್ನು ನಿಮ್ಮ ನೆನಹು ಬಯಸಿದೊಡುಂಟೇ ಕೂಡಲಸಂಗಮದೇವಾ

೪

ಅಂದಳವನೇರಿದ ಶುನಕನಂತೆ
ಕಂಡರೆ ಬಿಡದು ತನ್ನ ಪೂರ್ವ ದುರ್ಗುಣವನು
ಸುಡುಸುಡು ಈ ಮನ ವಿಷಯಕ್ಕೆ ಹರಿವುದ ಮಾಣದು
ಮೃಡನೇ ನಿಮ್ಮಡಿಯ ನೆನೆದೆನೆಂದರೆ ನೆನೆಯಲೀಯದು ನೋಡಾ
ಎನ್ನೊಡೆಯ ಕೂಡಲಸಂಗಮದೇವಾ ನಿಮ್ಮಡಿಯನೆನೆವಂತೆ
ಕರುಣಿಸಯ್ಯಾ ಸೆರಗೊಡ್ಡಿ ಬೇಡಿಕೊಂಬೆನು ನಿಮ್ಮ ಧರ್ಮ

೫

ಮುಂಗೈಯ್ಯ ಕಂಕಣಕ್ಕೆ ಕನ್ನಡಿ ಏಕೆ ?
ಎನ್ನ ಮನವು ನಿಧಿಯನೊಲ್ಲದೆ ಜಲಗರವ ಮೆಚ್ಚಿತ್ತು ನೋಡಾ
ಲಿಂಗವ ನೆನೆಯಲೊಲ್ಲದು ಹಡಿಕೆಗೆ ಹರಿವ ಸೊಣಗನಂತೆ
ನಾಯಿಗೆ ನಾರಿವಾಳದ ಕಾಯಿ ಸೊಗಸುವದೇ ಕೂಡಲಸಂಗಮದೇವಾ

## ಇಂದ್ರಿಯ ನಿರಸನ ಸ್ಥಲ ೫

ಈ ಪ್ರಕಾರವಾಗಿ ಸಕಲ ಪ್ರಪಂಚಿನಲ್ಲಿ ವ್ಯವಹರಿಸುವ ಮನವು ಭ್ರಾಂತಿಯ ಮನೋನಿರಸನವ ಮಾಡಿ ನುಡಿದರ್ಮಹಾಪುರಾತನರು. ಆ ಮನವ ನೆಮ್ಮಿತೋರುತ್ತಿಹ ಇಂದ್ರಿಯಂಗಳು ಸಕಲಜೀವರುಗಳಲ್ಲಿ ಹಿರಿದು ಕಿರಿದೆನ್ನದೆ ಎಳೆತಟಗೊಳಿಸುತ್ತಿಹುದಾಗಿ ಆ ಇಂದ್ರಿಯಂಗಳು ಮಿಥ್ಯವೆಂದು ನುಡಿದ ವಚನಗಂಳು:

ಲೈಂಗೇ—

> ಮತಂಗಃ ಸ್ಪರ್ಶಮಾತ್ರೇಣ ಪತಂಗೋ ದರ್ಶನೇನ ಚ ।
> ಭೃಂಗಶ್ಚ ಗಂಧಮಾತ್ರೇಣ ಕುರಂಗಶ್ಶ್ರವಣೇನ ಚ ॥ ೧ ॥
> ಮತ್ಸ್ಯಶ್ಚ ಜಿಹ್ವಯಾ ಬದ್ಧಃ ಏಕೈಕೇನ ಹತಾ ಅವಿಃ ।
> ಪಂಚೇದ್ರಿಯಸಮೇತಸ್ಯ ಮನುಷ್ಯಸ್ಯ ಮೃತೌ ಕಿಮು ॥ ೨ ॥

ಆನೆ ಸ್ಪರ್ಶನೇಂದ್ರಿಯ ಪತಂಗ ನೇತ್ರೇಂದ್ರಿಯ ಭೃಂಗ ನಾಶಿಕೇಂದ್ರಿಯ ಎರಳೆ ಶ್ರೋತ್ರೇಂದ್ರಿಯ ಮತ್ಸ್ಯ ರಸನೇಂದ್ರಿಯ ಇಂತು ಒಂದೊಂದು ವಿಷಯದಲ್ಲಿ ಒಂದೊಂದು ಪ್ರಾಣಿಗಳು ಹತವಾದವು. ಪಂಚೇಂದ್ರಿಯವುಳ್ಳ ಮನುಷ್ಯನು ಸಾವುದೇನರಿದು.

> ಸರ್ವೇಂದ್ರಿಯವಶಾಃ ಸರ್ವೇ ಪ್ರಾಣಿನಃ ಸರ್ವಜನ್ಮಸು ।
> ತೇಷಾಂ ನ ವಿದ್ಯತೇ ಮೋಕ್ಷೋ ಮೃತ್ಯುರೇಕೋ ಭವಿಷ್ಯತಿ ॥ ೩ ॥

ಸಮಸ್ತ ಪ್ರಾಣಿಗಳು ಸರ್ವೇಂದ್ರಿಯಂಗಳ ವಶವರ್ತಿಗಳಾಗಿ ಮೋಕ್ಷವ-ನೈದದೆ ಮೃತ್ಯುವಿನೊಳಗಾಗಿ ಬಾಧೆಪಡುತ್ತಿಹವು.

> ಜಿಹ್ವಾ ಸರ್ವೇಂದ್ರಿಯಾಧಾರಂ ತಾಮಾಶ್ರಿತ್ಯ ವಸಂತಿ ಯೇ ।
> ತೇಽಪಿ ಮೋಕ್ಷಂ ನ ವಿಂದಂತಿ ಯೇ ವೈ ಆಹಾರತತ್ಪರಾಃ ॥ ೪ ॥

ಎಲ್ಲ ಇಂದ್ರಿಯಗಳಿಗೆ ಜಿಹ್ವೇಂದ್ರಿಯವೇ ಕಾರಣವಾಗಿ ಪ್ರಾಣಿಯು ಅದನ್ನು ಅನುವರ್ತಿಸಿ ಮೋಕ್ಷವನ್ನೈದದೆ ಮೃತ್ಯುವಿನೊಳಗಾಗಿ ಭೂಗತವಾಗಿ ಹೋಗು-ತ್ತಿಹುದು.

## ವಚನಗಳು

೧

ಕರಿಯು ಸ್ಪರ್ಶನೇಂದ್ರಿಯದಿಂದ ಬಂಧನವಡೆದಳಿಯಿತ್ತು
ಪತಂಗನು ರೂಪೇಂದ್ರಿಯದಿಂದ ಬಂಧನವಡೆದಳಿಯಿತ್ತು
ಭೃಂಗನು ಗಂಧೇಂದ್ರಿಯದಿಂದ ಬಂಧನವಡೆದಳಿಯಿತ್ತು
ಕುರಂಗನು ಶಬ್ದೇಂದ್ರಿಯದಿಂದ ಬಂಧನವಡೆದಳಿಯಿತ್ತು
ಮತ್ಸ್ಯವು ರಸನೇಂದ್ರಿಯದಿಂದ ಬಂಧನವಡೆದಳಿಯಿತ್ತು
ಇಂತಿ ಒಂದೊಂದು ಇಂದ್ರಿಯೋದ್ರೇಕದಿಂದ
ಒಂದೊಂದು ಪ್ರಾಣಿಯು ಪ್ರಳಯವಾಯಿತ್ತು
ಪಂಚೇಂದ್ರಿಯಂಗಳ ಒಂದು ಘಟದಲ್ಲಿ ತಾಳಿಹ ಮನುಷ್ಯಪ್ರಾಣಿಗಳಿಗೆ
ಮರವೆ ಎಡೆಗೊಂಡು ದೇಹ ಮೋಹಭ್ರಾಂತು ಮುಸುಕಿ
ಮಾಯೆಯ ಬಾಯತುತ್ತಹುದು ಚೋದ್ಯವೇನು ಹೇಳಾ ಗುಹೇಶ್ವರಾ

೨

ಪಂಚೇಂದ್ರಿಯವೆಂಬ ಪಾಪದ ಕೂಸು ಘಾಸಿಮಾಡಿ ಕಾಡುತ್ತಿದೆ
ಶಿವಶಿವಾ ಪಸುಪರಿಯ ಸಂತೈಸಿದರೂ ಸಂತವಾಗದು
ಮುದ್ದು ತೋರಿ ಬುದ್ಧಿಗೆಡಿಸಿತ್ತು
ಅಲ್ಲಿ ಹುಸಿಯನೇ ಮುಸುಕಿ ಮಸಿ ಮಣ್ಣು ಪೂಡಿತ್ತು
ನಮ್ಮ ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗಸಂಗಿಗಳಲ್ಲದ
ಅಧಮ ಮಾನವರ ಮರುಳಾಟವನಾಡಿಸಿ ಕಾಡಿತ್ತು ನೋಡಾ

೩

ರೂಪು ಚಕ್ರ ನಯನದಿಂ ನಡೆವುದು
ಶಬ್ದಚಕ್ರ ಶ್ರೋತ್ರದಿಂ ನಡೆವುದು
ಸೌರಭ್ಯಚಕ್ರ ಘ್ರಾಣದಿಂ ನಡೆವುದು
ರುಚಿಚಕ್ರ ಜಿಹ್ವೆಯಿಂ ನಡೆವುದು
ಸ್ಪರ್ಶಚಕ್ರ ತ್ವಕ್ಕಿನಿಂ ನಡೆವುದು

ಈ ಐದರಿಂದ ನಡೆವುತ್ತ ಲೋಕಾದಿ ಲೋಕಗಳೆಲ್ಲವು
ಹೀಗೆಯೇ ಕೆಟ್ಟುಹೋದವು
ಈ ಐದರ ಕಥನದಲ್ಲಿ ಈ ಸಂಸಾರವೆಂಬ ವಿಧಿಯ ಕೈಯಲ್ಲಿ
ಹರಿಬ್ರಹ್ಮಸುರರು ಮೊದಲಾದವರೆಲ್ಲರು
ಕೆಟ್ಟುಹೋದರು ನೋಡಾ ಕೂಡಲಸಂಗಮದೇವಾ

೬

ವಿಷಯವೆಂಬೀ ಹಸುರ ತಂದು ಪಸರಿಸಿದಿರಯ್ಯಾ ಎನ್ನಮುಂದೆ
ಪಶುವೆತ್ತ ಬಲ್ಲುದಯ್ಯಾ ಹಸುರೆಂದೆಳೆಸುವದಲ್ಲದೆ
ವಿಷಯರಹಿತನಮಾಡಿ ಭಕ್ತಿಯೆಂಬ ರಸವ ದಣಿಯ ಮೇಯಿಸಿ
ಸುಬುದ್ಧಿಯೆಂಬುದಕವನೆರೆದು ನೋಡಿಸಲಹಯ್ಯ
ಕೂಡಲಸಂಗಮದೇವಾ

೭

ವಿಕಳನಾದೆನು ಪಂಚೇಂದ್ರಿಯಧಾತುವಿನಿಂದ
ಮತಿಗೆಟ್ಟೆನು ಮನದ ವಿಕಾರದಿಂದ
ಧೃತಿಗೆಟ್ಟೆನು ಕಾಯವಿಕಾರದಿಂದ
ತಥಣುಹೊಕ್ಕೆನು ಕಾಯಯ್ಯಾ ಎನ್ನ ಕೂಡಲಸಂಗಮದೇವಾ

## ಸಂಸಾರ ನಿರಸನ ಸ್ಥಲ: ೬

ಈ ಪ್ರಕಾರದಿಂ ಇಂದ್ರಿಯಂಗಳು ಹೊಲ್ಲಹವೆಂದು ನಿರಸನವಂ ಮಾಡಿ ನುಡಿದರ್ಮಹಾಪುರಾತನರು. ಇಂತಪ್ಪ ಇಂದ್ರಿಯಂಗಳ ಗ್ರಹಿಸಿಪ್ಪ ಸಂಸಾರವು ನಿಃಸಾರವೆಂದರಿದು ನುಡಿದ ವಚನಂಗಳು.

ಶಿವಧರ್ಮೇ—

ತಾವದ್ಭ್ರಮಂತಿ ಸಂಸಾರೇ ದುಃಖಶೋಕಪರಿಪ್ಲುತಾಃ |
ನ ಭವಂತಿ ಶಿವೇ ಭಕ್ತಾ ಯಾವತ್ಸರ್ವೇಽಪಿ ದೇಹಿನಃ || ೧ ||

ಎಲ್ಲಿಯ ಪರ್ಯಂತರ ಸಮಸ್ತ ಪ್ರಾಣಿಗಳು ಶಿವಭಕ್ತಿಯುಳ್ಳವರಾಗುವದಿಲ್ಲವೋ ಅಲ್ಲಿಯ ಪರ್ಯಂತರ ದಾರಿದ್ರ್ಯಾದಿದುಃಖಂಗಳಿಂದಲೂ ಪುತ್ರಾದಿ ಶೋಕಂಗಳಿಂದಲೂ ಮುಳುಗಿದವರಾಗಿ ಸಂಸಾರದಲ್ಲಿ ಸುಳಿಯುತಿಪ್ಪರು.

ವಿಷ್ಣುಪುರಾಣೇ—

ಜ್ಞಾತೇ ಸಂಸಾರಪಿಂಡೇಽಸ್ಮಿನ್ ಜಿಗುಪ್ಸಾ ದೋಷದರ್ಶನಾತ್ |
ವಿರಾಗೀ ಚ ಮುಮುಕ್ಷುಶ್ಚ ಸಂಸಾರೇ ಹೇಯವಾನ್ ಭವೇತ್ || ೨ ||

ಈ ಸಂಸಾರ ಪಿಂಡವು ತಿಳಿಯಲಿಕ್ಕಾಗಿ ಹೇಸಿಕೆಯೆಂಬ ದೋಷವನ್ನು ಕಾಂಬುದರಿಂದ ವಿರಕ್ತನಾಗಿ ಮೋಕ್ಷದ ಮೇಲಣ ಅಪೇಕ್ಷೆಯುಳ್ಳ ಪುರುಷನು ಸಂಸಾರದಲ್ಲಿ ಹೇಯಬುದ್ಧಿಯುಳ್ಳವನಾಗುವನು.

ಕಿಮೇತೇನ ದ್ವಿಜಶ್ರೇಷ್ಠಾಃ ಕಾಲಕೂಟೇನ ದಾರುಣಮ್ |
ನ ವಿಷಂ ಕಾಲಕೂಟಾಖ್ಯಂ ಸಂಸಾರೋ ವಿಷಮುಚ್ಯತೇ || ೩ ||

ಎಲೈ ಬ್ರಾಹ್ಮಣಶ್ರೇಷ್ಠರೇ ಈ ಕಾಲಕೂಟ ವಿಷದಿಂದೇನು ಪ್ರಯೋಜನ? ಭಯಂಕರವಾದ ಕಾಲಕೂಟ ವಿಷವಲ್ಲ; ಸಂಸಾರವೇ ವಿಷವೆಂದು ಹೇಳಲ್ಪಡುವದು.

### ವಚನಗಳು

೧

ಚಂದ್ರಮನಂತೆ ಕಳೆಸಮನಿಸಿತ್ತೆನಗೆ
ಸಂಸಾರವೆಂಬ ರಾಹು ಸರ್ವಗ್ರಾಹಿಯಾಗಿ ನುಂಗಿತ್ತಯ್ಯಾ

ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು
ಇನ್ನೆಂದಿಗೆ ಮೋಕ್ಷವಹುದೋ ಕೂಡಲಸಂಗಮದೇವಾ

೨

ಸಂಸಾರಸಾಗರದ ತೆರೆಕೊಬ್ಬಿ ಮುಖದ ಮುಂದೆ ಅಲೆವುತ್ತಿದ್ದುದು
ಸಂಸಾರಸಾಗರ ಉರದುದ್ದವೇ ಹೇಳಾ
ಸಂಸಾರಸಾಗರ ಕೊರಳುದ್ದವೇ ಹೇಳಾ
ಸಂಸಾರಸಾಗರ ಶಿರದುದ್ದವಾದ ಬಳಿಕ ಏನ ಹೇಳುವೆನಯ್ಯಾ
ಅಯ್ಯಯ್ಯೊ ಎನ್ನ ಹುಯ್ಯಲ ಕೇಳಯ್ಯಾ ಕೂಡಲಸಂಗಮದೇವಾ
ನಾನಿನ್ನೇವೆನಯ್ಯಾ

೩

ಸಂಸಾರವೆಂಬ ಸರ್ಪನ ಅಣಲೊಳಗಿದ್ದೆನಯ್ಯಾ
ಆವಾಗ ನುಂಗಿತ್ತೆಂದರಿಯೆನಯ್ಯಾ
ಆವಾಗ ಉಗುಳಿತ್ತೆಂದರಿಯೆನಯ್ಯಾ
ಅದರ ಬಾಯಿಂದೆನ್ನ ತೆಗೆದು ಕಾಯಯ್ಯಾ ಕಪಿಲಸಿದ್ಧ
ಮಲ್ಲಿಕಾರ್ಜುನಾ

೪

ಸಂಸಾರ ಬೆಂಬಿಡದೆ ಕಾಡಿತ್ತಯ್ಯಾ ಏವೆನೇವೆನಯ್ಯಾ
ಅಂದಂದಿನ ದಂದುಗಕ್ಕೆ ಏವೆನೇವೆನಯ್ಯಾ
ಬೆಂದೊಡಲ ಹೊರೆವುದಕ್ಕೇವೆ ಚೆನ್ನಮಲ್ಲಿಕಾರ್ಜುನಾ ಕೊಲ್ಲು
ಕಾಯಿ ನಿಮ್ಮ ಧರ್ಮ

೫

ಸೊಣಗಂಗೆ ಖಂಡವ ಚೆಲ್ಲುವ ತೆರನಂತೆ
ಸಂಸಾರಿಗೆ ಸಂಸಾರವನಲ್ಲದೆ ಶರಣಪದಂಗಳ ತೋರುವನೇ ?
ಭಕ್ತಿಪಥಂಗಳ ತೋರುವನೇ ? ತೋರನು ಅಜ್ಞಾನಿಜೀವಿಗಳಿಗೆ
ಇದಕ್ಕೆ ಆಗಮ ಸಾಕ್ಷಿ—

ಅನೃತಂ ಕರ್ಣಸುಖದಂ ಋತಂ ಕರ್ಣಾರುಚಿಪ್ರದಂ ।
ಚರ್ಮಖಂಡನ ಭಕ್ಷ್ಯಾಣಾಂ ಶುನಾಮನ್ನಮರೋಚಕಂ ॥

ಇಂತೆಂದುದಾಗಿ ಸೊಡ್ಡಳದೇವನು ಭವದುಃಖದೋಣಿಯಲ್ಲಾಡಿಸುವನು

## ಸಂಸಾರವ್ಯಾಕ್ತಿ ನಿರಸನ ಸ್ಥಲ ೭

ಈ ಪ್ರಕಾರದಿಂ ಸಂಸಾರ ಹೊಲ್ಲೆಂದು ನಿರಸನವಂ ಮಾಡಿ ನುಡಿದ ವಚನಂಗಳು

ವಾತೂಲತಂತ್ರೇ—

ವ್ಯಾಪಾರಂ ಸಕಲಂ ತ್ಯಕ್ತ್ವಾ ಪೂಜಯಧ್ವಂ ಸದಾಶಿವಮ್ ।
ನಿಕಟಾ ಏವ ದೃಶ್ಯಂತೇ ಕೃತಾಂತನಗರದ್ರುಮಾಃ ॥ ೧ ॥

ಎಲೈ ಮನುಷ್ಯರುಗಳಿರಾ ಸಮಸ್ತವ್ಯಾಪಾರವಂ ಬಿಟ್ಟು ಸದಾಶಿವನಂ ಪೂಜಿಸಿರಿ ಇಲ್ಲದಿರೆ ಯಮನ ಪಟ್ಟಣದ ಮರಗಳು ಸಮೀಪವಾಗಿಯೇ ಕಾಣಬರುತ್ತಿರುವವು.

ಸ್ಕಾಂದೇ—

ಊರ್ಧ್ವಾಧೋ ವರ್ತತೇ ಜೀವೋ ಜಾಗ್ರದಾದಿ ದಶಾವೃತಃ ।
ಲೂತಿ ಕಾವಲಯೇ ಲೂತೋ ಯಥಾ ಭ್ರಮತಿ ನಿತ್ಯಶಃ ॥ ೨ ॥

ಜೀವನು ಜಾಗ್ರಾವಸ್ಥೆ ಮೊದಲಾದ ದಶಾವಸ್ಥೆಗಳಿಂದ ಸುತ್ತಲ್ಪಟ್ಟವನಾಗಿ ಮೇಲೆಯೂ ಕೆಳಗೆಯೂ ಜೇಡರ ಹುಳುವು ತನ್ನ ನೆಯಿಗೆಯ ಸುತ್ತಿನಲ್ಲಿ ತಿರುಗುವಂತೆ ಸಂಸಾರದಲ್ಲಿ ತಿರುಗುತ್ತಿಹನು.

ಲೈಂಗೇ—

ಪ್ರವೃತ್ತೋ ರಾಗಲೋಭಾದ್ಯೈರ್ದೋಷೈಃ ಸಂಯುಜ್ಯತೇ ಹಿ ಸಃ ।
ದೋಷಯುಕ್ತಃ ಪುಮಾನ್ ಕರ್ಮ ಕರೋತಿ ಚ ಶುಭಾಶುಭಮ್ ॥ ೩ ॥

ಸಂಸಾರವುಳ್ಳವನು ಪರತಂತ್ರನಾಗಿ ರಾಗಲೋಭಂಗಳೇ ಮೊದಲಾದ ದೋಷಂಗಳಿಂದ ಕೂಡಿರುವನು. ದೋಷಗಳಿಂದ ಕೂಡಿದ ಪುರುಷನು ಪುಣ್ಯಪಾಪಂಗಳೆಂಬ ಕರ್ಮವನ್ನು ಮಾಡುತ್ತಿಹನು.

ಸೂತಸಂಹಿತಾಯಾಮ್—

ಸ್ಥೌಲ್ಯಂ ಕಾರ್ಶ್ಯಂ ವ್ಯಾಧಯಶ್ಚ ಕ್ಷುತ್ತೃಡ್ವೈರ ಭಯಾನಿ ಚ ।
ಪ್ರೀತಿರ್ಜರಾ ಚ ನಿದ್ರಾ ಚ ಮೋಹಶೋಕ ರತಿರ್ಮದಾಃ
ನ ದೇಹೇ ಸಂತಿ ಜಾತಸ್ಯ ಮಾನವಸ್ಯೇತಿ ನಿಶ್ಚಿತಮ್ ॥ ೪ ॥

ಸ್ಥೂಲತ್ವವು ಕೃಶತ್ವವು ವ್ಯಾಧಿಗಳು ಹಸಿವು ತೃಷೆ ವೈರವು ಭಯಗಳು ಪ್ರೀತಿ ರೋಗ ನಿದ್ರೆ ಮೋಹ ದುಃಖ ಸುರತ ಮದಗಳು ಹುಟ್ಟಿದ ಮಾನವನ ದೇಹದಲ್ಲಿ ಸ್ವಾಭಾವಿಕವಾಗಿರುತ್ತವೆ.

ವಿಷ್ಣುಪುರಾಣೇ—

ಕುಟುಂಬಚಿಂತಾಕುಲಿತಸ್ಯ ಪುಂಸಶ್ಶ್ರುತಂ ಚ ಶೀಲಂ ಚ
ಗುಣಾಶ್ಚ ಸರ್ವೇ ।
ಅಪಕ್ವ ಕುಂಭೇ ನಿಹಿತಾ ಇವಾಪಃ ಸ್ರವಂತಿ ದೇಹೇನ ಸಮಂ
ವಿನಾಶವತ್ ॥ ೫ ॥

ಕುಟುಂಬ ವಿಷಯವಾದ ಚಿಂತನೆಯಿಂದ ವ್ಯಾಕುಲನಾದ ಮನುಜನಿಗೆ ಶಾಸ್ತ್ರಂಗಳು ಸಚ್ಚಾರಿತ್ರಂಗಳು ಸಮಸ್ತಗುಣಂಗಳು ಹಸಿಯ ಮಡಕೆಯೊಳಗೆ ಇರಿಸಲ್ಪಟ್ಟ ಉದಕಗಳು ಹೇಗೆ ಕೆಡುವವೋ ಹಾಗೆ ಅವನ ದೇಹದೊಡನೆ ಕೂಡಿ ಕೆಡುತ್ತಿರುವವು.

ಶಿವಧರ್ಮೇ—

ಸಂಸಾರಸಾಗರೇ ಘೋರೇ ಧರ್ಮಾಧರ್ಮೋರ್ಮಿ ಸಂಕುಲೇ ।
ಶಿವಧರ್ಮಾಚರಾತ್ಪುತ್ರ ಮೋಕ್ಷಲಾಭೋ ಭವೇದಿಹ ॥ ೬ ॥

ಪುಣ್ಯಪಾಪಗಳೆಂಬ ತೆರೆಗಳಿಂದ ವ್ಯಾಕುಲವಾದ ಭಯಂಕರವಾದ ಸಂಸಾರವೆಂಬ ಸಮುದ್ರದಲ್ಲಿ ಎಲೈ ಕುಮಾರನೆ ಸಂಸಾರ ಮಾರ್ಗವನು ಹೊದ್ದದೆ ಶಿವಧರ್ಮದಿಂದ ಈ ಲೋಕದಲ್ಲಿ ಮೋಕ್ಷವನೈದಲಹುದು.

## ವಚನಗಳು

೧

ಇಂದಿಗೆಂತು ನಾಳಿಂಗೆಂತೆಂದು ಬೆಂದೊಡಲ ಹೊರೆಯ
ಹೋಯಿತ್ತೆನ್ನ ಸಂಸಾರ
ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ
ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ
ಎಂದೆಂದು ಸದಾಶಿವನ ಕುಂದದೆ ನೆನೆಯಲೀಯದೆ
ಕೊಂದುದೀ ಮಾಯೆ ಕೂಡಲಸಂಗಮದೇವಾ

೨

ದೇಹಧರ್ಮದಾಶೆ ಬೇರೆ ಭಕ್ತಿಯಿಲ್ಲದ ಬೇಗೆ ಬೇರೆ
ಎನಗೆಂದೇ ಮಾಡಿದಿರೇ ಈ ಸಕಲ ಪ್ರಪಂಚವನು

ಎನಗೆಂದೇ ಮಾಡಿದಿರೇ ಈ ಸಕಲ ವ್ಯಾಪಾರಂಗಳನು
ಎನಗೆ ನಿಶ್ಚಿಂತಪದವಿಯನಿನ್ನೆಂದಿಗೀವೆಯಯ್ಯಾ ಸಕಳೇಶ್ವರಾ

೩

ಸಂಸಾರ ಬೆಂಬಿಡದೆ ಕಾಡಿತ್ತಯ್ಯಾ ಏವೆನೇವೆನಯ್ಯಾ
ಅಂದಂದಿನ ದಂದುಗಕ್ಕೆ ಏವೆನೇವೆನಯ್ಯಾ
ಬೆಂದೊಡಲ ಹೊರೆವುದಕ್ಕೇವೆ
ಚೆನ್ನಮಲ್ಲಿಕಾರ್ಜುನಾ ಕೊಲ್ಲು ಕಾಯಿ ನಿಮ್ಮ ಧರ್ಮ

೪

ಹಗಲು ಹಸಿವೆಗೆ ಕುದಿದು ಇರುಳು ನಿದ್ರೆಗೆ ಮರುಗಿ
ಉಳಿದಾದ ಹೊತ್ತೆಲ್ಲ ವಿಷಯದಲ್ಲಿ ಬೆಂದು
ನಾನಿಮ್ಮ ದೆಶೆಯ ನರಿಯದ ಪಾಪಿನೋಡಯ್ಯಾ
ನಾ ನಿಮ್ಮ ದೆಶೆಯ ನರಿಯದ ಕರ್ಮಿ ನೋಡಯ್ಯಾ
ಮಹಲಿಂಗಕಲ್ಲೇಶ್ವರಾ ಅಸಗ ನೀರಡಿಸಿ ಸಾವತೆರನಂತೆ ಎನ್ನ ಯುಕ್ತಿ

೫

ಹೊತ್ತಾರೆಯಹೊತ್ತು ಮಲಮೂತ್ರವಿಸರ್ಜನಕ್ಕೆ ಕುದಿಯಲು ಹವಣಾಯಿತ್ತು
ಮಧ್ಯಾನ್ಹದ ಹೊತ್ತು ಹಸಿವು ತೃಷೆಗೆ ಕುದಿಯಲು ಹವಣಾಯಿತ್ತು
ಮೂರನೆಯ ಜಾವದ ಹೊತ್ತು ಹೊಟ್ಟೆತುಂಬಿದ ಬಳಿಕ ಕಾಮದ ಕಳವಳ ಕೈಕೊಂಬುದಯ್ಯಾ
ಇರುಳಾದಬಳಿಕ ನಿದ್ರೆಗೈದು ಬೆಳಗನ್ನಬರ ಸತ್ತಂತಿಹೆನು
ಏನುವನರಿಯದೆ ನಿಮ್ಮ ನೆನೆವರ ಚರಣಕ್ಕೆ ಶರಣೆಂಬೆನಯ್ಯಾ
ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ

೬

ಬಂಟತನವ ಮಾಡಬೇಕೆಂದು ಬಟ್ಟೆಯ ಬಡಿಯಬೇಕೆಂದು
ಕೆಟ್ಟುದನರಸಬೇಕೆಂದು ಕೊಟ್ಟುದ ಬೇಡಬೇಕೆಂದು

ಮುಂಜಾವದಲೇಳುವರು ಹಲಬರು ಕೆಲಬರು
ಆಹಾರವನುಣಬೇಕೆಂದು ವ್ಯವಹಾರವ ಮಾಡಬೇಕೆಂದು
ಆ ಹೆಣ್ಣು ತರಬೇಕೆಂದು ಈ ಹೆಂಣ ಕೊಡಬೇಕೆಂದು
ಮುಂದು ಜಾವದಲೇಳುವರು ಹಲಬರು ಕೆಲಬರು
ತಂದೆ ಪೊಡ್ಡಳಂಗೆ ತೊತ್ತುಸೇವೆಯ ಮಾಡಬೇಕೆಂದು
ಕಣ್ಣುತೆರಪುತ್ತಲೇಳುವರು ಅಲ್ಲಿಗಲ್ಲಿಗೊಬ್ಬರು

## ನಿದ್ರಾನಿರಸನ ಸ್ಥಲ: ೮

ಈ ಪ್ರಕಾರದಿಂ ಸಕಲಸಂಸಾರದಲ್ಲಿಯ ವ್ಯಾಪಾರವು ಹೊಲ್ಲವೆಂದು ಕಳೆದು ನುಡಿದರ್ಮಹಾಪುರಾತನರು. ಆ ಸಂಸಾರವ್ಯಾಪ್ತಿಯ ದೆಶೆಯಿಂದ ಸಕಲ ಪ್ರಾಣಿಗಳೆಲ್ಲರು ಮರೆದೊರಗಿ ಮತಿಭ್ರಷ್ಟರಾಗುವಹಾಗೆ ಮಾಡುವುದು ನಿದ್ರೆಯೆಂದರಿದು ಕಳೆದು ನುಡಿದ ವಚನಂಗಳು.

ಲೈಂಗೇ—

> ರಾತ್ರಿವಲ್ಮೀಕಮಧ್ಯಸ್ಥನಿದ್ರಾಸರ್ಪಸ್ಯ ದಂಶನಾತ್ ।
> ವಿದ್ಯಾಬುದ್ಧಿಯುತಾ ಧೀರಾಃ ಸರ್ವೇಽಪಿ ವಿಷಮೂರ್ಛಿತಾಃ ॥೧॥

ರಾತ್ರಿಯೆಂಬ ಹುತ್ತದ ಮಧ್ಯದಲ್ಲಿರುವ ನಿದ್ರೆಯೆಂಬ ಸರ್ಪವು ಕಚ್ಚಲೊಡನೆ ವಿದ್ಯಾಧಿಕರೂ ಬುದ್ಧಿಶ್ರೇಷ್ಠರೂ ಧೈರ್ಯವಂತರೂ ಮೊದಲಾದವರು ಆ ಸರ್ಪನ ವಿಷದಿಂದ ಮೂರ್ಛಿತರಾಗುವರು.

ಶಿವಧರ್ಮೇ—

> ಉದಯೇ ಜನನಂ ನಿತ್ಯಂ ರಾತ್ರ್ಯಾಂ ಚ ಮರಣಂ ತಥಾ ।
> ಅಜ್ಞಾನಂ ಸರ್ವಜಂತೂನಾಂ ತತ್ಪಂಥಾಶ್ಚ ಪುನಃ ಪುನಃ ॥೨॥

ಪ್ರತಿದಿನ ಸೂರ್ಯೋದಯ ಕಾಲದಲ್ಲಿ ಜನನವು; ಪ್ರತಿದಿನ ರಾತ್ರಿಯಲ್ಲಿ ಮರಣವು; ಸಕಲ ಪ್ರಾಣಿಗಳಿಗೆ ಅಜ್ಞಾನವು ಮತ್ತು ಮತ್ತು ಉಂಟಾಗುವುದು.

ಆದಿತ್ಯಪುರಾಣೇ—

> ನಿದ್ರಾಮಾತ್ರಂ ಹರೇದ್ವಾಯುಃ ಕ್ಷೀಣಾಗ್ನೀ ರಾಗಮೂರ್ಜಿತವತ್ ।
> ಮನಃ ಪವನಸಂಗೇನ ಯಥಾ ನಿದ್ರಾ ಷಡಾನನ ॥ ೩ ॥

ನಿದ್ರೆಯ ದೆಶೆಯಿಂದ ಪ್ರಾಣಿಗಳ ಮನಸ್ಸು ವಾಯುವಿನ ಕೂಡೆ ಹೋಗುವುದು ಅಗ್ನಿಮಾಂದ್ಯವು ರಾಗೋದ್ರೇಕವು ಆಯುಷ್ಯ ನಾಶವು ಆಗುವುದು. ಅದುಕಾರಣ ನಿದ್ರೆಯಿಂದ ಜೀವರು ಕೆಡುತ್ತಿಹರು.

ಶಿವಧರ್ಮೇ—

ದೇವಾಶ್ಚ ದಾನವಾಶ್ಚೈವ ಮನುಜಾದ್ಯಖಿಲಜೀವಿನಃ ।
ನಿದ್ರಾವಿಷಸಂಪ್ರಾಪ್ತಾಃ ಜ್ಞಾನಶೂನ್ಯಾಶ್ಚ ಮೂರ್ಛಿತಾಃ ॥೪॥

ದೇವದಾನವ ಮಾನವರು ಮೊದಲಾದ ಸಕಲ ಜೀವರುಗಳು ನಿದ್ರೆಯೆಂಬ ವಿಷವ್ಯಾಪ್ತಿಯಿಂದ ಜ್ಞಾನವು ಕೆಟ್ಟು ಮೂರ್ಛಿತರಾಗುತ್ತಿಹರು.

ಶಿವರಹಸ್ಯೇ—

ಪ್ರಾಣಾನಾಕೃಷ್ಯ ಸರ್ವೇಷಾಂ ಪ್ರಾಣಿನಾಂ ಚ ಜಗತ್ತ್ರಯೇ ।
ನಿದ್ರಾ ನಿಪೀಡ್ಯತೇ ಸರ್ವಾನ್ ಜೇತುಂ ತಾಂ ಕೇನ ಶಕ್ಯತೇ ॥೫॥

ಮೂರುಲೋಕದೊಳಗಿರ್ದ್ದ ಜೀವರುಗಳ ಪ್ರಾಣಂಗಳನು ಸೆಳೆದುಕೊಂಡು ನಿದ್ರಾಂಗನೆಯು ನೋಯಿಸುತ್ತಿಹಳು ಅವಳನ್ನು ಗೆಲುವುದಕ್ಕೆ ಆರಿಗೂ ಶಕ್ಯವಲ್ಲ.

ಲೈಂಗೇ—

ಅಂಧಕಾರಗುಹಾಮಧ್ಯೇ ನಿದ್ರಾ ನಾಮೋಗ್ರರಾಕ್ಷಸೀ ।
ಸ್ಥಿತ್ವಾ ಸಮಸ್ತಧೀರಾಣಾಂ ಧೃತಿಂ ಸಂಹರತಿ ಕ್ಷಣಾತ್ ॥೬॥

ನಿದ್ರೆಯೆಂಬ ಮಹಾರಾಕ್ಷಸಿಯು ಅಂಧಕಾರವೆಂಬ ಗುಹೆಯೊಳಗಿದ್ದು ಸಮಸ್ತ ಧೀರರುಗಳ ಧೈರ್ಯವನ್ನು ಕ್ಷಣಮಾತ್ರದಿಂ ಸಂಹರಿಸುತ್ತಿಹಳು.

ಸೂತಸಂಹಿತಾಯಾಮ್—

ನಿದ್ರಾಸೂಕ್ಷ್ಮಾವಸಾನೇನ ವಿಸ್ಮೃತ್ಯ ವಿಷಯಾದಿಕಾನ್ ।
ವಿಮೂರ್ಛನಾಂ ಸಮಭ್ಯೇತ್ಯ ಪತಂತ್ಯಪಿ ಚ ಪಂಡಿತಾಃ ॥೭॥

ನಿದ್ರೆಯೆಂಬ ಚಿಕ್ಕ ಸಾವಿನಿಂದ ಎಲ್ಲ ವಿಷಯಾದಿಕಂಗಳನು ಮರೆದು ಚೆನ್ನಾಗಿ ಬಲ್ಲ ವಿದ್ವಾಂಸರೂ ಅತಿ ಮೂರ್ಛೆಯನ್ನು ಹೊಂದುವರು.

## ವಚನಗಳು

೧

ರಾತ್ರಿಯೆಂಬ ಹುತ್ತಿನೊಳಗೆ ನಿದ್ರೆಯೆಂಬ ರಾಹು-
ಹೆಡೆಯನೆತ್ತಿ ಅಟ್ಟಿ ಕಚ್ಚಲೊಡನೆ ಅಂಜನಾಸಿದ್ಧರ ಅಂಜನವು
ಹಾರಿತ್ತು

ಘುಟಿಕಾಸಿದ್ಧರ ಘುಟಿಕೆಯುರುಳಿತ್ತು
ಯಂತ್ರಿಗಳ ಯಂತ್ರ ಎದ್ದುಹೋಯಿತ್ತು
ಮಂತ್ರಿಗಳ ಮಂತ್ರ ಮರೆತುಹೋಯಿತ್ತು
ಔಷಧಿಗಳ ಔಷಧವನಾರದಿಗೊಂಡಿತ್ತು
ಸರ್ವವಿದ್ಯಾಮುಖದ ಜ್ಯೋತಿ ನಂದಿತ್ತು
ಈ ವಿಷದ ಲಹರಿಯಲ್ಲಿ ಮೂರು ಲೋಕದವರೆಲ್ಲರು-
ಮೂರ್ಛಿತರಾದರು ಕಾಣಾ ಗುಹೇಶ್ವರಾ

೨

ಉದಯದಲ್ಲಿ ಹುಟ್ಟಿದ ಪ್ರಾಣಿಗಳಿಗೆ-
ಅಸ್ತಮಾನದಲ್ಲಿ ನಿಚ್ಚನಿಚ್ಚ ಮರಣವಾಯಿತ್ತಲ್ಲ
ಇದರಂತುವನಾರೂ ತಿಳಿಯದೆ ಅಜ್ಞಾನಿಗಳಾಗಿ ಹೋದರಲ್ಲ
ಚಿಕ್ಕಯ್ಯಪ್ರಿಯಸಿದ್ಧಲಿಂಗ ಇಲ್ಲ ಇಲ್ಲ ನಿಲ್ಲು ಮಾಣು

೩

ದೇವದಾನವ ಮಾನವಾದಿಗಳೊಳಗಾದ ಎಲ್ಲ ಜೀವರುಗಳಲ್ಲಿ
ಹಿರಿದುಕಿರಿದೆನ್ನದೆ ನಿದ್ರೆಯ ಬಲೆಯಂ ಬೀಸಿ-
ಸರಿದು ತಗೆಯಲೊಡನೆ ಅರಿವು ಮರೆಯಿತ್ತು
ನೋಟ ಜಾರಿತ್ತು ಬುದ್ಧಿತೊರೆಯಿತ್ತು ದೇಹವೊರಗಿತ್ತು
ಇದು ನಿಚ್ಚ ನಿಚ್ಚ ಬರುವ ಹೋಗುವ-
ಸಕೀಲವನಾರು ಅರಿಯರು ನೋಡಾ ಕೂಡಲಸಂಗಮದೇವಾ

೪

ಮೂರುಲೋಕದವರನೆಲ್ಲರನು ನಿದ್ರಾಂಗನೆ ಹಿಂಡಿಹೀರಿ-
ಪ್ರಾಣಾಕರ್ಷಣೆಯಂ ಮಾಡಿ ತಟ್ಟುಗೆಡಹಿದಳಲಾ
ಇವಳ ಗೆಲುವ ಧೀರರನಾರಂ ಕಾಣೆ
ಇವಳ ಬಾಣಕ್ಕೆ ಗುರಿಯಾಗಿ ಏಳುತ್ತ ಬೀಳುತ್ತಲಿದ್ದರೆಲ್ಲರು
ಗುಹೇಶ್ವರಾ

೫

ಯುಗವ ಬಲ್ಲೆವು ಜುಗವ ಬಲ್ಲೆವೆಂಬರು
ನಿಚ್ಚ ನಿಚ್ಚ ಬಹ ಚಿಕ್ಕಸಾವು ಅರೆನಿದ್ರೆಯನಾರು ಅರಿಯರು
ಅವರ ಬಾಯ ಬಾಗಿಲ ತಲೆವೊಲದ ಉಲು ಹಡಗಿತ್ತು ಗುಹೇಶ್ವರಾ

೬

ಅಂಧಕಾರವೆಂಬ ಗಹ್ವರದೊಳಗೆ ನಿದ್ರೆಯೆಂಬ ರಾಕ್ಷಸಿ
ವೀರರ ನಿಗ್ರಹಿಸಿ ನೀರುಮಾಡಿ ಧೀರರ ಧೃತಿಗೆಡಿಸಿ
ಶಾಪಾನುಗ್ರಹ-ಸಮರ್ಥರ ಸತ್ತಂತಿರಿಸಿ
ನಿಚ್ಚ ನಿಚ್ಚ ಜೀವನಾಶ ಮಾಡುತ್ತಿದ್ದಳು ನೋಡಾ
ಕೂಡಲಸಂಗಮದೇವಾ

## ಆಶಾನಿರಸನ ಸ್ಥಲ: ೯

ಈ ಪ್ರಕಾರದಿಂದ ಸಂಸಾರವ್ಯಾಪ್ತಿವಿಡಿದು ಜೀವರುಗಳು ಮರವೆಯ ನೈದುವರೆಂಬುದನರಿದು ನಿದ್ರೆಯ ನಿರಸನಮಂ ಮಾಡಿದರ್ಮಹಾಪುರಾತನರು. ಆ ಮರವೆಯನ್ನೈದುಸುತ್ತಿದ್ದ ಸಂಸಾರವಾವುದರಿಂ ಕಾರಣವೆಂದು ಸ್ವಾನುಭಾವ ದೃಷ್ಟಿಯಿಂ ನಿರೀಕ್ಷಿಸಿ ಆಶೆಯೇ ಕಾರಣವೆಂಬುದನರದು ಆ ಆಶೆಯ ಧಿಃಕ್ಕರಿಸಿ ನುಡಿದ ವಚನಂಗಳು.

ಆದಿತ್ಯಪುರಾಣೇ—

ಆಶಯಾ ಬಧ್ಯತೇ ಲೋಕಃ ಕರ್ಮಣಾಂ ಬಹುಚಿಂತಯಾ ।
ಆಯುಃ ಕ್ಷೀಣಂ ನ ಜಾನಾತಿ ವೇಣುಸೂತ್ರಮಿವ ಸ್ವಯಂ ॥೧॥

ಜೀವರುಗಳು ಕರ್ಮಂಗಳ ಬಹುಚಿಂತೆಯಿಂದ ಆಶಾಬದ್ಧರಾಗಿ ತಮ್ಮ ಆಯುಷ್ಯದ ನಾಶವನರಿಯದೆ ವ್ಯರ್ಥವಾಗಿ ಕೆಟ್ಟುಹೋಗುತ್ತಿಹರು.

ಏಕಂ ದೃಷ್ಟ್ವಾ ಶತಂ ದೃಷ್ಟ್ವಾ ದಷ್ಟ್ವಾ ಶತೈರಪಿ ।
ಅತಿತೃಷ್ಣಾವಶಾರ್ತಸ್ಯ ಚಕ್ರಂ ಹರತಿ ಮಸ್ತಕಮ್ ॥೨॥

ನಾಗಾರ್ಜುನ ಸಿದ್ಧನು ಒಂದು ತೂಕ ವೇದಿಯಂ ಕಂಡು ನೂರುತೂಕ ವೇದಿಯಂ ಕಂಡು ಸಹಸ್ರ ವೇದಿಯಂ ಕಂಡು ತಣಿಯದೆ ಆಶೆಯಂ ಮಾಡಲಾಗಿ ಚಕ್ರಬಂದು ತಲೆಯ ಕೊಂಡು ಹೋಯಿತ್ತು.

ಶಿವಧರ್ಮೇ—

ಆಶಾಪಾಶೈರ್ಗಲೇ ಬದ್ಧಾ ಗೃಹಶಾಖಾವಲಂಬನಾಃ ।
ಪುತ್ರದಾರಾ ದ್ವಯಶ್ವಾನೈಃ ಖಾದ್ಯಂತೇ ಖಲ್ವಹರ್ನಿಶಮ್ ॥೩॥

ಆಶೆಯೆಂಬ ಪಾಶದಿಂದ ಕೊರಳಕಟ್ಟಿಸಿಕೊಂಡು ಮನೆಯೆಂಬ ಕೊಂಬೆಯ ಗೊಂತಿನಲ್ಲಿ ಕಟ್ಟಲ್ಪಟ್ಟವರಾಗಿ ಹೆಂಡರು ಮಕ್ಕಳೆಂಬ ನಾಯಿಗಳಿಂದ ಅನುದಿನವೂ ತಿನಿಸಿಕೊಳ್ಳುತ್ತಿಹರು.

ವ್ಯಾಧೀನಾಮಾಗರಂ ತೋಯಂ ಪಾಪಾನಾಮಾಗರಂ ಸ್ತ್ರಿಯಃ ।
ನಾಶಾನಾಮಾಗರಂ ಕ್ರೋಧ ಆಶಾಪರಿಭವಸ್ತಥಾ ॥೪॥

ವ್ಯಾಧಿಗಳಿಗೆ ನೆಲೆಯಾದುದುಕವು ಪಾಪಂಗಳಿಗೆ ನೆಲೆಯಾದವರು

ಸ್ತ್ರೀಯರು ಕೇಡುಗಳಿಗೆ ನೆಲೆಯು ಕೋಪವು ಆಶೆಯೇ ಪರಿಭವಂಗಳಿಗೆ ನೆಲೆವನೆಯು.

ವಿಷ್ಣುಪುರಾಣೇ—

ಜಗತಾಂ ಪತಿರಿತ್ಯುಕ್ತ್ವಾ ವಿಷ್ಣುರ್ವಾಮನತಾಂ ಗತಃ ।
ಅಧಿಕಃ ಕಃ ಪರಂ ತಸ್ಮಾದ್ಯೋ ನ ಯಾಸ್ಯತಿ ಲಾಘವಮ್ ॥೫॥

ಜಗತ್ಪತಿಯೆನಿಸಿದ ವಿಷ್ಣುವು ತಾನು ಆಶೆಯಿಂದ ಬೇಡಹೋಗಿ ಕುಬ್ಜ ನಾದನು. ಆತನಿಂದ ದೊಡ್ಡವರಾರು ? ಅದು ಕಾರಣ ಆಶೆಯಿಂದ ಲಘು ವೆನಿಸದವರಾರು ?

ಆಶಾಯಾ ಯೇ ದಾಸಾಸ್ತೇ ದಾಸಾಃ ಸರ್ವಲೋಕಸ್ಯ ।
ಆಶಾ ಯೇಷಾಂ ದಾಸೀ ತೇಷಾಂ ದಾಸಾಯತೇ ಲೋಕಃ ॥೬॥

ಆಶೆಗೆ ಬಂಟರಾದವರು ಎಲ್ಲರಿಗೂ ಬಂಟರು. ಆಶೆ ತಾನಾರಿಗೆ ದಾಸಿ ಯಾಗಿಹಳೋ ಅವರಿಗೆ ಸರ್ವರು ಬಂಟರಾಗಿಹರು.

ಶಿವಧರ್ಮೇ—

ಆಶಾ ಚ ನರಕಶ್ಚೈವ ನಿರಾಶಾ ಮುಕ್ತಿರೇವ ಚ ।
ಆಶಾ ನಿರಾಶಾ ಹೀನಾ ಯೇ ತತ್ಸುಖೇನ ಸಮಂ ನ ಹಿ ॥೭॥

ಆಶೆಯೆಂಬುದೇ ನರಕ ನಿರಾಶೆಯೆಂಬುದೇ ಸುಖ ಆಶೆ ನಿರಾಶೆ ಎರಡಿಲ್ಲ ದಾತನಿಗೆ ಆರೂ ಸರಿಯಲ್ಲ.

## ವಚನಗಳು

೧

ಪರರಾಶೆಯೆಂಬ ಜ್ವರಹತ್ತಿ ನಾನು ಕಳವಳಿಸಿ ನುಡಿವೆನಯ್ಯಾ
ಹೊನ್ನು ಹೆಣ್ಣು ಮಣ್ಣು ಬಯಸಿ ವಿಕಳತೆಗೊಂಡಂತೆ
ಪ್ರಲಾಪಿಸುತ್ತ ನುಡಿವೆನಯ್ಯಾ ಈ ಕಳವಳವ ನಿಲಿಸಿ
ನಿಮ್ಮ ಕರುಣಾಮೃತವೆಂಬ ಕಷಾಯವನೆರೆದು
ಪರರಾಶೆಯೆಂಬ ಜ್ವರವ ಮಾಣಿಸು
ಬಸವಪ್ರಿಯ ಕೂಡಲಚೆನ್ನಸಂಗಮದೇವಾ

೨

ಈ ಆಶೆಯೆಂಬವಳು ಆರನಾದಡೂ ತನ್ನತ್ತಲೆಳೆವಳು ನೋಡಾ
ಈ ಆಶೆಯೆಂಬವಳು ಅವರಿವರೆನ್ನದೆ ಆರನಾದಡೆಯೂ
ಕೊಲಲಿಕ್ಕೆ ಬಗೆವಳು
ಈ ಆಶೆಯೆಂಬವಳಿಂದಲೇ ನಿಮ್ಮೆಡೆಗಾಣದಿಪ್ಪೆ
ಈ ಆಶೆಯೆಂಬವಳನೆಂದಿಗೆ ನೀಗಿ ಎಂದು ನಿಮ್ಮನೊಡಗೂಡಿ
ಬೇರಾಗದೆಂದಿಪ್ಪೆನೋ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ

೩

ಧರೆ ದಶವಳಯವೆಲ್ಲಾ ತನಗಾದೊಡಂ ನಿಲ್ಲಳು
ಇನಿತು ತ್ರಿಭುವನ ರಾಜ್ಯಪದಂಗಳು ತನಗಾದೊಡೆಯೂ ನಿಲ್ಲಳು
ಅನಿತರೊಳುಂ ತೃಪ್ತಿಪಡೆಯಳು
ಈ ಆಶೆಯೆಂಬವಳಿಂದಲೇ ನಿಮ್ಮೆಡೆಗಾಣದಿಪ್ಪೆ
ಈ ಆಶೆಯೆಂಬ ಪಾತಕಿಯನೆಂದಿಗೆ ನೀಗಿ ನಿಮ್ಮೊಡಗೂಡಿ
ಬೇರಾಗದೆಂದಿಪ್ಪೆನೋ ಕಪಿಲಸಿದ್ಧಮಲ್ಲಿಕಾರ್ಜುನಾ

೪

ಆದಿ ಮಧ್ಯಾವಸಾನದಲ್ಲಿ ಎನ್ನನು ಆಶೆಯೇ ಅವಗ್ರಹಿಸಿ ಹಿಡಿಯುತ್ತಿದೆ
ಶಿವಶಿವಾ ಆಶೆಯಿಂದಲೇ ಘಾಸಿಯಾಗುತ್ತಿದ್ದೇನೆ
ಶಿವ ಶಿವಾ ಈ ಆಶೆಯ ಕೆಡಿಸಿ ನಿಮ್ಮ ಶ್ರೀಪಾದದಾಶೆಯೇ
ನಿವಾಸವಾಗಿರಿಸಯ್ಯಾ
ಎನ್ನ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೫

ತರಣಿಯ ಹುಳು ತನ್ನ ಸ್ನೇಹದಿಂದ ಮನೆಯಮಾಡಿ
ತನ್ನ ನೂಲು ತನ್ನನೇ ಸುತ್ತಿ ಸಾವತೆರನಂತೆ
ಮನಬಂದುದ ಬಯಸಿ ಬೇವುತ್ತಿರುವೆನಯ್ಯಾ
ಎನ್ನ ಮನದ ದುರಾಶೆಯ ಬಿಡಿಸಿ ನಿಮ್ಮತ್ತ ತೋರಾ
ಚೆನ್ನಮಲ್ಲಿಕಾರ್ಜುನಾ

೬

ಬ್ರಹ್ಮವಿಷ್ಣುಮೊದಲಾದ ದೇವದಾನವ ಮಾನವರೆಲ್ಲರನು
ಆಶೆಯೇ ಘಾಸಿಮಾಡಿ ಕಾಡಿತ್ತು
ಮಹತ್ವ ತಪವ್ರತನಿಯಮವುಳ್ಳ ಗುರುತ್ವವುಳ್ಳವರುಗಳ
ಮಹತ್ವ ತಪವ್ರತನಿಯಮಂಗಳ ಗುರುತ್ವಂಗಳ ಕೆಡಿಸಿ
ಲಘುಮಾಡಿ ನಗೆಗೆಡೆ ಮಾಡಿತ್ತು
ಇಂತಪ್ಪ ಸಾಮರ್ಥ್ಯಪುರುಷರ ಘಾಸಿಮಾಡಿ ಸೋಲಿಸಿ
ತಾ ಗೆಲುವ ಸಾಮರ್ಥ್ಯವುಳ್ಳ ಆಶೆಯಿದೇನೋ ಎಂದು ವಿಚಾರಿಸಲು
ಈ ಆಶೆ ಶಿವಸಂಬಂಧಿಯಾದ ಇಚ್ಛಾಶಕ್ತಿ
ಶಿವನೊಪ್ಪದವರನ್ನು ಶಿವನಾಜ್ಞೆಯಿಂದ ಈ ಆಶೆಯೆಂಬ
ವಿಧಿಕಾಡಿ ತಿಂಬುದು
ಈ ಆಶೆಯೆಂಬವಿಧಿ ಶಿವನೊಲಿದವರನು ಹೊದ್ದಲಮ್ಮದಾಗಿ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರನ ಶರಣರು ನಿರಾಶಾಸಂಪನ್ನರು

## ದ್ವಂದ್ವಕರ್ಮನಿರಸನ ಸ್ಥಲ: ೧೦

ಈ ಪ್ರಕಾರದಿಂ ಜೀವ ಜೀವರುಗಳ ವಿಕಾರಂಗಳಿಗೆ ಮೂಲಭೂತವಾದುದು ಆಶೆಯೆಂದರಿದು ಆ ಆಶೆಯ ನಿರಸನವಂ ಮಾಡಿ ನುಡಿಧರ್ಮಹಾ ಪುರಾತನರು ಇಂತಪ್ಪ ಆಶೆಯ ಉತ್ಪತ್ತಿಸ್ಥಾನವಾವುದೆಂದು ವಿಚಾರಿಸುವ ಸ್ವಯಾನುಭಾವಿಗಳಿಗೆ ಸುಖರೂಪಿನಿಂದ ತೋರುತ್ತಿಹ ಸುಖವೇ ದುಃಖವಾಗಿಹುದಾದಕಾರಣ ಮುಂದೆ ದ್ವಂದ್ವಕರ್ಮನಿರಸನ ಸ್ಥಲವಾದುದು.

ವಾಶಿಷ್ಠೇ—

ಜನ್ಮನ್ಯತ್ರ ಮಹಾದುಃಖಂ ಮ್ರಿಯಮಾಣಸ್ಯ ಚಾಪಿ ಯತ್ ।
ಯಾತನಾಸು ಯಮಸ್ಯೋಗ್ರಂ ಗರ್ಭಸಂಕ್ರಮಣೇಷು ಚ ॥೧॥

ಹುಟ್ಟುವಲ್ಲಿ ದುಃಖವಧಿಕವಾದುದು ಸಾಯುವಲ್ಲಿ ಅದಕ್ಕೂ ಅಧಿಕವಹ ದುಃಖವು ಯಮನಯಾತನೆಗಳಲ್ಲಿ ಉಗ್ರವಾದ ದುಃಖವು ಗರ್ಭಂಗಳಲ್ಲಿ ತೊಳಲುವಲ್ಲಿಯೂ ಉಗ್ರವಾದ ದುಃಖವು.

ಶಿವಧರ್ಮೇ—

ಅರ್ಥಾನಾಮರ್ಜನೇ ದುಃಖಂ ವರ್ಧಿತಾನಾಂ ಚ ರಕ್ಷಣೇ ।
ನಾಶೇ ದುಃಖಂ ವ್ಯಯೇ ದುಃಖಮರ್ಥಾತ್ಪುಂಸಃ ಕುತಃ ಸುಖಮ್ ॥೨॥

ಧನವ ಗಳಿಸುವಲ್ಲಿ ದುಃಖವು ಅದನ್ನು ರಕ್ಷಿಸುವಲ್ಲಿ ದುಃಖವು ನಾಶವಾಗಿ ಹೋದರೂ ದುಃಖವು ವೆಚ್ಚಮಾಡಿದಲ್ಲಿಯೂ ದುಃಖವು ಈ ಪ್ರಕಾರವಾದರ್ಥದಿಂದ ಮನುಷ್ಯನಿಗೆ ಸುಖವೆಲ್ಲಿಯದು ?

ಲೈಂಗೇ—

ಕೌಮಾರೇ ಯೌವನೇ ಬಾಲ್ಯೇ ವಾರ್ಧಕೇ ಮರಣೇ ತಥಾ ।
ವಿಚಾರೇ ನಶ್ಯತೇ ದುಃಖಂ ಸ್ತ್ರೀಸಂಸರ್ಗಾದಿಭಿರ್ದ್ವಿಜಾಃ ॥
ದುಃಖೇನೈಕೇನ ವೈ ದುಃಖಂ ಪ್ರಶಾಮ್ಯತಿ ನ ದುಃಖಿನಾಮ್ ॥೩॥

ಎಲೈ ಬ್ರಾಹ್ಮಣರುಗಳಿರಾ ಕುಮಾರಾವಸ್ಥೆಯಲ್ಲಿ ಪ್ರಾಯದಲ್ಲಿ ಬಾಲ್ಯದಲ್ಲಿ ವೃದ್ಧತ್ವದಲ್ಲಿ ಮತ್ತು ಮರಣದಲ್ಲಿ ಸ್ತ್ರೀಯರುಗಳ ಸಂಸರ್ಗ ಮೊದಲಾದವು

ಗಳಲ್ಲಿ ಉಂಟಾದ ದುಃಖವು ಸತ್ಪುರುಷರಿಗೆ ವಿವೇಕದಿಂದಲ್ಲದೆ ನಿಲ್ಲದು. ದುಃಖವುಳ್ಳವರಿಗೆ ಆ ದುಃಖವು ಶಾಂತವಾಗದು.

ಗಾಂಧರ್ವೇ ಚ ತಥಾ ಚೇಂದ್ರೇ ಸೌಮ್ಯಲೋಕೇ ದ್ವಿಜೋತ್ತಮಾಃ |
ಪ್ರಾಜಾಪತ್ಯೇ ತಥಾ ಬ್ರಾಹ್ಮೇ ವೈಷ್ಣವೇ ಸೌರಕೇ ತಥಾ ||
ತತ್ರಾತಿಶಯ ಭೋಗೇಭ್ಯೋ ದುಃಖಾನ್ಯೇವ ಹಿ ಸುವ್ರತಾಃ ||೪||

ಒಳ್ಳೆಯ ವ್ರತವುಳ್ಳ ಎಲೈ ಬ್ರಾಹ್ಮಣರುಗಳಿರಾ ಗಂಧರ್ವಲೋಕದಲ್ಲಿ ಇಂದ್ರಲೋಕದಲ್ಲಿ ಚಂದ್ರಲೋಕದಲ್ಲಿ ನವಬ್ರಹ್ಮಲೋಕದಲ್ಲಿ ವಿಷ್ಣುಲೋಕ ದಲ್ಲಿ ಸೂರ್ಯಲೋಕದಲ್ಲಿ ಅತಿಶಯವಾದ ಭೋಗಂಗಳು ಮೊದಲಾದ ಸುಖಂಗಳಿಂದ ದೇಹಿಗಳಿಗೆ ದುಃಖವು.

ಸಿದ್ಧಾಂತಶೇಖರೇ—

ತಸ್ಮಾದತ್ರ ಸುಖಂ ನೈವ ವಿದ್ಯತೇ ದೋಷಹೇತುಕೇ |
ಮೋಕ್ಷೇ ತು ಸುಖಮತ್ಯರ್ಥಂ ತದ್ವಿವೇಕಾದಿಭಿರ್ಭವೇತ್ ||೫||

ಅದು ಕಾರಣ ರಾಗದ್ವೇಷಾದಿ ದೋಷಂಗಳಿಗೆ ಉತ್ಪತ್ತಿಕಾರಣವಾದ ಈ ಸಂಸಾರದಲ್ಲಿ ಸುಖವಿಲ್ಲದೆ ಮೋಕ್ಷದಲ್ಲಿ ಬಹಳವಾದ ಸುಖವುಂಟು. ಆ ಮೋಕ್ಷವು ವಿವೇಕಾದಿಗಳಿಂದಲಹುದು.

## ವಚನಗಳು

೧

ಸಂಸಾರ ಸಂಗದಿಂದುದಯಿಸಿದ ಸುಖವೇ ದುಃಖವೆಂದರಿಯದೆ
ಆ ಸುಖವನೇ ನೆಚ್ಚಿ ಭವದುಃಖವೆಂಬ ಕ್ರೂರ ಜನ್ಮಚಕ್ರಕ್ಕೀಡಾಗಿ
ಅಲ್ಲಿ ತನ್ನ ಮರೆದು ತನಗಿಲ್ಲದ ಭ್ರಮೆಯ ತನ್ನದೆಂದು
ಅಂತಪ್ಪ ಘೋರದೊಳಗೋಲಾಡುತಿಪ್ಪ ಮುಳುಗಾಡುತಿಪ್ಪ
ಅಜ್ಞಾನಿಗಳು ನಿಮ್ಮನೆತ್ತಬಲ್ಲರಯ್ಯಾ ಎನ್ನಯ್ಯ ಪ್ರಿಯ
ನಿಃಕಲಂಕ ಮಲ್ಲಿಕಾರ್ಜುನಾ

೨

ಹಳ್ಳದೊಳು ಉರುಳಿಬರುತ್ತಿರಲು ನೊರೆ ತೆರೆಗಳು ತಾಗದಿಪ್ಪವೇ?
ಸಂಸಾರ ಸಾಗರದೊಳಗೆ ಮುಳಗಾಡುತಿಪ್ಪ ಪ್ರಾಣಿಗಳಿಗೆ
ಸುಖದುಃಖಗಳು ತಾಗದಿಪ್ಪವೇ?
ಇದು ಕಾರಣ ರೂಪಾದ ಜಗಕ್ಕೆ ಪ್ರಳಯ ತಪ್ಪದು ಗುಹೇಶ್ವರಾ

೩

ಹಡದೆನೆಂಬ ಸುಖದಿಂ ಹಡದಡೆ ಮತ್ತಂ ನಿಚ್ಚದಿಂದ
ಕೈಕೊಂಬುದೀ ದುಃಖವು
ದುಃಖಕ್ಕೆ ಎಡೆಯಿಲ್ಲ ಸಂಸಾರದೊಳಗಣ ಸುಖವಿಂತುಂಟು
ಕಡುದುಃಖವನೆಂದಿಗೆ ನೀಗಿ ಎಂದು ನಿಮ್ಮನೊಡಗೂಡಿ
ಬೇರಾಗದೆಂದಿಪ್ಪೆನೋ ಕಪಿಲಸಿದ್ಧಮಲ್ಲಿಕಾರ್ಜುನಾ

೪

ನಡೆ ನೋಟ ಸೊಲ್ಲೆಡೆಯೊಳೊಂದು ಕಿಚ್ಚು
ತಡೆದುಂಬ ಎಡೆಯಲ್ಲಿ ಒಂದು ಕಿಚ್ಚು
ಮಡದಿ ಪುರುಷರೆಡೆಯಲ್ಲಿ ಒಂದು ಕಿಚ್ಚು
ಪಡೆದರ್ಥ ಕೆಟ್ಟೆಡೆಯೊಳೊಂದು ಕಿಚ್ಚು
ಕೂಡಿದ ದ್ರವ್ಯದ ಮೋಹದೆಡೆಯೊಳೊಂದು ಕಿಚ್ಚು
ಇಂತೀ ಸಂಸಾರದೆಡೆಯಲ್ಲಿ ದುಃಖವಲ್ಲದೆ ಸುಖವಿಲ್ಲ ನೋಡಾ

ಅದೆಂತೆಂದೊಡೆ—

ಭಾರ್ಯಾವಿಯೋಗಃ ಸುಜನಾಪವಾದಃ ಋಣಸ್ಯ ಶೇಷಂ ಕ್ವಥಮಸ್ಯ ಸೇವಾ ।
ದಾರಿದ್ರಕಾಲೇ ಬಹುಪುತ್ರಸಂಭವೋ ವಿನಾಗ್ನಿನಾ ಪಂಚ ದಹಂತಿ ಕಾಯಮ್ ॥

ಇಂತೆಂದುದಾಗಿ ಈಯೈದು ಕಿಚ್ಚನಿಕ್ಕಿ ಮಣ್ಣಹೊಯ್ದು
ಕೆಡಿಸಿದೆಯಯ್ಯಾ ರಾಮನಾಥಾ

೫

ಬಟ್ಟೆಯಲ್ಲಿ ಹೋಗುತಿಪ್ಪ ಮನುಜನೊಬ್ಬನನ್ನು
ಹುಲಿ ಕಾಡಗಿಚ್ಚು ರಕ್ಕಸಿ ಕಾಡಾನೆಗಳು
ನಾಲ್ಕು ದಿಕ್ಕಿನಲ್ಲಿ ಅಟ್ಟಿಬರುತ್ತಿರಲು
ಅವಂ ಕಂಡು ಭಯದಿಂದ ಹೋಗಲು ದಿಕ್ಕುತೋರದೆ ಹಾಳು ಭಾವಿಯಂ ಕಂಡು
ತಲೆಯೂರಿ ಬೀಳುವಲ್ಲಿ ಹಾವಕಂಡು ಬೀಳಲಮ್ಮದೆ
ಇಲಿಕಡಿದ ಬಳ್ಳಿಯಂ ಹಿಡಿದು ನಿಲ್ಲಲು ಜೇನ ಹುಳುಮೈನೂರುವಾಗ
ಮೂಗಿನ ತುದಿಯಲೊಂದು ಹನಿ ಮಧುಬಂದು ಬೀಳಲಾಗಿ
ಆಮಧುವಂ ಕಂಡು ಹಿರಿದಪ್ಪ ದುಃಖವನೆಲ್ಲವ ಸೈರಿಸಿ
ನಾಲಿಗೆಯಲ್ಲಿ ಆ ಮಧುವ ಸೇವಿಸುವನಂತೆ
ಈ ಸಂಸಾರಸುಖವ ವಿಚಾರಿಸಿ ನೋಡಿಪಡೆ ದುಃಖದಾಗರವು
ಇದನರಿತು ಸಕಲ ವಿಷಯಂಗಳಲ್ಲಿಯು ಸುಖವಿಂತುಂಟೆಂದು
ನಿರ್ವಿಷಯಿಯಾಗಿ ನಿಂದ ನಿಲವು ನೀನೇ ಸಿಮ್ಮಲಿಗೆಯ ಚೆನ್ನರಾಮಾ

## ತ್ರಿಬಂಧ ನಿರಸನ ಸ್ಥಲ: ೧೧

ಈ ಪ್ರಕಾರದಿಂ ಸುಖದೊಡನೆ ದುಃಖವು ದುಃಖದೊಡನೆ ಸುಖವಾಗಿ ಒಂದನೊಂದು ಹುದುಗಿಕೊಂಡಿರುವ ಸುಖವಂ ಸುಖವಲ್ಲವೆಂದು ವಿಡಂಬನವಂ ಮಾಡಿ ನುಡಿದರ್ಮಹಾಪುರಾತನರು. ಇಂತಪ್ಪ ಸುಖ ದುಃಖಂಗಳಿಗೆ ಕಾರಣವು ಹೊನ್ನು ಹೆಣ್ಣು ಮಣ್ಣುಗಳೆಂಬುದನರಿದು ಆ ಹೊನ್ನು ಹೆಣ್ಣು ಮಣ್ಣುಗಳ ನಿರಸನಮುಂ ಮಾಡಿ ನುಡಿದ ವಚನಂಗಳು.

ಶಿವಧರ್ಮೇ—

ವಿತ್ತಂ ಸ್ಯಾದ್ರಾಜವಿತ್ತಂ ಚ ಕಾಮಿನೀ ಕಾಮುಕಸ್ಯ ಚ ।
ಪೃಥಿವೀ ಚ ವೀರಭೋಗ್ಯಾ ಚ ಸ್ವಧರ್ಮೋ ಧನಮೇವ ಚ ॥೧॥

ನಿನ್ನ ದ್ರವ್ಯವೆಂಬುದು ಅರಸುಗಳದು. ನಿನ್ನ ಸ್ತ್ರೀ ಕಾಮುಕರಿಗೆ ವಶಳಾಗಿಹಳು. ನಿನ್ನ ರಾಜ್ಯವೇ ಬಲ್ಲಿದರಿಗೆ ರಾಜ್ಯವಾಗಿಹುದು. ನಿನ್ನದಾವುದಯ್ಯಾ ಎಂದಡೆ ನೀಮಾಡಿದ ಧರ್ಮವೊಂದೇ ನಿನ್ನದು.

ವಾತೂಲತಂತ್ರೇ—

ಯಥಾ ಪುರತ್ರಯಂ ದಗ್ಧಂ ಯುಗಪತ್ಪುರವೈರಿಣಾ ।
ತಥಾ ಮಲತ್ರಯಂ ದಗ್ಧಂ ಯುಗಪದ್ದೇಶಿಕೇನತು ॥೨॥

ಹೇಗೆ ಪುರತ್ರಯಂಗಳನು ಪರಮೇಶ್ವರನು ಒಂದೇ ಬಾರಿ ಸುಟ್ಟನೋ ಹಾಗೆ ಶ್ರೀಗುರುವು ತನ್ನ ಭಕ್ತರ ಮಲತ್ರಯಂಗಳನ್ನು ಒಂದೇ ಬಾರಿಗೆ ನಿವಾರಿಸುವನು.

ಲೈಂಗೇ—

ಆಣವಂ ಗರ್ಭಸಂಬಂಧಂ ಅಣುರೂಪೇ ವ್ಯವಸ್ಥಿತಮ್ ।
ಮಾಯಜಂ ಜಾತಿಭೇದೇಷು ಮೋಹ ಇತ್ಯಭಿಧೀಯತೇ ॥೩॥

ಆಣವ ಮಲವೆಂಬುದು ಅಣುರೂಪವಾಗಿ ಗರ್ಭಸಂಬಂಧವಾಗಿಹುದು, ಮಾಯಾ ಮಲವೆಂಬುದು ಮೋಹರೂಪವಾಗಿ ಸ್ವಜಾತಿಗಳಲ್ಲಿಹುದು.

ಕಾರ್ಮಿಕಂ ದ್ರವ್ಯಸಂಬಂಧಮೀಷಣತ್ರಯಸಂಯುತಮ್ ।
ಇದಂ ಮಲತ್ರಯಂ ದೋಷಂ ಗುರುಣಾ ತು ವಿಮುಚ್ಯತೇ ॥೪॥

ಕಾರ್ಮಿಕ ಮಲವೆಂಬುದು ದ್ರವ್ಯರೂಪವಾಗಿ ಇಚ್ಛೈಸುತ್ತಲಿಹುದು. ಈ ಮಲತ್ರಯ ದೋಷಂಗಳು ಗುರುಕರುಣದಿಂದ ಬಿಡುಗಡೆಯಹವು.

ಆತ್ಮಾನಂ ಕಾರಯೇಜ್ಜ್ಯೇಷ್ಠಮನಾದಿಮಲಕುಂಠಿತಮ್ ।
ಅನೇನೈವಾರ್ಜಿತಂ ಕರ್ಮ ದಗ್ಧಂ ಬೀಜಮಿವಾಣುಭಿಃ ॥೫॥

ಅನಾದಿ ಮಲಗಳಿಂದ ಹುದುಗಿಕೊಂಡಿರುವ ಜೀವಾತ್ಮನನ್ನು ಮುಕ್ತನನ್ನಾಗಿ ಮಾಡಬೇಕು. ಹೀಗೆ ಮಾಡಿದವನಿಂದಲೇ ಸಂಚಿತಾದಿಕರ್ಮಗಳು ಹುರಿದ ಬೀಜದಂತೆ ನಶಿಸಲ್ಪಡುವವು.

ಸಂಚಿತಂ ಜನ್ಮಸಾಹಸ್ರೇ ಪಾಪಮಗ್ನಿರ್ನಿರಂತರಮ್ ।
ಕರೋತಿ ಭಸ್ಮಸಾದ್ಭಕ್ತಿಸ್ತಸ್ಯ ಶಂಭೋರನುಗ್ರಹಾತ್ ॥೬॥

ಶಿವಭಕ್ತಿಯೆಂಬಗ್ನಿಯು ಜನ್ಮಸಹಸ್ರದ ಸಂಚಿತಗಳನ್ನು ದಹಿಸಿಬಿಡುವದು.

## ವಚನಗಳು

೧

ಭುವನತ್ರಯವೆಂಬ ಪಂಜರದೊಳಗೆ ಸಂಸಾರಚಕ್ರಕ್ಕೆ ಈಡಾಗಿ
ಅನಂತ ಜೀವಿಗಳು ಹೊನ್ನು ಪ್ರಾಣವೇ ಪ್ರಾಣವಾಗಿ
ಹೆಣ್ಣು ಪ್ರಾಣವೇ ಪ್ರಾಣವಾಗಿ ಮಣ್ಣು ಪ್ರಾಣವೇ ಪ್ರಾಣವಾಗಿ
ಆ ಸುಖದ ಸೊಕ್ಕು ತಲೆಗೇರಿ ಈಸಾಡುತ್ತಿದ್ದರಲ್ಲ ಭವಸಾಗರವ
ಬಹುವಿಧದ ವ್ಯವಹಾರಿಗಳು ನಮ್ಮ ಗುಹೇಶ್ವರಲಿಂಗವನರಿಯದ
ಕಾರಣ

೨

ಬ್ರಹ್ಮಪಾತ ವಿಷ್ಣುಮಾಯೆಯೆಂಬ ಬಲೆಯ ಬೀಸಿ
ಹೊನ್ನು ಹೆಣ್ಣು ಮಣ್ಣು ತೋರಿ ಮುಕ್ಕಣ್ಣನಾಡಿದ ಬೇಟೆಯ
ಆಶೆಯೆಂಬ ಗುಟುಕನಿಕ್ಕಿ ಹೇಸದೆ ಕೊಂದೆಯಲ್ಲಾ ಗುಹೇಶ್ವರಾ

೩

ತನುವಿಕಾರ ಮನವಿಕಾರ ಜನನ ಸ್ಥಿತಿ ಮರಣ ಕಾರಣ
ಹೊನ್ನು ತೋರಿದೆ ಜಗದ ಕಣ್ಣು ಮೊದಲಿಂಗೆ
ಹೆಣ್ಣುತೋರಿದೆ ಜಗದ ಕಣ್ಣು ಮೊದಲಿಂಗೆ
ಮಣ್ಣುತೋರಿದೆ ಜಗದ ಕಣ್ಣು ಮೊದಲಿಂಗೆ
ತಾನು ತಪ್ಪಿಸಿಕೊಂಡು ಜಗದ ಸಂಸಾರಕ್ಕೊಪ್ಪಿಸಿ
ನುಣ್ಣಗೆ ಹೋದನು ದೇವರಾಯ ಸೊಡ್ಡಳ

೪

ನೆನೆವ ಮನಕ್ಕೆ ಮಣ್ಣು ತೋರಿದೆ
ನೋಡುವ ಕಣ್ಣಿಗೆ ಹೆಣ್ಣನೆ ತೋರಿದೆ
ಪೂಜಿಸುವ ಕೈಗೆ ಹೊನ್ನನೇ ತೋರಿದೆ
ಈ ತ್ರಿವಿಧವನೆ ತೋರಿಸಿಕೊಟ್ಟು ಮರಹನಿಕ್ಕಿದೆಯಯ್ಯಾ
ಅಮರಗುಂಡ ಮಲ್ಲಿಕಾರ್ಜುನಾ ನೀ ಮಾಡಿದ ಬಿನ್ನಾಣಕ್ಕಾನು ಬೆರಗಾದೆನು

೫

ಅಣ್ಣೆನೆಂಬಣ್ಣಗಳ ಅಣ್ಣಿಸುವುದು ಹೊನ್ನು
ಅಣ್ಣೆನೆಂಬಣ್ಣಗಳ ಅಣ್ಣಿಸುವುದು ಹೆಣ್ಣು
ಅಣ್ಣೆನೆಂಬಣ್ಣಗಳ ಅಣ್ಣಿಸುವುದು ಮಣ್ಣು
ಹೊನ್ನ ಕಂಡಬಳಿಕ ಅಣ್ಣದಣ್ಣಗಳಾರು
ಹೆಣ್ಣ ಕಂಡಬಳಿಕ ಅಣ್ಣದಣ್ಣಗಳಾರು
ಮಣ್ಣ ಕಂಡಬಳಿಕ ಅಣ್ಣದಣ್ಣಗಳಾರು
ಹೆಣ್ಣು ಹಿರಣ್ಯಭೂಮಿಯೆಂಬ ಹುಡಿಯ ಜಗದ ಕಣ್ಣಮೇಲೆ ಹೊಯ್ದು
ನಿನ್ನ ನೆನೆವುದಕ್ಕೆ ತೆರಹುಗುಡದಿದೆಯಲ್ಲಾ ಸೊಡ್ಡಳಾ ಗರಳಗಳಧರಾ

೬

ಊರವರ ಸೀರೆಗೆ ಅಗಸ ಬಡಿವಡೆದಂತೆ
ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾಗಿ

ನಿಮ್ಮ ಪಾರಕದೊಡವೆಯ ನಿಮಗರ್ಪಿಸಲರಿಯದ ಕರ್ಮಿ ನಾನಯ್ಯಾ
ಆ ವಿಧಿಯಿಂದ ಕೆಮ್ಮನೆ ಕೆಟ್ಟೆನು ಕೂಡಲಸಂಗಮದೇವಾ
ತಪ್ಪೆನ್ನದು ಕೃಪೆಮಾಡು ಹುರುಳಿಲ್ಲ ಹುರುಳಿಲ್ಲ ಶಿವಧೋ ಶಿವಧೋ

೭

ಭೂಮಿ ನಿನ್ನದಲ್ಲ ಹೇಮ ನಿನ್ನದಲ್ಲ ಕಾಮಿನಿ ನಿನ್ನವಳಲ್ಲ
ಅವು ಜಗಕಿಕ್ಕಿದ ವಿಧಿ
ನಿನ್ನೊಡವೆಯೆಂಬುದು ಗುರುಲಿಂಗಜಂಗಮಕ್ಕೆ ದಾಸೋಹಮಾಡುವ
ಜ್ಞಾನರತ್ನ
ಅಂತಪ್ಪ ದಿವ್ಯರತ್ನವ ಕೆಡಗುಡದೆ ಆ ರತ್ನವ ನೀನಲಂಕರಿಸಿದೆಯಾದಡೆ
ನಮ್ಮ ಗುಹೇಶ್ವರಲಿಂಗದಲ್ಲಿ ನಿನ್ನಿಂದ ಬಿಟ್ಟು ಸಿರಿವಂತರಾರು
ಇಲ್ಲ ಕಾಣಾ ಎಲೆ ಮನವೆ

೮

ಬಲ್ಲೆನೊಲ್ಲೆ ಮರ್ತ್ಯದ ಹಂಗ
ಹಿಂದಣ ಮರವೆಯಿಂದ ಬಂದು ನೊಂದೆ
ಸಾಕು ಇನ್ನರಿದೆ ತ್ರಿವಿಧಪಾಶವ ಪರಿದೆ
ಗುಹೇಶ್ವರಾ ಇಷ್ಟು ಮರ್ತ್ಯದ ಸುಖವ ಮನದಲ್ಲಿ ನೆನೆದೆನಾದಡೆ
ನಿಮ್ಮಾಣೆ ನಿಮ್ಮ ರಾಣಿವಾಸದಾಣೆಯಯ್ಯಾ

## ಮಾಯಾವಿಲಾಸವಿಧಿ ಸ್ಥಲ: ೧೨

ಈ ಪ್ರಕಾರದಿಂದ ಶರೀರ ಮನ ಇಂದ್ರಿಯ ಸಂಸಾರವ್ಯಾಪ್ತಿ ನಿದ್ರೆ ಆಶೆ ಸುಖ ದುಃಖ ಹೊನ್ನು ಹೆಣ್ಣು ಮಣ್ಣೆಂಬ ನಾನಾ ಪ್ರಪಂಚುಗಳ ಬೇರೆ ಬೇರೆ ನಿರಸನವಂ ಮಾಡಿ ನುಡಿದರ್ಮಹಾಪುರಾತನರು. ಆ ಸಂಸಾರ ಪ್ರಪಂಚಿಕವನೆಲ್ಲವಂ ಚೇಷ್ಟಿಸಿ ಜಗತ್ತ್ರಯವನೊಕ್ಕಲಿಕ್ಕಿ ಕೊಲ್ಲುತ್ತಿಪ್ಪುದೆಲ್ಲವು ಮಾಯೆಯೆಂಬುದನರಿದು ಆ ಮಾಯಾ ವಿಲಾಸವಿಧಿಯ ನೋಡಿ ಆಶ್ಚರ್ಯಗೊಂಡು ನುಡಿದ ವಚನಂಗಳು.

ಶಿವಧರ್ಮೇ—

ಹಿತಂ ನ ವಾಚ್ಯಮಹಿತಂ ನ ವಾಚ್ಯಂ ಹಿತಾಹಿತಂ ನೈವ ಚ ಭಾಷಣೀಯಮ್।
ಹಿತೋಪದೇಶೇನ ಜಲಪ್ರವಿಷ್ಟಃ ಕೋರಂಟಕೋ ನಾಮ ನನಾಶ ಶೀಘ್ರಮ್ ॥೧॥

ವಿವೇಕಿಯಾದ ಪುರುಷನು ಮತ್ತೊಬ್ಬರಿಗೆ ಹಿತವೆಂದು ಹೇಳಲಾಗದು ಅಹಿತವೆಂದು ಹೇಳಲಾಗದು ಏಕೆಂದರೆ ಹಿತವಂ ಹೇಳಿಹೆನೆಂದು ಕೋರಂಟಕ ಸಿದ್ಧನು ಕೆರೆಯೊಳಗೆ ಸತ್ತನು.

ಲೈಂಗೇ—

ದುರ್ಜನಸಂಸರ್ಗಃ ಸಾಧೂನಾಂ ದುಃಖದೋ ನಿತ್ಯಮ್ ।
ಭವತಿ ದಶಶಿರಕೃತಾಪರಾಧೇ ಗಂಭೀರಸಮುದ್ರಬಂಧನಪ್ರಾಪ್ತಿಃ ॥೨॥

ದುರ್ಜನ ಸಂಸರ್ಗದಿಂದ ಸತ್ಪುರುಷರುಗಳಿಗೆ ದೊಡ್ಡಿತ್ತಾದ ದುಃಖವಹುದು ಅದು ಹೇಗೆಂದಡೆ ರಾವಣನು ಮಾಡಿದ ಅನ್ಯಾಯದಿಂದ ಸಮುದ್ರಕ್ಕೆ ಬಂಧನ ಪ್ರಾಪ್ತವಾಯಿತು.

ಯೇನ ಯತ್ರೋಪಭೋಕ್ತವ್ಯಂ ಸುಖಂ ವಾ ದುಃಖಮೇವ ಚ ।
ಸ ತತ್ರ ರಜ್ಜುಬಂಧೇನ ಬಲಾದ್ದೈವೇನ ನೀಯತೇ ॥೩॥

ಆವ ಠಾವಿನಲ್ಲಿ ಆವಾತನಿಂದ ಆವುದಾನೊಂದು ಸುಖವಾಗಲಿ ದುಃಖವಾಗಲಿ ಇಹುದೋ ಅವನ್ನು ಉಣ್ಣಿಸುವ ದೈವವು ಅವನನ್ನು ಹಗ್ಗದಲ್ಲಿ ಕಟ್ಟಿಕೊಂಡು ಅಲ್ಲಿಗೆ ಒಯ್ಯುವದು.

ವಾಶಿಷ್ಠೇ—

ಇಂದ್ರಸ್ತ್ವಹಲ್ಯಾಂ ಗುರುಪತ್ನೀಂ ಚಂದ್ರೋ ವಿದೇಹಜಾಂ
ವಿಶ್ರವಸಃ ಸುತಶ್ಚ
ತಾರಾಂ ಚ ವಾಲ್ಯುರ್ವಶಿಕಾಂ ವಿಭಾಂಡಃ ಪರಾಶರಃ ಸತ್ಯವತೀಂ ತಥೈವ
ಭ್ರಷ್ಟಾ ಬಭೂವುರ್ಬಹವೋಽಪಿ ಮಾನ್ಯಾಶ್ಚಾಂಚಲ್ಯ ಯುಕ್ತಾ ಹಿ
ತಥಾ ಭವಂತಿ ||೪||

ಆವಾತನಾದರು ವಿಧಿಸಂಕಲ್ಪನೆಯಂ ಮೀರಬಾರದೆಂಬುದಕ್ಕೆ ದೃಷ್ಟಾಂತ ವೆಂತೆಂದರೆ— ಇಂದ್ರನು ಗೌತುಮನ ಸ್ತ್ರೀಯಾದ ಅಹಲ್ಯಾದೇವಿಗಳುಪಿ ಭಂಗಿತನಾದನು. ಚಂದ್ರನು ಬೃಹಸ್ಪತಿಯ ಸತಿಗಳುಪಿ ಕ್ಷಯರೋಗಿ ಯಾದನು. ರಾವಣನು ಸೀತೆಗಳುಪಿ ಕೆಟ್ಟನು. ವಾಲಿಯು ತಾರಾದೇವಿಗಾಗಿ ಅಣ್ಣತಮ್ಮಂದಿರು ಹೊಯ್ದಾಡಿದರು. ವೈಭಾಂಡಕಮುನಿಯು ಉರ್ವಸಿಗಾಗಿ ಕೆಟ್ಟನು. ಪರಾಶರನು ಮತ್ಸ್ಯಗಂಧಿಗಾಗಿ ಮಾನಭಂಗಿತನಾದನು. ಮನಸ್ಸಿನ ಚಾಂಚಲ್ಯದಿಂದ ಎಲ್ಲರೂ ಹೀಗೆಯೇ ಆಗುತ್ತಾರೆ.

## ವಚನಗಳು

೧

ನೋಡಿರೇ ಪೂರ್ವದತ್ತವ ವರುಣಾ ಹೆಳವ ರವಿ ಕುಷ್ಠ
ಶುಕ್ರನಂಧಕ ಶನಿಗೆ ಸಂಕಲೆ ಬಲಿಗೆ ಬಂಧನ ಸೀತೆಗೆ ದ್ರೌಪದಿಗೆ ಸೆರೆ
ಹರಿ ಹಂದಿಯಾದ ಅರ್ಹಂಗೆ ಲಜ್ಜೆ ಬ್ರಹ್ಮನ ಶಿರಹೋಯಿತ್ತು
ಬಲ್ಲಿದನೆಂಬನ ಕೆಡೆವಿಡಿಸದೆ ವಿಧಿ
ಜತ್ರಕನೆಂಬುವನ ಕತ್ತೆಯ ಮಾಡಿತ್ತು ದಶಮುಖನ
ನಾಯಡೋಣಿಯಲ್ಲುಣಿಸಿತ್ತು
ದೇವೇಂದ್ರನ ಮೈಯ್ಯ ನಾಣುಗೆಡಿಸಿತ್ತು ಶೂದ್ರಕನ ತಲೆಯ
ಕಂಚಿಯಲ್ಲಿ ಕಟ್ಟಿತ್ತು
ಕೂಡಲಸಂಗಮದೇವಾ ನೀ ಮಾಡಿದ ಮಾಯೆ ಅನಂತರ
ನಾಳಿಗೊಂಡಿತ್ತು

೨

ಕರ್ತೃವಾದ ಹರನಟ್ಟಿದ ವಿಧಿಗಂಜಿ ಪಾತಾಳದೊಳು ಹೊಕ್ಕಡಗಿದಡೆ
ಭೂತಲದೊಳಗೆ ಹೆಮ್ಮಾರಿಯಾಗಿ ಹರಿದು ಕೊಲ್ಲದೆ ವಿಧಿ
ತಪ್ಪುತಡವಿಲ್ಲದೆ ತಪಸಿಗಾಗದೆ ತೂಲ
ಹರನಟ್ಟಿದ ಬೆಸನಗಾ ಮೆಕ್ಕೆ ಹಾವಾಗಿ ತಿನ್ನದೆ ಪರೀಕ್ಷಿತನ
ತ್ರಿಭುವನದೊಳಗುಳ್ಳ ದೇವದಾನವ ಮಾನವರೆಲ್ಲರನು ಒಕ್ಕಲಿಕ್ಕದೆ
ವಿಧಿ
ಮುಕ್ಕಣ್ಣ ಸೊಡ್ಡಳದೇವರ ಆಣತಿವಿಡಿದು

೩

ಹಂದಿಯ ದವಡೆಯಲ್ಲಿ ಹೊಯಿಸಿಕೊಂಡ ಹಿರಣ್ಯಾಕ
ಅರೆವಾಗಿದುಗುರಕೊನೆಯಲ್ಲಿ ಸೀಳಿಸಿಕೊಂಡ ಹಿರಣ್ಯಾಕ್ಷ
ತಳಿಗೆಗೆ ತಲೆಗೊಟ್ಟ ಶಿಶುಪಾಲಕ
ಕುಮಾರಿಯ ಕೈಯಲ್ಲಿ ಹೊಯ್ಸಿಕೊಂಡ ಮಹಿಷಾಸುರ
ಕಪಿಯ ಬಾಲದಲ್ಲಿ ಕಟ್ಟಿಸಿಕೊಂಡ ರಾವಣ
ಹೊಲೆಯಂಗಾಳಾದ ಹರಿಶ್ಚಂದ್ರ
ಜೂಜಿಂದ ಭಂಗಿತರಾದರು ಪಾಂಡವರು
ದೂರ್ವಾಸನಿಂದ ಸಮುಚಿತ್ತನಾದ ಪುರಂದರ
ತಾಯಿಯ ತಲೆತಿವಿದ ಪರಶುರಾಮ
ಸತಿ ಹೇಳಿದ ಮಾತಂ ಕೇಳಿದ ಶ್ರೀರಾಮ
ಹಕ್ಕಿಯಿಂ ದಿಕ್ಕೆಟ್ಟ ದೇವೇಂದ್ರ
ಅಪರಾಹ್ನ ದರಿದ್ರನಾದ ಕರ್ಣ
ಮಡುವ ಹೊಕ್ಕಡಗಿದ ದುರ್ಯೋಧನ
ಕೇಡಿಂಗೆ ಹಿಂದು ಮುಂದಾದ ಭೀಷ್ಮ
ವೇಶಿಯ ಮನೆಗೆ ಕಂಬಿಯಹೊತ್ತ ವಿಕ್ರಮಾದಿತ್ಯ
ಕಲ್ಯಾಣದಲ್ಲಿ ಬೆಳ್ಳಿಯ ಗುಂಡಾದ ವ್ಯಾಳಿ
ಕಂದಾಲದ ಕೆರೆಯ ಹೊಕ್ಕ ಕೋರಂಟಕ
ಚಕ್ರಕ್ಕೆ ತಲೆಗೊಟ್ಟ ನಾಗಾರ್ಜುನ

ಹಗೆಯ ಕಂಪಲ ಹೊಕ್ಕ ರತ್ನಘೋಷ
ರಾಹುವಿನೊಳಗಾದ ಚಂದ್ರ
ಕಟ್ಟಿಂಗೊಳಗಾದ ಸಮುದ್ರ
ಶಿರವ ಹೋಗಲಾಡಿಸಿಕೊಂಡ ಬ್ರಹ್ಮ
ಕಾಲಿಂದ ಮರಣವಾಯಿತ್ತು ಕೃಷ್ಣಂಗೆ
ನೀರಿನಿಂದ ಕೆಟ್ಟ ಚೌಡಲಯ್ಯ
ಪುತ್ರರಿಂದ ಕೆಟ್ಟ ದಶರಥ
ಅಭಿಮಾನದಿಂ ಕೆಟ್ಟ ಅಭಿಮನ್ಯು
ವಿಧಿಯಿಂದ ಕೆಟ್ಟ ಶೂದ್ರಕ
ನಿದ್ರೆಯಿಂದ ಕೆಟ್ಟ ಕುಂಭಕರ್ಣ
ಸೀತೆಯಿಂದ ಕೆಟ್ಟ ರಾವಣ
ಬಲಿಗೆ ಬಂಧನವಾಯಿತ್ತು ಪಟ್ಟಕ್ಕೇರಿದ ವಿಭೀಷಣ
ಇದುಕಾರಣ ಕೂಡಲಸಂಗಮದೇವಾ
ನೀ ಮಾಡಿದ ಮಾಯೆಯ ಮಾಟವದಾರಾರನಾಳಿಗೊಳಿಸಿತು

ಈ ಪ್ರಕಾರದಿಂ ಬ್ರಹ್ಮವಿಷ್ಣ್ವಾದಿದೇವದಾನವಮಾನವರೆಲ್ಲರನು ಭಂಗಕ್ಕೆ ತಂದು ರೋಡಾಡುವ ಮಾಯಾವಿಲಾಸ ವಿಧಿಯಂ ಕಂಡು ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಇಂತಪ್ಪ ಮಾಯಾಕೃತಿಯಿಂ ಜೀವನು ಉದ್ಭಿಜ ಅಂಡಜ ಸ್ವೇದಜ ಜರಾಯುಜವೆಂಬ ಎಂಬತ್ನಾಲ್ಕು ಲಕ್ಷ ಭೂತ ಗ್ರಾಮಗಳೊಳು ಪುಟ್ಟುತ್ತಿಪ್ಪನ್ನಕ್ಕರ ಶರೀರಂಗಳಂ ತೊಟ್ಟು ಪರಿಭ್ರಮಣಗೊಂಬನೆಂಬ ಶಾಸ್ತ್ರೋಕ್ತಿಯನರಿದು ಆ ಜೀವಂಗೆ ಉತ್ಪತ್ತಿಯ ಭೀತಿಯಂ ಪ್ರತಿಷ್ಠೆಯಂ ಮಾಡಿ ನುಡಿದ ವಚನಂಗಳು.

ಶಿವಧರ್ಮೇ—

ಅಂಡಜಃ ಸ್ವೇದಜಶ್ಚೈವೋದ್ಭಿಜಶ್ಚೈವ ಜರಾಯುಜಃ ।
ಚತ್ವಾರ್ಯಶೀತಿಲಕ್ಷಾನಿ ಗತಾನಿ ಪೃಥಿವೀಂ ಸದಾ ॥೧॥

ಅಂಡಜವೆಂದು ತತ್ತಿಯಲ್ಲಿ ಹುಟ್ಟುವ ಪ್ರಾಣಿಗಳು ಸ್ವೇದಜವೆಂದು ಬೆವರಿನಿಂದ ಹುಟ್ಟುವ ಪ್ರಾಣಿಗಳು ಉದ್ಭಿಜವೆಂದು ತಂಗಲ ಭೂಮಿಯಲ್ಲಿ ಹುಟ್ಟುವ ಪ್ರಾಣಿಗಳು ಜರಾಯುಜವೆಂದು ಮಾಸಿನಲ್ಲಿ ಹುಟ್ಟುವ ಪ್ರಾಣಿಗಳು ಈ ನಾಲ್ಕು ಪ್ರಕಾರದಲ್ಲಿ ಹುಟ್ಟುವ ಎಂಬತ್ನಾಲ್ಕು ಲಕ್ಷ ಜೀವರಾಶಿಗಳೆಲ್ಲವೂ ಪೃಥಿವಿಯಲ್ಲಿ ಗತವಾಗಿ ಹೋಗುತ್ತಿಹವು.

ಮೃತಶ್ಚಾಹಂ ಪುನರ್ಜಾತೋ ಜಾತಶ್ಚಾಹಂ ಮೃತಃ ಪುನಃ ।
ನಾನಾಯೋನಿಸಹಸ್ರೇಷು ಮಾಯಾ ಸಪ್ತಾಸ್ತ್ವನೇಕಶಃ ॥೨॥

ಸತ್ತಂಥ ಜೀವಿಗಳೇ ಹುಟ್ಟುತ್ತಿಹರು ಹುಟ್ಟಿದ ಜೀವರುಗಳೇ ಮರಳಿ ಸಾವುತ್ತಿಹರು. ನಾನಾ ಯೋನಿಗಳಲ್ಲಿ ಸಾವಿರ ಸಾವಿರ ಬಾರೆ ಮಾಯಾಧೀನರಾಗಿ ಹುಟ್ಟುತ್ತಲಳಿವುತ್ತಲಿಹರು.

ಜಾತಶ್ಚೈವ ಮೃತಶ್ಚೈವ ಪುನರ್ಜಾತೋ ಮೃತಃ ಪುನಃ ।
ಅಹೋ ದುಃಖಾಂಬುಧೌ ಮಗ್ನೋ ನ ಪಶ್ಯಾಮಿ ಪ್ರತಿಕ್ರಿಯಾಮ್ ॥೩॥

ಮರಳಿ ಮರಳಿ ಹುಟ್ಟುತ್ತ ಮರಳಿ ಮರಳಿ ಸಾವುತ್ತ ಜನ್ಮಂಗಳನೈದುತ್ತಿಹುದು. ಇದಕ್ಕೆ ಪ್ರತೀಕಾರವ ಕಾಣದಲೇ ಬಳಲುತ್ತಿಹುದು.

ಲ್ಲಿಂಗೇ—

ಅನ್ಯಥಾ ಯದಿ ಕರ್ಮಾಣಿ ಕುರ್ಯಾನ್ನಿತ್ಯಾನ್ಯಪಿ ದ್ವಿಜಾಃ ।
ಯೋನಿಚಕ್ರೇ ಭ್ರಮಂತ್ಯೇವ ಘಟೀಯಂತ್ರೇ ಘಟೋ ಯಥಾ ॥೪॥

ಎಲೈ ಬ್ರಾಹ್ಮಣರೇ ಶಿವಧ್ಯಾನವಿಲ್ಲದೆ ನಿತ್ಯಕರ್ಮಂಗಳನು ಯಾರು ಮಾಡುವರೋ ಅವರುಗಳು ನೀರಿನ ಘಟರಾಟದಲ್ಲಿಯ ಘಟದ ಹಾಗೆ ಯೋನಿಚಕ್ರದಲ್ಲಿ ತಿರುಗುತ್ತಿಹರು.

ನಾನಾಯೋನಿಸಹಸ್ರೇಷು ಗತ್ವಾ ಚೈವಂ ತು ಮಾಯಯಾ ।
ಆಹಾರಾ ವಿವಿಧಾ ಭುಕ್ತಾಃ ಪೀತಾಶ್ಚ ವಿವಿಧಾಃ ಸ್ತನಾಃ ॥೫॥

ಸಂಸಾರ ಮಾಯೆಯಿಂದ ಹಲವು ವಿಧವಾದ ಯೋನಿಗಳಲ್ಲಿ ಸಾವಿರ ಸಾರೆ ಬಂದು ಹಲವು ಮೊಲೆ ಹಾಲಂ ಕುಡಿದು ಬಹುವಿಧವಾದ ಆಹಾರಂಗಳು ಭುಂಜಿಸಲ್ಪಟ್ಟಿರುವವು.

ನಿಃಸರಂತಿ ಯಥಾ ಲೋಹಪಿಂಡಾತ್ತಪ್ತಾತ್ ಸ್ಫುಲಿಂಗಕಾಃ ।
ಸಕಾಶಾದಾತ್ಮನಸ್ತದ್ವತ್ ಆತ್ಮಾನೋ ನಿತ್ಯಮೇವ ಹಿ ॥೬॥

ಕಾಯಿಸಲ್ಪಟ್ಟ ಕಬ್ಬುನದ ಮುದ್ದೆಯಿಂದ ಕಿಡಿಗಳು ಹೇಗೆ ಹೊರಗೆ ಹೊರಡುವವೋ ಹಾಗೆ ಆತ್ಮನದೆಶೆಯಿಂದ ಜೀವರುಗಳು ಹೊರಡುತ್ತಿಹರು.

## ವಚನಗಳು

೧

ಒಂದು ಯೋನಿಯಲ್ಲಿ ಬಂದ ದುಃಖವ ನಾನೆಂದಿಗೂ
ಕಳೆಯಲಾರೆನಯ್ಯಾ
ಎಂಬತ್ನಾಲ್ಕುಲಕ್ಷ ಯೋನಿಯೆಂದಡೆ ಇನ್ನೇವೆನಯ್ಯಾ
ಮತ್ತೊಂದರಿಯದ ಶಿಶು ನಾನು ಬೆಂದೆನಯ್ಯಾ ಶಿವ ಶಿವಾ
ಎನ್ನ ಕಂದ ನೀ ಬಾಯೆಂದು ಕಂಬನಿ ತೊಡೆದು ಎತ್ತಿ
ಆನಂದದಿಂ ಕಣ್ದೆರೆಯುಳಿಯುಮೇಶ್ವರಾ

೨

ಒಂದಲ್ಲ ಎರಡಲ್ಲ ಮೂರಲ್ಲ ನಾಲ್ಕಲ್ಲ
ಎಂಬತ್ನಾಲ್ಕು ಲಕ್ಷ ಯೋನಿಗಳೊಳಗೆ ಬಂದೇ ಬಂದೆ

ಬಾರದ ಭವಂಗಳನುಂಡೆನುಂಡೆ
ಸುಖ ದುಃಖಗಳ ಹಿಂದಣ ಜನ್ಮಂಗಳು ತಾನೇನಾದಡಾಗಲಿ
ಮುಂದೆ ನೀ ಕರುಣಿಸು ಚೆನ್ನಮಲ್ಲಿಕಾರ್ಜುನಾ

೩

ಬಂದ ಯೋನಿಯುನರಿದು ಸಲಹೆನ್ನ ತಂದೆ
ಬೆಂದ ಭವಮಾಲೆಯಲ್ಲಿ ಸಿಕ್ಕಿ ಬಿಡದೆ ಬಳಲುತ್ತಿರುಪೆನು
ಈ ದಂದುಗವ ಮಾಣಿಸಯ್ಯಾ ಕೂಡಲಸಂಗಮದೇವಾ

೪

ಪುಣ್ಯಪಾಪಂಗಳನರಿಯದ ಮೊದಲು ಅನೇಕ ಭವಂಗಳಲ್ಲಿ
ಬಂದೆನಯ್ಯಾ
ನಂಬಿ ಬಂದು ಶರಣುಹೊಕ್ಕೆನಯ್ಯಾ
ನಿಮ್ಮನೆಂದೂ ಅಗಲದಂತೆ ಮಾಡಿ ನಡಿಸಯ್ಯಾ ನಿಮ್ಮ ಧರ್ಮ
ನಿಮ್ಮ ಧರ್ಮ
ನಿಮ್ಮನೊಂದನೇ ಬೇಡುವೆನು
ಎನ್ನ ಬಂಧನವ ಬಿಡುವಂತೆ ಮಾಡಯ್ಯಾ ಶ್ರೀ ಚೆನ್ನಮಲ್ಲಿಕಾರ್ಜುನಾ

೫

ನೀ ಹುಟ್ಟಿಸಿದಲ್ಲಿ ಹುಟ್ಟದೇ ನೀ ಕೊಂದಲ್ಲಿ ಸಾಯದೇ
ಎನ್ನ ವಶವೇ ಅಯ್ಯಾ
ನೀನಿರಿಸಿದಲ್ಲಿರವೆ ನೀನೆಡೆಸಿದಲ್ಲಿ ನೆಡೆಯದೆ ಎನ್ನ ವಶವೇ ಅಯ್ಯಾ
ಅಕಟಕಟಾ ಎನ್ನವನೆನ್ನಯ್ಯಾ ಕೂಡಲಸಂಗಮದೇವಾ

## ಜ್ಞಾನಪರಾಮರಿಕೆಯ ಸ್ಥಲ : ೧೪

ಈ ಪ್ರಕಾರದಲ್ಲಿ ನಾನಾ ಯೋನಿಗಳಲ್ಲಿ ಪರಿಭ್ರಮಣಗೊಂಬುದು ಮಹಾಕರ್ಕಶದ ಬಟ್ಟೆಯೆಂಬುದನರಿದು ಜೀವಂಗೆ ಜನನ ಭಯಮಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಎಂಬತ್ನಾಲ್ಕು ಲಕ್ಷ ಜೀವರಾಶಿಗಳೊಳಗೆ ಉತ್ತಮ ಶರೀರಿಯಾದ ಮಾನವನಾಗಿ ಹುಟ್ಟಿಯೂ ಶಿವಜ್ಞಾನವಿಲ್ಲದೆ ಕೆಟ್ಟುಹೋದುದು ಪ್ರಯೋಜನವಲ್ಲೆಂದು ನುಡಿದ ವಚನಂಗಳು.

ಪ್ರಕಾಶಮಾನೇ ಪರಮಾತ್ಮಭಾನೌ ನಶ್ಯತ್ಯವಿದ್ಯಾತಿಮಿರಂ ಸಮಸ್ತಮ್।
ಅಹೋ ಬುಧಾ ನಿರ್ಮಲದೃಷ್ಟಿಯೋಗಾತ್ಕಿಂಚಿನ್ನ ಪಶ್ಯಂತಿ
ಜಗತ್ಪ್ರಪಂಚಮ್ ॥೧॥

ಪರಮಾತ್ಮನೆಂಬ ಸೂರ್ಯನು ಪ್ರಕಾಶಿಸುತ್ತಿರಲಾಗಿ ಅವಿದ್ಯೆಯೆಂಬ ಕತ್ತಲೆಯೆಲ್ಲಾ ನಾಶವಾಗುವದು. ವಿದ್ವಾಂಸರುಗಳಿರಾ ನಿರ್ಮಲವಾದ ಜ್ಞಾನದೃಷ್ಟಿಯ ಯೋಗದಿಂದ ಮಾಯಾರೂಪವಾದ ಜಗತ್ಪ್ರಪಂಚವನ್ನು ಸ್ವಲ್ಪವಾದರೂ ನೋಡದಿರುವದು ಆಶ್ಚರ್ಯವು.

ಯಥಾ ಚಂದ್ರಮಸಾ ರಾತ್ರೌ ಮಹೀ ಸರ್ವಾ ಪ್ರಕಾಶಿತಾ ।
ಲೋಭಮೋಹೌ ಸ್ಥಿತೌ ದೇಹೇ ಶಿವಜ್ಞಾನಾದ್ವಿನಶ್ಯತಃ ॥೨॥

ಹೇಗೆ ರಾತ್ರಿಯಲ್ಲಿ ಚಂದ್ರನಿಂದ ಭೂಮಂಡಲವೆಲ್ಲವು ಬೆಳಗುವದೋ ಅದರಂತೆ ದೇಹದಲ್ಲಿರತಕ್ಕ ಲೋಭಮೋಹಗಳು ಶಿವಜ್ಞಾನದಿಂದ ನಾಶವಾಗುವವು.

### ವಚನಗಳು

೧

ಸತ್ತಕೋಳಿ ಎದ್ದು ಕೂಗಿದುದ ಕಂಡೆ
ಮತ್ತದ ಮಾಮರ ಉರಿವುದ ಕಂಡೆ
ಹೊತ್ತಾರೆ ಎದ್ದು ಹೊಲಬುದಪ್ಪುದ ಕಂಡೆ
ಇದೇನು ಸೋಜಿಗ ಹತ್ತಿತೆಂದರಿಯೆ ಗುಹೇಶ್ವರಾ

೨

ವಾಯು ಗುಣವ ಸರ್ಪ ಬಲ್ಲುದು
ಮಧುರ ಗುಣವನಿರುವೆ ಬಲ್ಲುದು
ಗೋತ್ರದ ಗುಣವ ಕಾಗೆ ಬಲ್ಲುದು
ವೇಳೆಯ ಗುಣವ ಕೋಳಿ ಬಲ್ಲುದು
ಇದುಕಾರಣ ಮನುಷ್ಯ ಜನ್ಮದಲ್ಲಿ ಬಂದು ಶಿವಜ್ಞಾನವಿಲ್ಲದಿರೆ
ಆ ಕಾಗೆ ಕೋಳಿಗಳಿಂದ ಕರಕಷ್ಟ ಕಾಣಾ ಕಲಿದೇವರ ದೇವಾ

೩

ಊರೊಳಗಣ ಕಿಚ್ಚು ಕಾನನದಲ್ಲಿ ಉರಿಯಿತ್ತು
ಕಾನನದ ಕಿಚ್ಚು ಬಂದು ಊರೊಳಗುರಿಯಿತ್ತು
ಆರಿಸಿರೋ ಆರಿಸಿರೋ ನಾಲ್ಕುದಿಕ್ಕಿನ ಬೇಗೆಯು
ಆ ಭೂಭೂಕಾರವ ದೃಷ್ಟಿಮುಟ್ಟಿದರೆ ಅಟ್ಟಿ ಸಹಸ್ರವಾಯಿತ್ತು
ಲೆಕ್ಕವಿಲ್ಲದ ಮರಣ ಮಾಡಿಯಿತ್ತು ಗುಹೇಶ್ವರಾ

## ಶಿವಕಾರುಣ್ಯಾಹ್ವಾನ ಸ್ಥಲ: ೧೫

ಈ ಪ್ರಕಾರದಿಂ ನಾನಾ ಜನ್ಮಂಗಳಲ್ಲಿಯ ಜೀವನ ಜಾಡ್ಯತೆಯನ್ನು ಮಾನವ ಜನನಕ್ಕೆ ಬಂದಲ್ಲಿ ಪರಶಿವ ಜ್ಞಾನದಿಂದ ಪರಿಹರಿಸಿಕೊಳ್ಳ ಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಆ ಭವ ಜಾಡ್ಯತೆಯು ಜೀವನ ಬುದ್ಧ್ಯನುಮಾನವೊಂದರಲ್ಲಿಯೇ ಬಿಡದಾದ ಕಾರಣ ಪರಶಿವನ ಕರುಣಾಕಟಾಕ್ಷವನಾಹ್ವಾನಿಸಿ ನುಡಿದ ವಚನಂಗಳು.

ಶಿವಧರ್ಮೇ—

ತ್ವಂ ಚಿಂತಯ ಮಹಾದೇವತ್ವಮೇವೇಷಿ ನ ಸಂಶಯಃ ।
ಭ್ರಾಂತೋ ಭ್ರಮರಚಿಂತಾಯಾಂ ಕೀಟೋಽಪಿ ಭ್ರಮರಾಯತೇ ॥೧॥

ಎಲೈ ನೀನು ನಿನ್ನನ್ನು ಮಹಾದೇವನನ್ನಾಗಿಯೇ ಸಂಶಯವಿಲ್ಲದವನಾಗಿ ಧ್ಯಾನಿಸು. ಏಕೆಂದರೆ ಕೀಡೆಯು ಭ್ರಮರ ಧ್ಯಾನದಿಂದ ಭ್ರಮರನೇ ಆಗುವಂತೆ ನೀನೂ ಮಹಾದೇವನಾಗುವಿ.

ಭವಾಂತರ ಚರೋ ದುಃಖೀ ನಿರ್ಮಲಃ ಶಿವತಾಂ ಸ್ಮರೇತ್ ।
ಭವದುಃಖ ಜಡಂ ನಾಸ್ತಿ ಕೃತಾರ್ಥಃ ಸ ನ ಸಂಶಯಃ ॥೨॥

ಜನ್ಮಾಂತರದಲ್ಲಿ ತಿರುಗುತ್ತಿದ್ದ ದುಃಖಿಗೆ ಶಿವಜ್ಞಾನದಿಂದಲೇ ನಿರ್ಮಲತ್ವ ವಹುದು. ಭವದುಃಖವೆಂಬ ಜಡತ್ವಳಿದು ಕೃತಾರ್ಥನಪ್ಪುದಕ್ಕೆ ಸಂಶಯ ವಿಲ್ಲವು.

ಯೇ ಸ್ಮರಂತಿ ವಿರೂಪಾಕ್ಷಂ ಪೂಜಾಮೀಶಸ್ಯ ಕುರ್ವತೇ ।
ರುದ್ರಲೋಕಾಗತಾಃ ಶ್ರೇಷ್ಠಾಸ್ತೇ ರುದ್ರಾ ನಾತ್ರ ಸಂಶಯಃ ॥೩॥

ತ್ರಿಜಗತ್ಪತಿಯಾದ ತ್ರಿಲೋಚನನ್ನು ಯಾರು ಸ್ಮರಿಸಿ ಪೂಜಿಸುವರೋ ಅವರು ರುದ್ರಲೋಕದಿಂ ಬಂದವರಲ್ಲದೆ ಬೇರೆಯ ಮಾನವರಲ್ಲವು.

### ವಚನಗಳು

೧

ಎನ್ನಯ್ಯಾ ನಿಮ್ಮನರಸುತ್ತಿದ್ದೇನೆ
ಎನ್ನಯ್ಯಾ ಕೀಟಧ್ಯಾನದಲ್ಲಿ ನಿಮ್ಮನರಸುತ್ತಿದ್ದೇನೆ

ಎನ್ನಯ್ಯ ಕೂಡಲಸಂಗಮದೇವಾ
ಭ್ರಮರನ ಲೇಸಿನಂತೆ ಕಾರುಣ್ಯವ ಮಾಡು
ತಪ್ಪೆನ್ನದು ಶಿವಧೋ ಶಿವಧೋ

೨

ಅಯ್ಯಾ ಕರ್ಮದಾಗರವ ಹೊಕ್ಕು ವಿಷಯದ ಬಲೆಯಲ್ಲಿ ಸಿಲುಕಿ
ಅಯ್ಯಾ ದೇಹಮೋಹವೆಂಬ ಮಹಾದುಃಖಕ್ಕೀಡಾಗಿ
ಅಯ್ಯಾ ಸಾವುತ್ತಿದ್ದೇನೆ ಬೇವುತ್ತಿದ್ದೇನೆ
ಅಯ್ಯಾ ತಪ್ಪೆನ್ನದು ತಪ್ಪೆನ್ನದು ಈ ಮೊರೆಯ ವಿಚಾರಿಸಿ
ಕಾರುಣ್ಯವ ಮಾಡು
ಅಯ್ಯಾ ಆಳಿನಪಮಾನ ಆಳ್ದವಂಗ ಬಂದಂತೆ
ಅಯ್ಯಾ ಎನ್ನಳಲು ತಪ್ಪದು ನಿಮಗೆ
ಅಯ್ಯಾ ಕಾರುಣ್ಯವ ಮಾಡು ಕಾರುಣ್ಯವ ಮಾಡು ಕೂಡಲ
ಸಂಗಮದೇವಾ

೩

ಅಯ್ಯಾ ಎಳೆಗರು ತಾಯನರಸಿ ಬಳಲುವಂತೆ
ಅಯ್ಯಾ ನಿಮ್ಮನರಸಿ ಬಳಲುತ್ತಿದ್ದೇನೆ
ಅಯ್ಯಾ ನೀವೆನ್ನ ಮನಕ್ಕೆ ಪ್ರಸನ್ನವ ಮಾಡಿ ಕಾರುಣ್ಯವ
ಮಾಡಿರಯ್ಯಾ
ನೀನೆನ್ನ ಮನಕ್ಕೆ ನೆಲೆವನೆಯಾಗಿ ಕಾರುಣ್ಯವ ಮಾಡು
ನೀನಿನಿತು ಲೇಸನೀಯಯ್ಯಾ
ಅಂಬೇಂ ಅಂಬೇಂ ಕೂಡಲಸಂಗಮದೇವಾ

೪

ಅಕಟಕಟ ಶಿವನೇ ನಿನಗಿನಿತು ಕೃಪೆಯಿಲ್ಲ
ಅಕಟಕಟ ಶಿವನೇ ನಿನಗಿನಿತು ಮರುಕವಿಲ್ಲ
ಏಕೆನ್ನ ಹುಟ್ಟಿಸಿದೆಯಯ್ಯಾ ಇಹಲೋಕ ದುಃಖಿಯ

ಏಕೆನ್ನ ಹುಟ್ಟಿಸಿದೆಯಯ್ಯಾ ಪರಲೋಕದೂರನ
ಕೂಡಲಸಂಗಮದೇವಯ್ಯಾ ಕೇಳಯ್ಯ ತಂದೆ
ನಿನಗೆ ನಾನಲ್ಲದೆ ಮತ್ತೊಂದು ಕಲ್ಲುಮರನಿಲ್ಲವೇ

೫

ಏಕೆನ್ನ ಬಾರದ ಭವಂಗಳಲ್ಲಿ ಬರಿಸಿದೆ
ಏಕೆನ್ನ ಘೋರಸಂಸಾರದಲ್ಲಿರಿಸಿದೆ
ಏಕೆನ್ನ ಕರುಣಿಸಲೊಲ್ಲದೆ ಕಾಡಿಹೆ ಹೇಳಾ
ಎನ್ನ ಲಿಂಗವೆ ನಾ ಮಾಡಿದ ತಪ್ಪೇನು ಸಾಕಲಾಗದೆಂದು
ಅಕ್ಕೊತ್ತಿ ನುಡಿದರೆ
ಏಕೆ ನಾ ನಿಮ್ಮ ಬಿಡುವೆ ಶಂಭುಜಕ್ಕೇಶ್ವರಾ

೬

ಬಲ್ಲಿದನ ಹಗೆಹ ತೆಗೆವನ್ನಕ್ಕರ ಬಡವನ ಹರಣ ಹೋದ
ತೆರನಂತಾಯಿತ್ತು
ನೀ ಕಾಡಿ ಕಾಡಿ ನೋಡುವನ್ನಬರ ಎನಗಿದು ವಿಧಿಯೇ ಹೇಳಾ ತಂದೆ
ಮೂರು ಆರುವನ್ನಬರ ಎಮ್ಮೆ ಗಾಳಿಗೆ ಹಾರಿಹೋದ
ತೆರನಂತಾಯಿತ್ತು
ಎನಗೆ ನೀನಾವ ಪರಿಯಲ್ಲಿ ಕರುಣಿಸುವೆಯಯ್ಯಾ
ಚೆನ್ನಮಲ್ಲಿಕಾರ್ಜುನಾ

೭

ಎಲುದೋರಿ ಸರಸವಾಡಲೇನು ಭೃಂಗಿಯೇ
ಸೀಳಿ ಹೊದೆಯಲೇನು ಗಜಾಸುರನೇ
ಹೆಣ್ಣುಲೀಲೆಯ ಮಾಡಲೇನು ಅಂಧಕಾಸುರನೇ
ಮನವಲ್ಲಾಡಲೇನು ಸಿರಿಯಾಳನೇ
ನೊಣ ತೃಣದೋಪಾದಿ ನಾನು ಎನ್ನನಿನಿತು ಬಳಲಿಸುವರೇ
ಕರುಣಿಸು ಕರುಣಾಕರಾ ಉಳಿಯುಮೇಶ್ವರಾ

೮

ನೀನೆನ್ನನೊಲ್ಲದಿದ್ದರೆ ನಾನಾರ ಸಾರಿ ಬದುಕಲಯ್ಯಾ
ಮೇಕುದೋರಿ ಗಂಡನ ಮಾಡಿಕೊಂಡವರುಂಟೇ

ನಿಮ್ಮಿಂದಲಧಿಕರುಂಟೇ ಹೇಳಾ
ತಲೆಯೂರಿ ತಪ್ಪಿಸಿದೊಡೆ ಅಲ್ಲಿ ಮೂರ್ತಿಯ ತೋರುವಾತನು ನೀನೆ
ಕಣ್ಣಮುಚ್ಚಿ ಕಮರಿಯ ಹಾಯ್ದರೆಯೂ ಅಲ್ಲಿ ಪದವಿಯ
ಕೊಡುವವನು ನೀನೆ
ನೀನು ಕರುಣಿಸುವನ್ನಕ್ಕರ ನಾನು ಹೀಗಿದೇನೆ ಹೇಳಾ ಸಕಳೇಶ್ವರಾ

## ದೃಷ್ಟನಷ್ಟ ಸ್ಥಲ : ೧೬

ಈ ಪ್ರಕಾರದಿಂ ಜೀವನ ಸಂಬಂಧಿಸಿಕೊಂಡಿರುವ ದೇಹಾದಿಮಿಥ್ಯವ ನರಿವಡೆ ಶಿವಕಾರುಣ್ಯದಿಂದಲ್ಲದೆ ಆಗುದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಇಂತಹ ಶಿವಕಾರುಣ್ಯದಿಂದುದಯವಾದ ವಿರಕ್ತಿ ಜ್ಞಾನದಿಂ ದೇಹಾದಿ ಪ್ರಪಂಚಿಕದ ತೋರಿಕೆಯೆಲ್ಲವು ನಷ್ಟವಹುದೇ ದೃಷ್ಟವೆಂಬುದನರಿದು ನುಡಿದ ವಚನಂಗಳು.

ಶಿವಧರ್ಮೇ—

ಬಾಲ್ಯೇ ತು ಕ್ರೀಡನಾಸಕ್ತೋ ಯೌವನೇ ವಿಷಯೋನ್ಮುಖಃ ।
ಅಜ್ಞಾನವಾನಶಕ್ತಶ್ಚ ವಾರ್ಧಕೇ ಸಮುಪಸ್ಥಿತೇ ॥೧॥

ಬಾಲತ್ವದಲ್ಲಿ ಆಟಂಗಳಲ್ಲಿ ತಾತ್ಪರ್ಯವುಳ್ಳವನಾಗಿ ಪ್ರಾಯದಲ್ಲಿ ವಿಷಯಂಗಳಲ್ಲಿ ಅಭಿಮುಖನಾಗಿ ವಾರ್ಧಕ್ಯದಲ್ಲಿ ಜ್ಞಾನಹೀನ ಪ್ರಾಣಿಯೆನಿಸಿ ಶಕ್ತಿಯಿಲ್ಲದವನಾಗಿರುವನು.

ಬಾಲಾ ವೃದ್ಧಾನ್ಮೃತಾನ್ ದೃಷ್ಟ್ವಾ ಮೃತಾ ವಿಷ್ಣ್ವಾದಿದೇವತಾಃ ।
ಆತ್ಮನಶ್ಚ ಮೃತಿಂ ಸ್ಮೃತ್ವಾ ಶೀಘ್ರಂ ಕುರ್ಯಾಚ್ಛಿವಾರ್ಚನಮ್ ॥೨॥

ಚಿಕ್ಕಮಕ್ಕಳು ಹಿರಿಯರು ಸಾವುದು ಸತ್ಯ. ಬ್ರಹ್ಮವಿಷ್ಣು ಮೊದಲಾದವರು ಸಾವುದು ಸತ್ಯ. ಇದನ್ನು ಕೇಳಿಯೂ ಕಂಡೂ ತಮಗೆ ಸಾವಿಲ್ಲವೆಂದು ಸಂದೇಹಿಸದೆ ಬೇಗನೆ ಶಿವಪೂಜೆಯಂ ಮಾಡುವುದು.

ಲೈಂಗೇ—

ತ್ವರಿತಂ ಜೀವಿತಂ ಯಾತಿ ತ್ವರಿತಂ ಯಾತಿ ಯೌವನಮ್ ।
ತ್ವರಿತಂ ವ್ಯಾಧಿರಭ್ಯೇತಿ ತಸ್ಮಾತ್ಪೂಜ್ಯಃ ಸದಾಶಿವಃ ॥೩॥

ಜೀವವು ಬೇಗನೆ ಹೋಗುವುದು. ಪ್ರಾಯವು ಬೇಗನೇ ಹೋಗುವುದು. ವ್ಯಾಧಿಯು ಬೇಗನೆ ಬರುತಿಪ್ಪುದು. ಅದರಿಂದ ಯಾವಾಗಲೂ ಶಿವನನ್ನು ಪೂಜಿಸುತ್ತಿರುವುದು.

ಹೀನಾಶ್ರಯಂ ನ ಕರ್ತವ್ಯಂ ಕರ್ತವ್ಯಂ ಮಹದಾಶ್ರಯಮ್ ।
ಈಶಾಶ್ರಯೋ ಮಹಾನಾಗಃ ಪ್ರಪಚ್ಛ ಗರುಡಂ ಸುಖಮ್ ॥೪॥

ಹೀನಾಶ್ರಯದಿಂದ ಮಹಾನುಭಾವಿಗಳ ಆಶ್ರಯವೇ ಲೇಸು. ಅದು

ಹೇಗೆಂದರೆ— ಪರಮೇಶ್ವರನಲ್ಲಿದ್ದ ಸರ್ಪನು ಗರುಡನನ್ನು "ಕ್ಷೇಮವೇ' ಎಂದು ಕೇಳಿತು. ಮಹದಾಶ್ರಯವೆಂಬುದೇ ಶಿವಾಶ್ರಯವಾದ ಕಾರಣ ಶಿವನನ್ನೇ ಪೂಜಿಸಬೇಕೆಂಬುದರ್ಥವು.

## ವಚನಗಳು

೧

ಸಾವು ತಡವಿಲ್ಲ ನರಕ ದೂರವಿಲ್ಲ
ದೇಹದಿಚ್ಛೆಗೆ ಹರಿದು ಕೆಮ್ಮನೆ ಕೆಡಬೇಡ
ದುರ್ವಿಷಯವ ಬಿಡು ಬೇಗ ಗುರುಪದವ ನಂಬು
ನಮ್ಮ ಸಿಮ್ಮಲಿಗೆಯ ಚೆನ್ನರಾಮನಲ್ಲಿ ನೀನು ಸುಖಿಯಪ್ಪೆ ಮರುಳೇ

೨

ಜವನಿದ್ದಾನೆ ಜವನ ಪಟ್ಟಣವಿದೆ
ಮಾಮರ ಘೂಮರನಿದೆ ತೋಮರನಿದೆ ನೋಡಯ್ಯಾ
ಆವ ಕಾರ್ಯಮಾದಡೂ ದೇವಕಾರ್ಯವ ಮಾಡು
ಸಾವಕಾರ್ಯ ತಪ್ಪದು
ನೀನು ಕೆಡಬೇಡ ಕಂಡ್ಯಾ ಬೇಗ ನಂಬಿ ಪೂಜಿಸು
ಸೊಡ್ಡಳದೇವನ ಮರುಳೇ

೩

ನಿನ್ನ ಹರಯದ ರೂಹಿನ ನುಡಿಯ ಜಾಣಿನ ಚೆಲುವಿನ ಸಿರಿಯ
ಸಂತೋಷದ ಕರಿ ತುರಗ ರಥ ಪದಾತಿಯ ನೆರವಿಯ
ಸತಿಸುತರ ಬಂಧುಗಳ ಸಮೂಹದ
ನಿನ್ನ ಕುಲದಭಿಮಾನದ ಗರ್ವವ ಬಿಡು ಮರುಳಾಗದಿರು
ಅಕಟಕಟಾ ರೋಮಜನಿಂದ ಹಿರಿಯನೇ ಮದನನಿಂ ಚೆಲುವನೇ
ಸುರಪತಿಯಿಂದ ಸಂಪನ್ನನೇ ವಾಮದೇವ ವಶಿಷ್ಠರಿಂದ ಕುಲಜನೇ
ಅಂತಕನ ದೂತರು ಬಂದು ಕೈವಿಡಿದೆಳೆದೊಯ್ಯುವಾಗ
ನುಡಿಗೆಡೆಯಿಲ್ಲ

ಕೇಳೋ ನರನೆ ಎನ್ನ ಮಹಾಲಿಂಗ ತ್ರಿಪುರಾಂತಕದೇವರ
ಪೂಜಿಸಿದೆಯಾದರೆ
ಕೇಡಿಲ್ಲದ ಪದ ದೊರಕೊಂಬುದು ಮರುಳೇ

೬

ಬಲೀಂದ್ರನ ಸಿರಿಯಿಂದಲಧಿಕರ ನಾನಾರನು ಕಾಣೆ
ಅಂತಹ ಸಂಪತ್ತು ಮೂರಡಿಗೈದದೆ ಹೋಯಿತ್ತು
ಕೆಡುವಂತಿದ್ದಿತೇ ಕೌರವನ ರಾಜ್ಯ
ಮಡಿವಂತಿದ್ದಿತೇ ರಾವಣನ ಒಲ್ಲಾಳಿಕೆ
ಪರಸ್ತ್ರೀ ಲಕ್ಷ್ಮೀದೇವಿಗೊಲಿದು ಒಂದು ನಿಮಿಷದಲ್ಲಿ ಮಡಿದ
ಇದು ಸತ್ಯ ಇದು ಸತ್ಯ
ಸಿರಿ ಸೌಕರ್ಯವೆಂಬುದು ಆಕಾಶದ ರಚನೆ
ಇದನರಿದು ದೇಹದಿಚ್ಛೆಯನತಿಗಳೆದು
ನಮ್ಮ ಸಕಳೇಶ್ವರದೇವಂಗೋತು ನೀನೆಂಬ ಭ್ರಮೆಯಳಿಯಾ ಮರುಳೆ

೭

ಕಾಯವ ನಿಶ್ಚಯಿಸಲಿಲ್ಲ ಜೀವವ ನಿಶ್ಚಯಿಸಲಿಲ್ಲ
ಕಾಯ ಜೀವಕ್ಕೆಂತು ನೆಲೆಯಿಲ್ಲವಯ್ಯಾ
ಸುಖವ ನಿಶ್ಚಯಿಸಲಿಲ್ಲ ದುಃಖವ ನಿಶ್ಚಯಿಸಲಿಲ್ಲ
ಸುಖ ದುಃಖಂಗಳೆಂಬವಕ್ಕೆಂತು ನೆಲೆಯಿಲ್ಲವಯ್ಯಾ
ರಾಜ್ಯವ ನಿಶ್ಚಯಿಸಲಿಲ್ಲ ಲಕ್ಷ್ಮಿಯ ನಿಶ್ಚಯಿಸಲಿಲ್ಲ
ಅಭ್ರಚ್ಛಾಯೆ ಮಾಯೆ ಮೋಹ ಮಹೇಂದ್ರಜಾಲವೋ
ಎನ್ನದು ಮನೆ ಎನ್ನದು ಧನ ಎನ್ನದು ಸ್ತ್ರೀಯೆಂಬುದೆಲ್ಲವೂ
ಕನಸಿನಲ್ಲಿ ಕಂಡ ಸಿರಿ ಕಣ್ಣು ತೆರೆದರೆ ಹೋದಂತೆ
ಹಾಲುಳ್ಳಲ್ಲಿ ಹಬ್ಬವ ಮಾಡಿ ಗಾಳಿಯಿದ್ದಲ್ಲಿ ತೂರಿಕೊಳ್ಳಿ
ಬಳಿಕಲರಸಿದರುಂಟೇ ಪರಮ ಸುಖವು
ನಿಜಗುರು ಸ್ವತಂತ್ರ ಕಪಿಲಸಿದ್ಧ ಮಲ್ಲೇಶ್ವರನಲ್ಲಿ
ಹರಗೋಲ ಪಡೆದಲ್ಲಿ ತೊರೆಯ ದಾಂಟಿಕೊಳ್ಳಿರೋ

೬

ಸಾವುದು ದಿಟದಿಟ ನೋಡಾ
ಅದು ಸಟೆಯೆಂದು ನಿತ್ಯವೆಂದನಿತ್ಯವ ನಂಬಿ
ಹೊನ್ನು ಹೆಣ್ಣು ಮಣ್ಣು ನಿನ್ನವೆಂದು ನಂಬಿರಲು
ಅವು ನಿನ್ನ ವಂಚಿಸಿ ಅನ್ಯರಿಗೆ ಹೋದುದನರಿಯಿರಿ
ಅಯ್ಯೋ ಅಯ್ಯೋ ಕೆಡದಿರಿ ಕೆಡದಿರಿ ಸತ್ಪಾತ್ರಕ್ಕೆ ಸಲಿಸಿ ಬದುಕಿರಯ್ಯಾ
ಗುರುಲಿಂಗಜಂಗಮಕ್ಕೆ ಸದ್ಭಕ್ತಿಯಿಂ ದಾಸೋಹವಂ ಮಾಡಲು ನಿತ್ಯವು
ಇದು ಸಟೆಯೆಂದು ನರಕಕ್ಕಿಳಿದು ಕೆಡದಿರಿ ಕೆಡದಿರಿ
ಇದನರಿದು ಸಟೆಯ ದಿಟವ ಮಾಡಿರಿ
ಗುರುಲಿಂಗಜಂಗಮಕ್ಕೆ ದಾಸೋಹವ ಮಾಡುವುದೆ ದಿಟ
ಇದು ಸತ್ಯ ಇದು ಸತ್ಯ ಇದೇ ನಿತ್ಯ ಇದೇ ಯುಕ್ತಿ ಇದೇ ಭಕ್ತಿ
ಇದೇ ಶಕ್ತಿ ಇದೇ ಮುಕ್ತಿ ಇದು ಸತ್ಯ ಶಿವ ಬಲ್ಲ ಶಿವನಾಣೆ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ವೈರಾಗ್ಯ ಸ್ಥಲ: ೧೭

ಇಂತೀ ಪ್ರಕಾರದಿಂ ದೇಹಾದಿ ಪ್ರಪಂಚವು ನಷ್ಟವಹುದೇ ದೃಷ್ಟ ವೆಂಬುದನರಿದು ಶಿವಲಿಂಗಾರ್ಚನೆಯಿಂ ಮಾಡಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಆ ನಷ್ಟವಾಗುವ ಪ್ರಪಂಚಿನಲ್ಲಿ ಮನವನಿಕ್ಕಿ ಸತ್ತುಹೋಗಲಾಗದೆಂದೇ ವೈರಾಗ್ಯಮಂ ಪ್ರತಿಷ್ಠಿಸಬೇಕಾಗಿ ನುಡಿದ ವಚನಂಗಳು.

ಶಿವಧರ್ಮೇ—

> ಪಿತುಃ ಪಿತಾ ತಸ್ಯ ಪಿತಾ ಕ್ವಯಾತಾ ಮಾತಾ ಕ್ವಯಾತಾ ಸುಹೃದಃ
> ಕ್ವಯಾತಾಃ ।
> ಇತ್ಥಂ ವಿಚಿಂತ್ಯ ಪ್ರಸಭಂ ಹಿ ವಿದ್ವಾನ್ ಯಜೇನ್ಮಹೇಶಾನ
> ಮನಿಂದಿತಾತ್ಮಾ ॥೧॥

ತನ್ನ ತಂದೆಯ ತಂದೆ ಸತ್ತುದನು ಕಂಡು ತನ್ನ ತಾಯಿ ಸತ್ತುದನು ಕಂಡು ತನ್ನ ಬಂಧುಗಳು ಮಿಕ್ಕಿದವರುಗಳು ಸತ್ತುದನು ಸಾವುದನು ಕಂಡು ಇದೆರಂತೆಯೋ ಎಂದು ಪುಣ್ಯಾತ್ಮನಾದ ವಿದ್ವಾಂಸನು ಯೋಚಿಸಿ ಜಗದೀಶ್ವರ ನಾದ ಪರಮೇಶನನ್ನು ಪೂಜಿಸಬೇಕು.

ಲೈಂಗೇ—

> ಪತತ್ಯಸ್ಮಿನ್ನಿತೀಶಕ್ತಿಃ ಸದಾನುಗ್ರಹರೂಪಿಣೀ ।
> ತಸ್ಯಾಂ ಪತಿತಮಾತ್ರಾಯಾಂ ಮಲತ್ರಯನಿವರ್ತಿಕಾ ॥೨॥
> ಶಕ್ತಿಃ ಪ್ರವರ್ತತೇ ತಸ್ಯಾಃ ಪ್ರವೃತ್ತೌ ಚ ಮಹಾತ್ಮನಾಮ್ ।
> ವೈರಾಗ್ಯಂ ಜಾಯತೇ ಕ್ಷಿಪ್ರಂ ಸಂಸಾರಾದ್ದುಃಖಸಾಗರಾತ್ ॥೩॥

ಮುಕ್ತಿ ಕಾಮಿಯಾಗಿಪ್ಪ ವಿಜ್ಞಾನಾಕಲನ ಮೇಲೆ ಅನುಗ್ರಹರೂಪಿಣಿ ಯಾದ ಪರಮೇಶ್ವರನ ಕೃಪಾಕಟಾಕ್ಷಶಕ್ತಿ ಬೀಳುತ್ತಿಹುದು. ಆ ಕೃಪಾ ಕಟಾಕ್ಷ ಶಕ್ತಿ ಪತನವಾಗುತ್ತಿರಲಾಗಿ ಮಲತ್ರಯಂಗಳಂ ಹೋಗಲಾಡಿಸುವ ನಿವೃತ್ತಿಶಕ್ತಿಯು ಪ್ರವರ್ತಿಸುತ್ತಿಹುದು. ಆ ನಿವೃತ್ತಿಶಕ್ತಿ ಪ್ರವರ್ತಿಸಲಾಗಿ

ಆ ವಿಜ್ಞಾನಾಕಲನೆಂಬ ಮಹಾತ್ಮಂಗೆ ಸಂಸಾರವೆಂಬ ದುಃಖಸಮುದ್ರದತ್ತ ಣಿಂದ ಶೀಘ್ರವೇ ವೈರಾಗ್ಯ ಹುಟ್ಟುತ್ತಿಹುದು.

## ವಚನಗಳು

೧

ದಿಟ ದಿಟ ಎನಗಿನ್ನೆಂತಯ್ಯಾ ಸಾವುಬಂದಿತ್ತೇ ಸಾವುಬಂದಿತ್ತೇ
ಸ್ಥಿರಾಯುಗಳೆಂಬ ದೇವಜಾತಿಗಳು ಸತ್ತುದ ಕೇಳುತ್ತಲಿದ್ದೇನೆ
ಮತ್ತೆ ಎನ್ನ ಅನ್ವಯದವರು ಸತ್ತುದ ಕಾಣುತ್ತಲಿದ್ದೇನೆ
ಮತ್ತೆಯೂ ನಾಚಿಕೆಯಿಲ್ಲ ಹೇಸಿಕೆಯಿಲ್ಲ
ಕರ್ಮಿ ನಾನು ಧರ್ಮಿ ನೀನು
ಬೇಗ ಬೇಗ ಭಕ್ತಿಜ್ಞಾನ ವೈರಾಗ್ಯವನಿತ್ತು ರಕ್ಷಿಸಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೨

ತವವನೆತ್ತಿ ನಡೆವಾಗ ಸ್ಮಶಾನವೈರಾಗ್ಯವಹುದು
ಪುರಾಣವ ಕೇಳುವಲ್ಲಿ ಪುಸ್ತಕ ವೈರಾಗ್ಯವಹುದು
ಶಿಶು ಗರ್ಭವಳಿದಲ್ಲಿ ಪ್ರಸೂತ ವೈರಾಗ್ಯವಹುದು
ನೆಟ್ಟನೆ ಶರಣ ಚಾರಿತ್ರವ ಕೇಳುವಾಗ ಮರ್ಕಟ ವೈರಾಗ್ಯವಹುದು
ಏನನೋದಿಯೂ ಏನ ಕೇಳಿಯೂ ಫಲವಿಲ್ಲ ಸತ್ತುದ ಕೇಳುತಲಿದ್ದೇನೆ
ಮತ್ತೆಯೂ ಎನ್ನ ಅನ್ವಯದವರು ಅಳಿವುದ ಕಾಣುತ್ತಿದ್ದೇನೆ
ಶುನಕ ಬೂದಿಯೊಳು ಮಲಗಿದ್ದು ತನ್ನಾದಿ ಅನಾದಿಯ ನೆನೆದು
ದೇಹದಿಚ್ಛೆಯನಳಿದು ಜನ್ಮಜಾಡ್ಯವ ಪರಿವೆನೆಂದು ಯೋಚಿಸುತ್ತಿರಲು
ಮೆಲ್ಲನೆ ನಿದ್ರೆ ತಿಳಿಯಲು ಆಗ ತನ್ನಾದಿಯ ಮರೆದು ಭ್ರಾಂತಿಗೊಂಡು
ಕಿವಿಯ ಕೊಡಹುತ್ತ ಹಡಿಕೆಗೆ ಹರಿವಂತೆ ಎನ್ನ ಯುಕ್ತಿ
ಇಂತಪ್ಪ ಅನುರಕ್ತಿಯನಳಿದು ದೇಹದಿಚ್ಛೆಯ ಹಳಿದು
ಪರಮ ವಿರಕ್ತಿಯನಿತ್ತು ರಕ್ಷಿಸಯ್ಯ ಬಸವಪ್ರಿಯ ಕೂಡಲ
ಚೆನ್ನಸಂಗಮದೇವಾ

೩

ಕರ್ಮ ಭಕ್ತಿ ಜ್ಞಾನ ವೈರಾಗ್ಯ ಲೌಕಿಕಗಳೆಂಬ
ಚತುರಾಶ್ರಮಿಗಳಿಗೆ ತೃತ್ಯನುಭವಸಿದ್ಧವಾಗಿಹುದು
ಹಿಡಿದು ಸುಖವಿಲ್ಲ ಬಿಟ್ಟು ದುಃಖವಿಲ್ಲ
ನೆರೆಯರಿದು ವಿಷಯಂಗಳ ಬಿಟ್ಟರೆ
ಪರಮಾನಂದವೆಂದಿಗೂ ಸೋಽಹಂ ಬ್ರಹ್ಮದಲ್ಲಿಹುದು
ಆ ಸೋಽಹಂ ಬ್ರಹ್ಮದಲ್ಲಿ ನಿಂದರೆ
ಈ ದೇಹದ ಅಹಂ ಮಮತೆಯೆಂಬ ಬಡವಾಯೆಯಳಿವುದೇ
ಸಿಮ್ಮಲಿಗೆಯ ಚೆನ್ನರಾಮನ ಭಾವಿಸಿ ನೋಡಿದಲ್ಲಿ

ಈ ಪ್ರಕಾರ ಸಕಲ ಸಂಸಾರಬಂಧನವ ಹರಿದು ತಥ್ಯಮಿಥ್ಯಂಗಳಂ ತೊರೆದು ಶಿವಾರ್ಚನಾತತ್ಪರಾಯಣತ್ವವ ಪಡೆವುದಕ್ಕೆ ವೈರಾಗ್ಯವೇ ಕಾರಣವೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಇಂತಪ್ಪ ವೈರಾಗ್ಯವಿಡಿದು ಶಿವಾರ್ಚನೆಯ ಮಾಡುವವರುಗಳ ಜೀವನವೇ ಜೀವನವಲ್ಲದೇ ಉಳಿದಂತೆ ಜೀವಿಸುವರುಗಳ ಜೀವನವಪ್ರಯೋಜನವೆಂದು ನುಡಿದ ವಚನಂಗಳು—

ಬ್ರಹ್ಮಗೀತೆಯಲ್ಲಿ—

ಶಿವನಾಮವಿಹೀನಸ್ಯ ಧ್ಯಾನಹೀನಸ್ಯ ಶೂಲಿನಃ ।
ಶಿವಭಕ್ತಿವಿಹೀನಸ್ಯ ತ್ರಿಪುಂಡ್ರೋದ್ಧೂಳನಾದಿಷು ॥೧॥
ಶ್ರದ್ಧಾಹೀನಸ್ಯ ರುದ್ರಸ್ಯ ಪ್ರಸಾದ ಸ್ಯಾಪ್ಯಸೇವನಾತ್ ।
ಸಾಕ್ಷಾನ್ಮುಕ್ತಿರ್ಮಹಾದೇವಾನ್ನೈವ ಸಿದ್ಧ್ಯತಿ ದೇಹಿನಾಮ್ ॥೨॥

ಪಂಚಾಕ್ಷರಿಯ ಜಪಿಸದಿಹುದು. ಶಿವಧ್ಯಾನವಿಲ್ಲದಿಹುದು. ಶಿವನಲ್ಲಿ ಭಕ್ತಿಯಿಲ್ಲದಿಹುದು. ತ್ರಿಪುಂಡ್ರಧಾರಣಾದಿಗಳಲ್ಲಿ ವಿಶ್ವಾಸವಿಲ್ಲದಿಹುದು. ಶಿವಪ್ರಸಾದವ ಕೊಳ್ಳದಿಹುದು. ಹೀಗೆ ಶಿವಸಂಸ್ಕಾರವಿಲ್ಲದ ಕಾರಣ ಪ್ರತ್ಯಕ್ಷಮೋಕ್ಷಸಿದ್ಧಿಯು ಆಗಲೊಲ್ಲದೆ ಪ್ರಾಣಿಗಳ ಜನ್ಮ ವ್ಯರ್ಥವಾಗಿಹೋಯಿತ್ತು.

ಕೂರ್ಮೇ—

ಧಿಗ್ಭಸ್ಮರಹಿತಂ ಫಾಲಂ ಧಿಗ್ಗ್ರಾಮಮಶಿವಾಲಯಮ್ ।
ಧಿಗನೀಶಾರ್ಚನಂ ಜನ್ಮ ಧಿಗ್ವಿದ್ಯಾಮಶಿವಾಶ್ರಯಮ್ ॥೩॥

ವಿಭೂತಿಯಿಲ್ಲದ ಹಣೆಯ ಸುಡುಸುಡು. ಶಿವಾಲಯವಿಲ್ಲದ ಗ್ರಾಮವ ಸುಡು ಸುಡು. ಶಿವಪೂಜೆಯಿಲ್ಲದ ಜನ್ಮವ ಸುಡು ಸುಡು. ಶಿವತತ್ತ್ವವಿಲ್ಲದ ವಿದ್ಯೆಯ ಸುಡು ಸುಡು.

ಪತಿಹೀನಾ ಯಥಾ ನಾರೀ ಮಾತಾಹೀನೋ ಯಥಾ ಸುತಃ ।
ಲಿಂಗಹೀನಸ್ತಥಾ ಪ್ರಾಣೀ ತಸ್ಯ ಜನ್ಮ ನಿರರ್ಥಕಮ್ ॥೪॥

ಗಂಡನಿಲ್ಲದ ಸ್ತ್ರೀಯು ಹೇಗೆ ಒಪ್ಪಲರಿಯಳೋ ತಾಯಿಯಿಲ್ಲದ ಮಗನು

ಹೇಗೆ ಒಪ್ಪಲರಿಯನೋ ಹಾಗೆ ಲಿಂಗವಿಲ್ಲದ ಪ್ರಾಣಿಯು ಒಪ್ಪಲರಿಯದು ಅಂತಹ ಜನ್ಮವು ನಿರರ್ಥಕವಾದುದು.

ಶಿವಧರ್ಮೋತ್ತರೇ—

ಯತ್ರ ಲಿಂಗಾರ್ಚನಂ ನಾಸ್ತಿ ನಾಸ್ತಿ ಯತ್ರ ತ್ರಿಪುಂಡ್ರಕ್ರಮ್
ಯತ್ರ ರುದ್ರಜಪೋ ನಾಸ್ತಿ ತಚ್ಚ್ಯಾಂಡಾಲಗೃಹೋಪಮಮ್ ॥೫॥

ಆವ ಠಾವಿನಲ್ಲಿ ಶಿವಪೂಜೆಯಿಲ್ಲ ಆವ ಠಾವಿನಲ್ಲಿ ವಿಭೂತಿಯಿಲ್ಲ ಆವ ಠಾವಿನಲ್ಲಿ ಶ್ರೀ ರುದ್ರ ಜಪವಿಲ್ಲವೋ ಆ ಠಾವುಗಳು ಹೊಲೆಯರ ಮನೆಗೆ ಸಮಾನಗಳು.

## ವಚನಗಳು

೧

ಶಿವಾಯೆಂದೋದದವನ ಓದು ಗಿಳಿಯೋದು
ಶಿವ ನಿಮ್ಮನಾರಾಧಿಸದವನ ಮನೆ ಕೆಮ್ಮನೆ
ಶಿವ ನಿಮ್ಮ ನೋಡದವನ ಕಣ್ಣು ಹೀಲಿಯ ಕಣ್ಣು
ಶಿವ ನಿಮ್ಮ ಹಾಡದವನ ಬಾಯಿ ಕನ್ನದ ಬಾಯಿ
ಶಿವ ನಿಮ್ಮ ಹೊಗಳದವನ ನಾಲಿಗೆ ಭವಿಯ ನಾಲಿಗೆ
ಬಚ್ಚಲ ತಂಪಿನ ಜೌಗಿನಲ್ಲಿ ಹುಟ್ಟಿದ ಜಿಗುಣೆಯಯ್ಯಾ
ಶಿವ ನಿಮಗೆರಗದ ಕರ್ಮಿ ತೂಲದ ಮೇಲಣ ಹೆಣನು
ಶಿವ ನಿಮ್ಮ ನೆನೆಯದವನ ದೇಹ ಸಂದೇಹ
ಶಿವ ನಿಮ್ಮ ಭಕ್ತನಲ್ಲದವನ ಭೋಗವು ವಿದ್ಯೆಯು ಕುಲವು ಶ್ರೀಯು
ಸಾಹಸ ಯಶಸ್ಸು ವಿಮಾನದ ಮೇಲಣ ಶವದ ತೋರಿಕೆಯಯ್ಯಾ
ಅವನೇತಕ್ಕೆ ಬಾತೆ ಇದುಕಾರಣ
ಭವರೋಗ ನರಕಕ್ಕಾರದೆ ಶರಣುವೊಕ್ಕೆನಯ್ಯಾ ಸೊಡ್ಡಳಾ

೨

ಹುಟ್ಟದ ಬೀಜವಿದ್ದೊಡೇನಯ್ಯಾ ಧರೆಯೊಳಗೆ
ಅಟ್ಟುಣ್ಣಬಾರದ ಮಡಕೆಯಿದ್ದೊಡೇನಯ್ಯಾ ಮನೆಯೊಳಗೆ
ಶಿವ ನಿಮ್ಮ ಮುಟ್ಟದ ಮನವಿದ್ದೊಡೇನಯ್ಯಾ ತನುವಿನೊಳಗೆ

ಕೆಚ್ಚಲ ಕಚ್ಚಿದ ಉಣ್ಣೆ ಒಲ್ಲುದೆ ಕ್ಷೀರದ ರುಚಿಯುನು
ಬಚ್ಚಲೊಳಗಣ ಬಾಲ ಹುಳು ಬಲ್ಲುದೆ ನಿಚ್ಚಳದ ನೀರಸುಖವ
ನಿಚ್ಚನಿಚ್ಚಲೋದುವ ಗಿಣಿ ಬಲ್ಲುದೆ ತನಗೆ ಒಹ ಬೆಕ್ಕಿನ ಬಾಧೆಯ
ಹುಚ್ಚುಗೊಂಡ ನಾಯಿ ಬಲ್ಲುದೆ ಸಾಕಿದೊಡೆಯನ
ಇದು ಕಾರಣ ಒಡಲಪಡೆದರೇನು ಮಡದಿಯರ ನೆರಹಿದರೇನು
ಒಡವೆಯ ಗಳಿಸಿದರೇನು
ಶಿವನೇ ನಿಮ್ಮನರಿಯದ ಮನುಜನ ಒಡಲೆಂಬುದು
ಹೊಲೆ ಜೋಗಿಯ ಕೈಯ ಒಡೆದ ಸೋರೆಯಂತೆ ಕಾಣಾ
ಕಲಿದೇವರದೇವಾ

೩

ಎಲವದ ಮರ ಹೂತು ಫಲವಾದ ತೆರನಂತೆ
ಸಿರಿಯಾದಡೇನು ಶಿವಭಕ್ತಿಯಿಲ್ಲದನ್ನಕ್ಕರ
ಗುಣವಿಲ್ಲದ ರೂಪಿನಂತೆ ಹಾವುಮೆಕ್ಕೆಯ ಹಣ್ಣಿನಂತೆ
ಬಚ್ಚಲ ನೀರು ತಿಳಿಧಂತೆ
ಶಿವಭಕ್ತಿಯಿಲ್ಲದವನ ಸಂಪದವೆಂಬುದು ವ್ಯರ್ಥವ್ಯರ್ಥ
ಕೂಡಲಸಂಗಮದೇವಾ

೪

ಹಾವು ಹದ್ದು ಕಾಗೆ ಗೂಗೆ ಅನಂತಕಾಲ ಬದುಕವೇ
ಬೇಡವೋ ಮಾನವಾ ಲೇಸೆನಿಸಿಕೊಂಡು ಬದುಕು ಓ ಮಾನವಾ
ಶಿವಭಕ್ತನಾಗಿ

ಜೀವಿತಂ ಶಿವಭಕ್ತಾನಾಂ ವರಂ ಪಂಚ ದಿನಾನಿ ಚ
ಅಜಕಲ್ಪಸಹಸ್ರೇಭ್ಯೋ ಭಕ್ತಿಹೀನಸ್ಯ ಶಾಂಕರಿ

ಎಂದುದಾಗಿ ನಮ್ಮ ಕೂಡಲಸಂಗಮದೇವರ ಭಕ್ತಿವಿಡಿದು
ಐದು ದಿವಸವಾದರು ಬದುಕಿದರೆ ಸಾಲದೆ

## ಅನ್ಯದೈವ ನಿರಸನ ಸ್ಥಲ: ೧೯

ಈ ಪ್ರಕಾರದಿಂದ ದೇವತಾಯೋಗ್ಯರ್ಗಳಾಗಿ ಬಾಳುವರ ಬಾಳುವೆ ಬಾಳುವೆಯಲ್ಲದೆ ಉಳಿದಂತೆ ದೇವತಾವಿರಹಿತವಾಗಿ ಬಾಳುವರ ಬಾಳುವೆ ಯೆಲ್ಲವು ಪ್ರಯೋಜನವಲ್ಲವೆಂಬುದಂ ಪ್ರತಿಷ್ಠೆಯ ಮಾಡಿ ನುಡಿದರ್ಮಹಾ ಪುರಾತನರು. ಆ ದೇವತಾಲಕ್ಷಣವು ಶ್ರೀ ಮಹಾದೇವರಿಗಲ್ಲದೆ ಉಳಿದ ಬ್ರಹ್ಮವಿಷ್ಣ್ವಾದಿದೇವತೆಗಳಿಗೆ ಇಲ್ಲವೆಂಬುದುಂ ಪ್ರತಿಷ್ಠಿಸಬೇಕಾಗಿ ನುಡಿದ ವಚನಂಗಳು.

ಶಿವಧರ್ಮೇ--

ವಿಷ್ಣ್ವಾದಿದೇವತಾನಾಂ ತು ವಿಶ್ವಾಧಿಕ್ಯಂ ವದಂತಿ ಯೇ ।
ಅಧೋಮುಖೋರ್ಧ್ವಪಾದಾಸ್ತೇ ಯಸ್ಯಂತಿ ನರಕಾರ್ಣವಮ್ ॥೧॥

ವಿಷ್ಣು ವೊದಲಾದ ದೇವತೆಗಳಿಗೆ ವಿಶ್ವಾಧಿಕ್ಯವನ್ನು ಆವ ಮನುಷ್ಯರು ಹೇಳುವರೋ ಅವರು ತಲೆಕೆಳಗು ಕಾಲುಮೇಲಾಗಿ ನರಕಸಮುದ್ರವ ನೈದುತ್ತಿಹರು.

ರುದ್ರಸ್ಯ ಬ್ರಹ್ಮವಿಷ್ಣುಭ್ಯಾಂ ನಾಧಿಕ್ಯಂ ಪ್ರವದಂತಿ ಯೇ ।
ಹನ್ಯಾತ್ತಾನ ವಿಚಾರೇಣ ಹಂತುರ್ದೋಷೋ ನ ಕಶ್ಚನ ॥೨॥

ರುದ್ರಂಗೆ ಬ್ರಹ್ಮವಿಷ್ಣುಗಳು ಸರಿಯೆಂದು ಆರು ಕೆಲಬರು ಹೇಳುವರೋ ಅವರುಗಳನ್ನು ವಿಚಾರಿಸದೆ ಕೊಲ್ಲುವದು. ಹಾಗೆ ಕೊಂದಾತಂಗೆ ಆವ ದೋಷವೂ ಇಲ್ಲವು.

ಯಥಾ ಸ್ಯಾಪಾನಯೋಃ ಸಾಮ್ಯಂ ಛಿದ್ರತ್ವೇಽಪಿ ನ ವಿದ್ಯತೇ ।
ತಥೈಕತ್ವೇಸ ಸರ್ವೇಷಾಂ ರುದ್ರಸಾಮ್ಯಂ ನ ವಿದ್ಯತೇ ॥೩॥

ಹ್ಯಾಗೆ ಇಂದ್ರಿಯುಗಳಲ್ಲಿಯು ಮುಖ ಗುದಂಗಳಿಗೆ ಸರಿಯಿಲ್ಲವೋ ಹಾಗೆ ಎಲ್ಲ ದೇವತೆಗಳಿಗೆಯೂ ರುದ್ರನೊಡನೆ ಸಮತ್ವವಿಲ್ಲ.

### ವಚನಗಳು

೧

ಅಗ್ಗದ ಹರಿಬ್ರಹ್ಮರ ಮರೆದೊಮ್ಮೆ ಹರಂಗೆ ಸಮಹೆಂದರೆ ಅವನು ಚಾಂಡಾಲನು

ಅವನ ಮುಖವ ನೋಡಲಾಗದು ಅದೆಂತೆಂದಡೆ ಸೌರಪುರಾಣೇ—

ಯೋ ಮಹಾದೇವಮನ್ಯೇನ ಹೀನದೇವೇನ ದುರ್ಮತಿಃ ।
ಸಕೃತ್ಸಾಧಾರಣಂ ಬ್ರೂಯಾದಂತ್ಯಜಾನಾಂತ್ಯಜೋಽಂತ್ಯಜಃ ॥

ಇಂತೆಂದುದಾಗಿ ನಿಮಗೆ ಕಿರುಕಳ ದೈವಂಗಳ ಸಮವೆಂದು—
ಬಗುಳುವನ ಬಾಯಿ ಯಮಪಾಕುಳ
ತಪ್ಪದು ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ

೨

ಎಲ್ಲ ದೈವಕ್ಕೆ ಶಿವನೊಡೆಯನೆಂಬುದನರಿಯದೆ—
ವಿಷ್ಣುವೇ ದೈವವೆಂಬ ಭೇದವಾದಿ ನೀನು ಕೇಳಾ
ಎಲ್ಲ ದೈವಕ್ಕೆ ಶಿವನೆ ಘನವೆಂಬುದನರಿಯದೆ-
ವಿಷ್ಣುವೆ ಘನವೆಂಬ ಮಾಯಾವಾದಿ ನೀನು ಕೇಳಾ

ಅದೆಂತೆಂದೊಡೆ—

"ಓಂ ಗಾಯತ್ರೀ ಛಂದಃ ವಿಶ್ವಾಮಿತ್ರ ಋಷಿ ಸಹಿತ ದೇವತಾ
ಅಗ್ನಿರ್ಮುಖಂ ಬ್ರಹ್ಮಾ ಶಿರೋ ವಿಷ್ಣುರ್ಹೃದಯಂ ರುದ್ರಃ ಶಿಖಾ" ॥

ಎಂದು ಹೀಗೆ ಶ್ರುತಿಯಿರುತ್ತಿರಲು ಮತ್ತೆ ಗಾಯತ್ರೀ—

ಓಂ ಭೂಃ ಓಂ ಭುವಃ ಓಂ ಸುವಃ ಓಂ ಮಹಃ ಓಂ ಜನಃ
ಓಂ ತಪಃ ಓಂ ಸತ್ಯಮ್ ।
ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ
ನಃ ಪ್ರಚೋದಯಾತ್ ॥

ಇಂತೆಂಬ ಗಾಯತ್ರಿಯನು ಓದಿಯೂ ಕೇಳಿಯೂ
ಶಿವಂಗೆ ಸಮವಾದ ದೈವವುಂಟೆಂಬ ಅಜ್ಞಾನಿ ಹೊಲೆಯರ ಕೂಡೆ
ತರ್ಕಿಸಲುಂಟೇ
ಸರ್ವದೇವ ಶಿಖಾಮಣಿಯಯ್ಯಾ ನಮ್ಮ ದೇವರಾಯ ಸೊಡ್ಡಳಾ

೩

ಶಿವನಲ್ಲದೆ ಮತ್ತೆ ದೈವವಿಲ್ಲೆಂಬುದನು ದಕ್ಷನ ಜನ್ಮ ತಾನೇ ಹೇಳದೇ
ಉಳ್ಳಡೆ ಕ್ರತುವ ಕಾಯಲಾಗದೇ ತನ್ನ ಶಿರವು ಹೋಗಲಾದುದೇಕೆ

ಈ ಕ್ರತುಗಳಿಗೆ ಶಿವನೆ ಒಡೆಯನೆಂದುದು ಋಗ್ವೇದ--

ಓಂ ಅವೋ ರಾಜಾನ ಮಧ್ವರಸ್ಯ ರುದ್ರಗ್‌ಂ ಹೋತಾರಗ್‌ಂ
ಸತ್ಯಯಜಗ್‌ಂ
ರೋದಸ್ಯೋ ಅಗ್ನಿಂ ಪುರಾತನ ಇತ್ನೋರಚಿದಾದ್ಧಿರಣ್ಯ
ರೂಪಮವಸೇಃ ಕೃಣುಧ್ವಮ್ ॥

ಇಂತೆಂದು ವೇದವನೋದಿಯೂ ಕೇಳಿಯೂ ಶಿವಂಗೆ ಅನ್ಯದೈವ
ಸರಿಯೆಂಬ
ಕುನ್ನಿಯ ಬಗುಳ ಬೇಡವೆಂದಡೆ ಮಾಣದು ನೋಡಾ
ಬಸವಪ್ರಿಯ ಕೂಡಲಚೆನ್ನಸಂಗಮದೇವಾ

೪

ಮತ್ಸ್ಯತಲೆಸುತ್ತಾಗಿ ಹರನ ಮುಡಿಯಲ್ಲಿದೇಕೋ
ಕೂರ್ಮನ ಕಪಾಲ ಹರನ ಹಾರಮಧ್ಯದಲ್ಲಿದೆ
ನೀವು ಸರಿಯೆಂಬ ನರಹರಿಯ ಶಿರ ಪದಕದೊಳಗಿದೆ
ನಿಮ್ಮಾದಿವರಾಹನ ದಾಡೆಯು ಉರಸ್ಸಿನಲ್ಲಿ ಅದೆ
ನಿಮ್ಮ ತ್ರಿವಿಕ್ರಮನ ನೀಸ್ಟೆಲುವು ಖಟ್ವಾಂಗವಾಗಿ ಕೈಯಲ್ಲಿದೆ
ಕೇಶವನ ಕಣ್ಣು ಸೋಮೇಶ್ವರನ ಪಾದದಲ್ಲಿದೆ
ನಿಮ್ಮಗ್ಗದ ನಾರಾಯಣನ ಹೆಣ ರುದ್ರನ ತ್ರಿಶೂಲದ ಕೊನೆಯಲ್ಲಿದೆ
ಸಮಸ್ತ ದೇವರ್ಕಳ ಶಿರಂಗಳು ಇತ್ತರದಿ ಶಿರಮಾಲೆಗೆಯ್ದಿವೆ
ಬಲ್ಲಿದ ನರಹರಿಯ ತೊಗಲಮೇಲೆ ಕುಳ್ಳಿರ್ದ
ಗಜಾಸುರನ ಚರ್ಮವ ಹೊದ್ದ ಪುಲಿಯ ತೊಗಲನುಟ್ಟ
ಹಾವಿನಾಭರಣವ ತೊಟ್ಟ ಸುಟ್ಟ ಕಾಮನ ಬೂದಿಯನಿಟ್ಟ
ದುಷ್ಟರಿಗೆ ದುಷ್ಟ ಅಘಘೋರಟ್ಟನು ಕಟ್ಟುಗ್ರ ಮಝಭಾಪು
ದೇವರಾಯ ಸೊಡ್ಡಳಾ

೫

ಗಂಡ ಗಂಡರೆದೆಯ ಮೆಟ್ಟಿ ನಡೆದವರುಂಟೇ
ಗಂಡ ಗಂಡರ ಚಲ್ಲಣವ ಮಾಡಿ ಉಟ್ಟವರುಂಟೇ

ಗಂಡ ಗಂಡರ ಚರ್ಮವ ಹೊದ್ದವರುಂಟೇ
ಗಂಡ ಗಂಡರ ತೊಟ್ಟವರುಂಟೇ
ಗಂಡ ಗಂಡರ ತುರುಬಿದರುಂಟೇ
ಗಂಡ ಗಂಡರ ಭಸ್ಮವ ಪೂಸಿದವರುಂಟೇ
ಗಂಡ ಗಂಡರಿಗೆ ಗಂಡನ ಕಣ್ಣು ಕಾಲಲ್ಲಿದೆ
ಗಂಡರಿಗೆ ಗಂಡನ ಶಿರ ಕೈಯಲ್ಲಿದೆ
ಗಂಡು ವೇಷವೆಂಬುವರೆಲ್ಲ ನಿಮ್ಮ ಶಕ್ತಿರೂಪು
ಗಂಡರಿಗೆ ಗಂಡ ನಡೆಯಿತ್ತೆ ಬಟ್ಟೆಯೆಂಬುದು ನಿಮಗೆ ಸಂದಿತ್ತು
ಶಂಭು ಜಕ್ಕೇಶ್ವರಾ ಶರಣು ಜಗಕ್ಕೆ ನೀನೊಬ್ಬನೇ ಗಂಡನು

೬

ಜಿನನು ದೇವರೆಂದೆಂಬರು ಜಿನನು ದೇವರಲ್ಲ ಅದೆಂತೆಂದಡೆ
ನಾಭಿರಾಜ ಮರುತಾದೇವಿಗೆ ಶಾಂತಿನಾಥ ಪುಟ್ಟಿ
ಕಾಳೋದರರೆಂಬುವರು ವರ್ತಿಸುವಲ್ಲಿ ಬೇಂಟೆಗೆ ಹೋಗಿ
ತೋಹಿನಲ್ಲಿದ್ದ ಗೂಳಿಯನೆಚ್ಚು ಕೊಂದಲ್ಲಿ
ಈ ಗೂಳಿಯ ಕೊಂದ ಪಾತಕಕ್ಕೆ
ಹದಿನೆಂಟು ಲಕ್ಷ ಹೊನ್ನಿನಲ್ಲಿ ಗೂಳಿಯ ಮಾಡಿ
ಆ ಗೂಳಿಯ ದಾನವ ಕೊಟ್ಟಲ್ಲಿ ಈ ಪಾಪ ಹೋಹುದೇ
ಎಂದು ಮುನ್ನಿನ ಹಿರಿಯರುಗಳ ಕೇಳ್ದಿದಲ್ಲಿ
ಆ ಹಿರಿಯರುಗಳು ಆ ಪಾತಕವು ಹಾಗೆ ಹೋಗದೆಂದರು
ಆ ಗೂಳಿಯ ಒಂದೊಂದು ರೋಮ ಒಂದೊಂದು ಲಿಂಗಸ್ವರೂಪವು.
ಅದು ಕಾರಣ ಆ ಪಾಪವು ಹೋಗದು ಮತ್ತೆ ಹೇಗೆ ಹೋಹುದೆಂದರೆ.
ಚಂದ್ರಶೇಖರಲಿಂಗಕ್ಕೆ ಅಭಿಷೇಕವ ಮಾಡಿಸುವಲ್ಲಿ ಚಪ್ಪರವನಿಕ್ಕಿಸಿ.
ಆ ಗೂಳಿಯನಾಚಪ್ಪರದಮೇಲೆ ಮಲಗಿಸಿ.
ತಾನು ನಿರ್ವಾಣವಾಗಿ ಕೆಳಗೆ ನಿಂದಿರಲಾಗಿ.
ಆ ಗೂಳಿಯ ರುಧಿರ ತನ್ನ ನೆತ್ತಿಯ ಮೇಲೆ ಬೀಳುವ ಹಾಗೆ
ಮರಣವಾದ
ಅದುಕಾರಣ ಬಸವನ ಚರ್ಮವಂ ತಟ್ಟಾಗಿ ಹೊದ್ದು.

ಆ ಬಸವನ ಅಂಡಮಂ ಜವಳಿಗುಂಡಿಗೆಯಾಗಿ ಪಿಡಿದು-
ಆ ಬಸವನ ಬಾಲಮಂ ಯಂತ್ರಮುಟ್ಟಿ ಕುಂಚಿಗೆಯಾಗಿ ಹಿಡಿದು-
ಆ ಬಸವನ ಹೆಸರು ಬಸದಿಯಂ ಕಟ್ಟಿಸಿ-
ತನ್ನ ಪಾತಕವ ಕಳೆದುಕೊಂಬವನ ದೇವರೆಂದು ಬಗುಳುವ-
ನಾಯ ಬಾಯಿ ಯಮ ಪಾಕುಳ ತಪ್ಪದು ಗುಹೇಶ್ವರಾ

೭

ಭೃಗು ಮುನೀಶ್ವರನ ಶಾಪದಿಂದ ವಿಷ್ಣು ದಶಾವತಾರವಾಗಿ ಬಂದಲ್ಲಿ
ಶಿವಭಕ್ತಿಯ ಮಾಡಿದನೆಂಬುದಕ್ಕೆ ಶಿವಧರ್ಮ ಪುರಾಣ ಪ್ರಸಿದ್ಧ

ಮತ್ಸ್ಯಃ ಕೂರ್ಮೋ ವರಾಹಶ್ಚ ನಾರಸಿಂಹಶ್ಚ ವಾಮನಃ ।
ರಾಮೋ ರಾಮಶ್ಚ ರಾಮಶ್ಚ ಬೌದ್ಧಶ್ಚ ಕಲಿಕಾಹ್ವಯಃ ॥

ಎಂದುದಾಗಿ ಶಿವಲಿಂಗವನು ಹರಿ ಪ್ರತಿಷ್ಠೆಯಂ ಮಾಡಿದನು
ಮತ್ಸ್ಯಾವತಾರದಲ್ಲಿ ಮತ್ಸ್ಯಕೇಶ್ವರಲಿಂಗ ಲಂಕೆಯಲ್ಲಿ
ಶಿವಲಿಂಗವನು ಹರಿಪ್ರತಿಷ್ಠೆಯ ಮಾಡಿದ
ಕೂರ್ಮಾವತಾರದಲ್ಲಿ ಕೂರ್ಮೇಶ್ವರದೇವರ ದ್ವಾರಾವತಿಯಲ್ಲಿ
ಶಿವಲಿಂಗವನು ಹರಿ ಪ್ರತಿಷ್ಠೆಯಂ ಮಾಡಿದ
ವಾಮನಾವತಾರದಲ್ಲಿ ವಾಮೇಶ್ವರ ದೇವರ ವಾರಣಾಸಿಯಲ್ಲಿ
ಶಿವಲಿಂಗವನು ಹರಿ ಪ್ರತಿಷ್ಠೆಯ ಮಾಡಿದ
ರಾಮಾವತಾರದಲ್ಲಿ ರಾಮೇಶ್ವರಲಿಂಗ ಸೇತುವಿನಲ್ಲಿ

ಶಿವರಹಸ್ಯೇ —

ಪ್ರತಿಷ್ಠಾಪ್ಯ ಮಹಾದೇವಂ ಸೇತುಮಧ್ಯೇ ತು ರಾಘವಃ ।
ಲಬ್ಧವಾನ್ ಪರಮಾಂ ಮುಕ್ತಿಂ ಶಿವಾಂ ಶರ್ಭೋರನುಗ್ರಹಾತ್ ॥
ರಾಮೇಶ್ವರ ಇತಿ ಖ್ಯಾತೋ ಮಹಾದೇವಃ ಪಿನಾಕಧೃತ್ ।
ತಸ್ಯ ದರ್ಶನಮಾತ್ರೇಣ ಬ್ರಹ್ಮ ಹತ್ಯಾದಿ ನಶ್ಯತಿ ॥

ಎಂದುದಾಗಿ—

ಶಿವಲಿಂಗವನು ಹರಿ ಪ್ರತಿಷ್ಠೆಯಂ ಮಾಡಿದ
ವರಾಹಾವತಾರದಲ್ಲಿ ವರಾಹೇಶ್ವರದೇವರ ವೃಂದಗಿರಿಯಲ್ಲಿ

ಶಿವಲಿಂಗವನು ಹರಿ ಪ್ರತಿಷ್ಠೆಯಂ ಮಾಡಿದ
ನಾರಸಿಂಹಾವತಾರದಲ್ಲಿ ನಾರಸಿಂಹೇಶ್ವರದೇವರ ಮೋಬಳದಲ್ಲಿ
ಶಿವಲಿಂಗವನು ಹರಿ ಪ್ರತಿಷ್ಠೆಯಂ ಮಾಡಿದ
ಬೌದ್ಧಾವತಾರದಲ್ಲಿ ಬೌದ್ಧಕಲ್ಕಿಯೆಂಬ ದೇವರ ಕಾಶಿಯಲ್ಲಿ
ಶಿವಲಿಂಗವನು ಹರಿ ಪ್ರತಿಷ್ಠೆಯಂ ಮಾಡಿದ
ಪರಶುರಾಮಾವತಾರದಲ್ಲಿ ಪರಶುರಾಮೇಶ್ವರದೇವರ ಕಪಿಲೆಯ
ತೀರದಲ್ಲಿ
ಶಿವಲಿಂಗವನು ಹರಿ ಪ್ರತಿಷ್ಠೆಯಂ ಮಾಡಿದ
ಕೃಷ್ಣಾವತಾರದಲ್ಲಿ ಕೃಷ್ಣೇಶ್ವರ ದೇವರ ಹಿಮವತ್ಪರ್ವತದಲ್ಲಿ
ಶಿವಲಿಂಗವನು ಹರಿಪ್ರತಿಷ್ಠೆಯಂ ಮಾಡಿದ
ಶಿವಲಿಂಗಕ್ಕೆ ಹರಿಭಕ್ತನಾದ ನೋಡಿರೇ
ಕಲಿಯುಗದಲ್ಲಿ ಸ್ತ್ರೀ ರೂಪಿಂದಗಲಕ್ಕೆ ನಿಂದು
ಇಂತೀ ದಶಾವತಾರದಲ್ಲಿಯೂ ಹರಿಯೇ ಭಕ್ತ
ಹರಿಯಂ ಬಿಟ್ಟು ಭಕ್ತರಿಲ್ಲ ಸೊಡ್ಡಳ ದೇವರಿಂದ ಬಿಟ್ಟು ಕರ್ತರಿಲ್ಲ

## ಅನ್ಯದೇವತಾ ಭಜನ ನಿರಸನ ಸ್ಥಲ: ೨೦

ಈ ಪ್ರಕಾರದಿಂ ವಿಷ್ಣ್ವಾದಿಗಳ ಹುಟ್ಟಿಸುವ ಪೋಷಿಸುವ ಕಾವ ಕೊಲುವುದಕ್ಕೆ ಶಿವನೇ ಕರ್ತನೆಂಬುದನರಿದು ಶಿವಗನ್ಯರಾದ ಅಲ್ಪದೇವತೆಗಳಿಗೆ ದೇವತ್ವವಿಲ್ಲವೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಆ ಶ್ರೀಮನ್ಮಹಾದೇವನೊಬ್ಬನೆ ಪೂಜಾಯೋಗ್ಯನಲ್ಲದೆ ಮಿಕ್ಕಾದ ದೇವತೆಗಳಿಗೆ ಪೂಜೆ ಸಲ್ಲದೆಂದು ನುಡಿದ ವಚನಂಗಳು.

ಸೌರಸಂಹಿತಾಯಾಮ್—

ಯಸ್ತು ಲಿಂಗಾರ್ಚನಂ ತ್ಯಕ್ತ್ವಾ ದೇವಾನನ್ಯಾಂಶ್ಚ ಪೂಜಯೇತ್ ।
ರತ್ನಂ ವಿಹಾಯ ಮೂಢಾತ್ಮಾ ಯಥಾ ಕಾಚಮುಪೇಕ್ಷತೇ ॥೧॥

ಆವಾತನು ಲಿಂಗಾರ್ಚನೆಯ ಬಿಟ್ಟು ಅನ್ಯದೈವಂಗಳ ಪೂಜಿಸುವುದು ಅಜ್ಞಾನವು. ರತ್ನವಂ ಬಿಟ್ಟು ಗಾಜಿನಮಣಿಯಂ ಅಪೇಕ್ಷಿಸಿದವನಂತೆ ಆಗುವುದು

ಬ್ರಹ್ಮಗೀತಾಯಾಮ್—

ವಿಷ್ಣುಭಕ್ತ್ಯಾ ಚ ಮದ್ಭಕ್ತ್ಯಾ ನಾಸ್ತಿ ನಾಸ್ತಿ ಪರಾ ಗತಿಃ ।
ಶಂಭುಭಕ್ತ್ಯೈವ ಸರ್ವೇಷಾಂ ಗತಿರೇವಂ ಮಯೋದಿತಾ ॥೨॥

ವಿಷ್ಣುಭಕ್ತಿಯ ಮಾಡಿದಡೆಯೂ ಎನ್ನ ಭಕ್ತಿಯ ಮಾಡಿದಡೆಯೂ ನರಕವುಂಟು. ಶಿವಭಕ್ತಿಯ ಮಾಡಿದಡೆ ಮುಕ್ತಿಯುಂಟು. ಸಂದೇಹವಿಲ್ಲವೆಂದು ಬ್ರಹ್ಮನ ವಾಕ್ಯವು.

ಶಿವರಹಸ್ಯೇ—

ಶಿವಪೂಜಾಪರೋ ಭೂತ್ವಾ ಯೋಽನ್ಯದೈವಮನುಸ್ಮರೇತ್ ।
ಅಷ್ಟವಿಂಶತಿಕೋಟ್ಯಾ ತು ನರಕೇ ಯಾತಿ ಸ ಧ್ರುವಮ್ ॥೩॥

ಶಿವಲಿಂಗಾರ್ಚಕನಾಗಿ ಅನ್ಯದೈವದ ಭಜನೆಯ ಮನದಲ್ಲಿ ನೆನೆದರೆ ಇಪ್ಪತ್ತೆಂಟು ಕೋಟಿ ನರಕದಲ್ಲಿ ಬೀಳುವನು ಸಂದೇಹವಿಲ್ಲ.

ವೀರಭದ್ರಪುರಾಣೇ—

ಬ್ರಹ್ಮಪೂಜಾ ನ ಕರ್ತವ್ಯಾ ವಿಷ್ಣೋರಪಿ ತಥೈವ ಚ ।
ಸತತಂ ಪೂಜಯೇದ್ರುದ್ರಂ ಬ್ರಹ್ಮವಿಷ್ಣೂ ಪರಿತ್ಯಜೇತ್ ॥೪॥

ಬ್ರಹ್ಮನನ್ನೂ ವಿಷ್ಣುವನ್ನೂ ಪೂಜಿಸುವುದು ಕರ್ತವ್ಯವಲ್ಲ ನಿರಂತರವೂ ಶಿವನನ್ನೇ ಪೂಜಿಸಬೇಕೆಂದಿರುವುದು.

## ವಚನಗಳು

೧

ಗಂಗಾನದಿಯಲ್ಲಿ ಮಿಂದು ಗಂಜಳದಲ್ಲಿ ಹೊರಳುವರೇ
ಚಂದನವಿದ್ದಂತೆ ದುರ್ಗಂಧವ ಮೈಯಲ್ಲಿ ಪೂಸುವರೇ
ಸುರಭಿ ಮನೆಯಲ್ಲಿ ಕರೆವುತ್ತಿರೆ ಹರಿವರೇ ಸೊಣಗನ ಹಾಲಿಂಗೆ
ಬಯಸಿದಮೃತವಿದ್ದಂತೆ ಅಂಬಿಲವ ನೆರೆದುಂಬ ಭ್ರಮಿತಮಾನವ
ನೀನು ಕೇಳಾ
ಪರಮ ಪದವಿಯನೀವ ಚೆನ್ನ~~ಸ~~ದ್ದಂತೆ ಸಾವದೇವರ
ನೋಂತರೆ ಕಾವುದೇ ನಿನ್ನ

೨

ಉತ್ತಮಾಂಗವೆನಿಸುವ ಶಿರಸ್ಸಿಗೆ ನಿತ್ಯವಿದೆಂದು ಹೇಳಿತ್ತು ವೇದ
ನೆಚ್ಚನೆ ಶಿವನಡಿಗೆರಗುವುದು ಮತ್ತನ್ಯದೈವಕ್ಕೆರಗಲಾಗದೆಂದುದು ವೇದ
ಓಂ ಯಸ್ಮೈ ನಮಃ ಸಚ್ಛಿರೋಧರ್ಮೋ ಮೂರ್ಧ್ನಿ ನಾನಾಬ್ರಹ್ಮೋತ್ತರಾ
ಹನು ಯಜ್ಞೋದರಾ ವಿಷ್ಣು ಹೃದಯಂ ಸಂವತ್ಸರ ಪ್ರಜನನವ್
ಎಂದುದಾಗಿ ಬಸವಪ್ರಿಯ ಕೂಡಲಚೆನ್ನಸಂಗಯ್ಯನಲ್ಲದೆ
ಮತ್ತನ್ಯದೈವಕ್ಕೆರಗಿದಡೆ ನಾಯಕ ನರಕ ತಪ್ಪದು

೩

ನಾಲಿಗೆಗೆ ಈ ವಿಧಿಯೆಂದು ಹೇಳಿತ್ತು ವೇದ
ಶಿವನನ್ನೆ ಹೊಗಳುವುದು ಮತ್ತನ್ಯದೈವಂಗಳ ಹೊಗಳಲಾಗದೆಂದು
ವೇದ-

ಓಂ ಸ್ತುಹಿ ಶ್ರುತಂ ಗರ್ತಸದಂಯುವಾನಂ ಮೃಗಂ
ನ ಭೀಮಮುಪಹತ್ನುಮುಗ್ರಂ
ಮೃಡಾಜರಿತ್ರೇ ರುದ್ರಸ್ತವಾನೋ ಅನ್ಯಂತೇ ಅಸ್ಮನ್ನಿವಪಂತು ಸೇನಾಃ
ಎಂದುದಾಗಿ ಬಸವಪ್ರಿಯಕೂಡಲಚೆನ್ನಸಂಗಯ್ಯನಲ್ಲದೆ
ಮತ್ತನ್ಯದೈವವ ಹೊಗಳಿದಡೆ ನರಕ ತಪ್ಪದು

೪

ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ
ಮರಳಿ ಅನ್ಯದೈವಂಗಳನಾರಾಧಿಸುವ ಕುನ್ನಿಗಳು ನೀವು ಕೇಳಿ ಭೋ
ವಿಷ್ಣುವೇ ದೈವವೆಂದಾರಾಧಿಸಿದ ಬಲಿಗೆ ಬಂಧನವಾಯಿತ್ತು
ವಿಷ್ಣುವೇ ದೈವವೆಂದಾರಾಧಿಸಿದ ಕರ್ಣನ ಕವಚ ಹೋಯಿತ್ತು
ವಿಷ್ಣುವೇ ದೈವವೆಂದಾರಾಧಿಸಿದ ನಾಗಾರ್ಜುನನ ಶಿರ ಹೋಯಿತ್ತು
ಇನ್ನು ಬ್ರಾಹ್ಮಣನೇ ದೈವವೆಂದು ಆರಾಧಿಸಿದ ಗೌತಮಂಗೆ
ಗೋವಧೆಯಾಯಿತ್ತು
ಬ್ರಾಹ್ಮಣನೇ ದೈವವೆಂದಾರಾಧಿಸಿದ ದಕ್ಷಂಗೆ ಕುರಿದಲೆಯಾಯಿತ್ತು
ಮೈಲಾರನ ದೈವವೆಂದಾರಾಧಿಸಿದಾತನು ಕೊರಳಲ್ಲಿ ಕವಡೆಯ
ಕಟ್ಟಿ ನಾಯಾಗಿ ಬಗುಳುತಿರ್ಪ
ಭೈರವನೇ ದೈವವೆಂದಾರಾಧಿಸಿದವನು ಕೊರಳಲ್ಲಿ ಕವಡೆಯ
ಕಟ್ಟಿ ಕಿರುಕಳ ಬೆರಳ ಕಡಿದಿಕ್ಕಿ ಬಾಹಿರನಾದನು
ಮಾಯಿರಾಣಿಯ ದೈವವೆಂದಾರಾಧಿಸಿದಾತನು ಕೊರಳಿಗೆ
ಕವಡೆಯ ಕಟ್ಟಿ ತಲೆಯಲ್ಲಿ ಕೆರಹಹೊತ್ತು ಬೇವಿನ ಸೊಪ್ಪ
ನುಟ್ಟು ಸವಡಿ ಲಜ್ಜೆಯನೀಗಿದ
ಇನ್ನು ಬಿನಗು ದೈವಂಗಳ ಭಕ್ತಿ ಬಣಗು ನಾಯಿ ಬಣಗಿದೆಲುವ
ಕಚ್ಚಿಕೊಂಡು ಕಂಡಕಂಡೆಡೆಗೆ ಹರಿದಂತಾಯಿತ್ತು
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೫

ಗಂಡನೆಂಜಲಿಗೆ ಹೇಸುವಳು ಮಿಂಡನ ತಂಬುಲ ತಿಂಬ ತೆರನಂತೆ

ಗುರುವಿನಲ್ಲಿ ಉಪದೇಶ ಪಡೆದು ಪ್ರಸಾದಕ್ಕೆ ಸೂತಕವ
ಮಾಡುವ ಪಂಚ ಮಹಾಪಾತಕರು ನೀವು ಕೇಳಿ ಭೋ
ಅಂಡದೊಳಗೆ ಹುಟ್ಟಿದ ಉತ್ಪತ್ತಿಯೆಲ್ಲವೂ ಗುರುವಿಂದಾಯಿತ್ತು
ಮತ್ತೆ ಮಿಂಡ ಮೈಲಾರ ಬೀರ ಭೈರವ ಯಕ್ಕನಾತಿ ಕುಕ್ಕನೂರ
ಬನದಿ ಕೇತಧೂಳನೆಂಬ ಕಾಳುದೈವಕ್ಕೆರಗಿ ನಾನು ಶಿವಭಕ್ತ
ನೆನಿಸಿಕೊಂಬ ಚಂಡಿನಾಯಿಗಳ ಕಂಡು ಎನ್ನ ಮನ ಹೇಸಿತ್ತು
ಕಾಣಾ ಕಲಿದೇವರ ದೇವಾ

೭

ತದ್ದು ತುರಿ ತಲೆಬೇನೆ ಮೈಕೆಟ್ಟು ಶೀತ ವಾತ ಬಹುಜ್ವರ
ಹೊಟ್ಟೆಬೇನೆ ಕೆಟ್ಟಹುಣ್ಣು ಮೊದಲಾದ ಮುನ್ನೂರರುವತ್ತು
ವ್ಯಾಧಿಯನು ಶಿವ ಪರಿಯಬಿಟ್ಟು ನೋಡುವ
ಇದೆಲ್ಲವು ಶಿವನ ಕರುಣವಾದಲ್ಲದೆ ಹೋಗವು
ನಾರು ಬೇರ ನಚ್ಚಿದ ವಿದ್ಯಾಸಾಧಕರೆಲ್ಲ ಹತವಾಗಿ ಹೋದರು
ಲೋಕದ ಬುದ್ಧಿಗೇಡಿ ಮನುಜರೆಲ್ಲರು ಚಿತ್ತಶುದ್ಧವುಳ್ಳ
ಜಂಗಮಲಿಂಗದ
ಮಾತಕೇಳದೆ ಅದ್ದನ ಜೋಳ ಅರಮಾನ ಎಣ್ಣೆಯ ಕೊಂಡು
ನೋಟಗಾತಿಯರ ಮನೆಗೆ ಹೋಗಿ
ಅವರು ಹೇಳಿದ ತಾತುಭೂತದ ಕೋಟಲೆಗೊಳಗಾಗಿ ಕೈಕೊಂಡು
ಬಂದು
ಅವಕ್ಕೆ ಊಟವನಿಕ್ಕಿ ಮಿಕ್ಕ ಕೂಳ ತಮ್ಮ ಲಿಂಗಕ್ಕೆ ತೋರುವ
ಲಿಂಗದ್ರೋಹಿಯ ಮಾತ ಕೇಳಲಾಗದು ಕಲಿದೇವರ ದೇವಯ್ಯಾ

M·Phil

೮

ಸಜ್ಜನನಾದ ಶರಣನ ಮುಂದೆ ಮಜ್ಜನಕ್ಕೆರೆವೆನಯ್ಯಾ ಶಿವಲಿಂಗಕ್ಕೆ
ದುರ್ಜನರೊಡನೆ ಹೋಗಿ ಅನ್ಯದೈವಕ್ಕೆ ಸಾಹಿತ್ಯ ಕೆಳಗಾಗಿ
ಬೀಳುವರು ನೋಡಾ
ಹಾದರಕ್ಕೆ ಹುಟ್ಟಿದವರಿಗಲ್ಲದೆ ಇಂತಹ ಬುದ್ಧಿಯಿಲ್ಲ ಕಾಣಾ
ದೇವರಾಯ ಸೊಡ್ಡಳಾ

# ಶಿವಲಿಂಗಾರ್ಚನ ಪ್ರತಿಷ್ಠಾ ಸ್ಥಲ: ೨೧

ಈ ಪ್ರಕಾರದಿಂ ಬ್ರಹ್ಮವಿಷ್ಣ್ವಾದಿ ದೇವತೆಗಳೆಲ್ಲರೂ ಪೂಜೆಗೆ ಯೋಗ್ಯರಲ್ಲ. ಶಿವನೊಬ್ಬನೆ ಪೂಜಾಯೋಗ್ಯನೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಇಂತಹ ಪೂಜೆಗೆ ಯೋಗ್ಯನಾದ ಶ್ರೀಮನ್ಮಹಾದೇವನ ಆರಾರು ಪೂರ್ವದಲ್ಲಿ ಪೂಜಿಸಿದರೆಂದಡೆ ದೇವದಾನವ ಮಾನವರು ಭಜಿಸಿದರೆಂಬುದ ತಿಳುಪಲೋಸ್ಕರ ನುಡಿದ ವಚನಂಗಳು.

ಶಿವಧರ್ಮೇ—

ಇತಿಹಾಸೇಷು ವೇದೇಷು ಪುರಾಣೇಷು ಪುರಾತನೈಃ ।
ಮಹರ್ಷಿಭಿರ್ಮಹಾದೇವೋ ಮಹನೀಯಃ ಪ್ರತಿಷ್ಠಿತಃ ॥೧॥

ಮುನ್ನಿನ ಮಹಾಋಷೀಶ್ವರರಿಂದ ವೇದಗಳಲ್ಲಿ ಇತಿಹಾಸಗಳಲ್ಲಿ ಪುರಾಣಗಳಲ್ಲಿ ಪರಮೇಶ್ವರನೇ ಪೂಜಾರ್ಹನೆಂದು ಪ್ರತಿಷ್ಠಿಸಲ್ಪಟ್ಟನು.

ತಥಾಗಸ್ತ್ಯಾದಿ ಮುನಯೋ ದೂರ್ವಾಸೋ ನಂದಿಕೇಶ್ವರಃ ।
ಮಹಾಕಾಲೋ ದಧೀಚಶ್ಚ ಪಾಣಿನಿಶ್ಚ ಕಣಾದಕಃ ॥೨॥
ವಶಿಷ್ಠರುರುವಾಲ್ಮೀಕಿಭಾರದ್ವಾಜಾತ್ರಿಗೌತಮಾಃ ।
ಯೇ ತೇ ಪರಮಶೈವಾಶ್ಚ ಭಜಂತಿ ಪರಯಾ ಮುದಾ ॥೩॥

ಅಗಸ್ತ್ಯ ಮೊದಲಾದ ಮುನೀಶ್ವರರೂ ದೂರ್ವಾಸನೂ ನಂದಿಕೇಶ್ವರನೂ ಮಹಾಕಾಲನೂ ದಧೀಚನೂ ಪಾಣಿನಿಯೂ ಕಣಾದ ಮಹಾಮುನಿಯೂ ವಶಿಷ್ಠರುರು ವಾಲ್ಮೀಕಿ ಮಹಾಮುನಿ ಭಾರದ್ವಾಜನು ಅತ್ರಿಮಹಾಮುನಿ ಗೌತಮನು ಪರಮಶೈವರಾದ ಇವರೆಲ್ಲರು ಸಂತೋಷದೊಡನೆ ಆ ಮಹಾದೇವನನ್ನು ಭಜಿಸುತ್ತಿರುವರು.

ಲೈಂಗೇ—

ಬ್ರಹ್ಮವಿಷ್ಣುಸುರೇಂದ್ರಾದ್ಯಾ ದೇವತಾಃ ಪರಯಾ ಮುದಾ ।
ಶಿರೋಭಿರ್ಧಾರಯಂತ್ಯೇತೇ ಶಿವಲಿಂಗಮಹರ್ನಿಶಮ್ ॥೪॥

ಬ್ರಹ್ಮ ವಿಷ್ಣು ದೇವೇಂದ್ರಾದಿ ದೇವತೆಗಳು ಸಂತೋಷದೊಡನೆ ಶಿರಸ್ಸಿನಲ್ಲಿ ಶಿವಲಿಂಗವನ್ನು ಎಲ್ಲಾ ವೇಳೆಯಲ್ಲಿಯೂ ಧರಿಸಿರುವರು.

ಪೂಜಿತೇ ದೇವದೇವೇಶೇ ಪುರಾಣೇ ಸರ್ವಕಾರಣೇ ।
ಪೂಜಿತಾ ದೇವತಾಃ ಸರ್ವಾ ಇತಿ ವೇದಾಂತನಿಶ್ಚಯಃ ॥೫॥

ಸಮಸ್ತವಾದ ಜಗತ್ತಿಗೆ ಉತ್ಪತ್ತಿ ಕಾರಣನಾಗಿ ಪೂರ್ವದಾತನಾದ ದೇವರ್ಕಳಿಗೆಯೂ ದೇವನಾದ ಈಶ್ವರನು ಪೂಜೆಗೊಳ್ಳುತ್ತಿರಲಾಗಿ ಸಮಸ್ತವಾದ ದೇವತೆಗಳು ಪೂಜಿಸಲ್ಪಟ್ಟವರಹರು ಹೀಗೆಂದು ವೇದಾಂತ ಶಾಸ್ತ್ರದ ನಿಶ್ಚಯವು.

## ವಚನಗಳು

೧

ಶ್ರುತಿ ಪುರಾಣಾಗಮ ಇತಿಹಾಸಂಗಳಿಂ ಶಿವನೇ ಅಧಿಕನೆಂದರಿದು
ಸಕಲ ಋಷಿಜನಂಗಳು ದೇವರ್ಕಳು
ರತ್ನ ಸುವರ್ಣ ರಜಿತ ತಾಮ್ರ ಚಂದ್ರಕಾಂತ ಸ್ಫಟಿಕ
ಪವಳದ ಲಿಂಗಂಗಳನಾರಾಧಿಸಿ
ಅಗಸ್ತ್ಯ ದಧೀಚಿ ಸ್ಕಂದ ಬಾಣಾಸುರ ಪುರಂದರ ಬ್ರಹ್ಮವಿಷ್ಣು
ದೂರ್ವಾಸ ನಂದಿಕೇಶ್ವರ ಭೃಂಗಿರಿಟಿ ವೀರಭದ್ರ
ಪ್ರಮಥಾದಿಗಣಂಗಳೆಲ್ಲರು ಶಿವನ ಪೂಜಿಸಿ ಮಹದೈಶ್ವರ್ಯ
ಂಗಳಂ ಪಡೆದರು

ಆದಿತ್ಯೇ—

ರುದ್ರೇಣ ದೀಕ್ಷಿತೋ ಭೂತ್ವಾ ಸ್ಕಂದಃ ಶಿವಸಮೋಽಭವತ್ ।
ಶಿವಾಚಾರ ರಹಸ್ಯಸ್ಯ ಪಾತ್ರತಾಂ ಪ್ರಥಮಂ ಗತಃ ॥

ಎಂದುದಾಗಿ

ಇದನರಿದು ಪರಶುರಾಮ ಪರಾಶರ ವಶಿಷ್ಠ ವಾಲ್ಮೀಕಿ ಕಮಲಾಕರ
ವಿಶ್ವಾಮಿತ್ರ ಮುನಿಗಳೆಲ್ಲರೂ ಶಿವಲಿಂಗಮಂ ಧರಿಸಿಕೊಂಡು
ಶಿವಲಿಂಗಾರ್ಚನೆಯಂ ಮಾಡಿ ಪಾದತೀರ್ಥ ಪ್ರಸಾದಂಗಳಂ
ಕೊಂಡು ಮುಕ್ತರಾದರು

ಶಿವಧರ್ಮೇ—

ಪಾಣಿನಿಶ್ಚ ಕಣಾದಶ್ಚ ಕಪಿಲೋ ಗೌತಮಾದಯಃ ।
ಪ್ರಸಾದಸೇವನಾದ್ಧ್ಯಾನಾದ್ಧಾರಣಾದರ್ಚನಾದಪಿ ॥

ಎಂದುದಾಗಿ

ಇದುಕಾರಣ ಕೂಡಲಚೆನ್ನಸಂಗಮದೇವರ ಪೂಜಿಸಿ
ಪಾದೋದಕ ಪ್ರಸಾದಮಂ ಕೊಂಡು ಅತ್ಯಂತ ಶುದ್ಧರಾದರೆಲ್ಲಾ
ದೇವತೆಗಳು ಎಲ್ಲಾ ಋಷಿಗಳು

೨

ಅಯ್ಯಾ ವೈಷ್ಣವರಾದವರು ತಮ್ಮ ವಿಷ್ಣುವ ಬಿಟ್ಟುಕಳೆದು
ಶಿವಭಕ್ತರಾದರನೇಕರು
ಅಯ್ಯಾ ಜೈನರಾದವರು ತಮ್ಮ ಜಿನ್ನನ ಬಿಟ್ಟು ಕಳೆದು
ಲಿಂಗಭಕ್ತರಾದರನೇಕರು
ಅಯ್ಯಾ ದ್ವಿಜರಾದವರು ತಮ್ಮ ಕರ್ಮಂಗಳಂ ಬಿಟ್ಟು ಕಳೆದು
ಶಿವಲಿಂಗಭಕ್ತರಾದರನೇಕರು
ಶಿವಲಿಂಗವ ಬಿಟ್ಟು ಇತರವ ಹಿಡಿದವರುಳ್ಳರೆ ಹೇಳಿರಯ್ಯಾ
ಉಳ್ಳಡೆಯೂ ಅವರು ವ್ರತಗೇಡಿಗಳೆನಿಸಿಕೊಂಬರು
ಯುಕ್ತಿವಂತರಲ್ಲ ಮುಕ್ತಿವಂತರಲ್ಲ ಭಕ್ತಿವಂತರಲ್ಲ
ಮುಂದೆ ನರಕಕ್ಕೆ ಭಾಜನರಪ್ಪರು ಅದೆಂತೆಂದಡೆ

ಲೈಂಗೇ—

ಮಹೇಶ್ವರಂ ಪರಿತ್ಯಜ್ಯ ಅನ್ಯಸ್ಯಾರಾಧನಾದ್ದ್ವಿಜಾಃ ।
ಏಕ ಹಸ್ತೋ ನಿರಾಲಂಬೋ ನರಕೇ ಕಾಲನುಕ್ಷಯಂ ॥

ಎಂದುದಾಗಿ ಅವರಂತಿರಲಿ ಅದುಕಾರಣವಾಗಿ
ಋಷಿಕೃತಕದಿಂದಾದ ಕುಟಿಲದೈವಂಗಳ ದಿಟವೆಂದು ಬಗೆವರೇ ?
ಬುದ್ಧಿವಂತರು
ಘಟೆಯ ಬಿಡಲಾರದೆ ದಿಟವ ನಂಬಲಾರದೆ ನಷ್ಟವಾಗಿ ಹೋಯಿತ್ತೀ
ಜಗವು ನೋಡಾ

ಸಕಲ ದೈವಂಗಳಿಗೆ ಸಕಲ ಸಮಯಂಗಳಿಗೆ ಘನಮಹಿಮನೆಂದು
ನಿನಗೆ ಶರಣುವೊಕ್ಕೆನಯ್ಯಾ ಬಸವಪ್ರಿಯ
ಕೂಡಲಚೆನ್ನಸಂಗಮದೇವಾ

೩

ಅನಂತ ಜನ್ಮಂಗಳ ಪಾಪಂಗಳು ಸವೆದು ಹೋಗಿ
ಶ್ರೀಗುರುವಿನ ಕರುಣಾಕಟಾಕ್ಷದಿಂದ ಪ್ರಾಣಲಿಂಗೋಪದೇಶವ
ಪಡೆದು
ಸದ್ಭಕ್ತರಾಗಿ ಶಿವಲಿಂಗದರ್ಶನ ಸ್ಪರ್ಶನವ ಮಾಡಿ
ಆ ಲಿಂಗವನಂಗದಲ್ಲಿ ಧರಿಸಿಕೊಂಡು
ಅಂಗವೇ ಲಿಂಗ ಲಿಂಗವೇ ಅಂಗ ಪ್ರಾಣವೇ ಲಿಂಗ ಲಿಂಗವೇ
ಪ್ರಾಣವಾಗಿ
ಅಂತರಂಗ ಬಹಿರಂಗ ಸರ್ವಾಂಗವೆಲ್ಲವೂ ಲಿಂಗವಾದ ಬಳಿಕ
ಇಂತೀ ಶ್ರೀಗುರು ಕೊಟ್ಟ ಲಿಂಗವ ಬಿಟ್ಟು
ಬೇರೆ ಮತ್ತೆ ಆತ್ಮ ತತ್ತ್ವವ ವಿಚಾರಿಸಿ ನೋಡಬೇಕೆಂದು
ಪರಮಾತ್ಮನಲ್ಲಿ ಯೋಗವ ಮಾಡಿ ಯೋಗಿಗಳಾಗಿ
ಮುಕ್ತರಾದೆವೆಂಬಿರಿ
ಶಿವ ಶಿವಾ ಆತ್ಮನನು ಪರಮಾತ್ಮನನು ಶ್ರೀಗುರುಸ್ವಾಮಿ ಒಂದು
ಮಾಡಿ
ಇದೇ ನಿನ್ನ ನಿಜತತ್ತ್ವವೆಂದು ಅರುಹ ಹೇಳಿ ತೋರಿಸಿಕೊಟ್ಟಬಳಿಕ
ಇಂತಹ ಗುರುಸ್ವಾಮಿಯ ಆಜ್ಞೆಯ ಮೀರಿ ಲಿಂಗವನರಿಯದೆ
ಲಿಂಗ ಬಾಹಿರರಾದ ದ್ವಿಜರನು ಯೋಗಿಯನು ಸನ್ಯಾಸಿಯನು
ಗುರುವೆಂದು ಭಾವಿಸಬಹುದೇ
ಶಿವ ಶಿವಾ ಅದು ಗುರುದ್ರೋಹ ಪರಶಿವಮೂರ್ತಿಯಾದ
ಗುರುಸ್ವಾಮಿಯು
ಷಡ್ದರ್ಶನಗಳಿಗೂ ಸಮಸ್ತಮತಂಗಳಿಗೂ ಸಮಸ್ತಾಗಮಂಗಳಿಗೆಯೂ
ಶಿವನೊಬ್ಬನೇ ಕರ್ತನೆಂದು ಶಿವದರ್ಶನವೇ ವಿಶೇಷವೆಂದು
ಅಧಿಕವೆಂದು ಹೇಳಿ ತೋರಿಕೊಟ್ಟಬಳಿಕ
ಶೈವವೆಂದು ಶಾಕ್ತೇಯವೆಂದು ವೈಷ್ಣವವೆಂದು ಗಾಣಪತ್ಯವೆಂದು
ಸೌರವೆಂದು ಕಾಪಾಲಿಕವೆಂದು ಇಂತೀ ಷಡ್ದರ್ಶನಂಗಳಿಗೆಯೂ
ಶಿವನೊಬ್ಬನೇ ಕರ್ತ

ಇಂತೀ ಷಡ್ದರ್ಶನಕ್ಕೆ ಶಿವದರ್ಶನವೇ ಅಧಿಕವೆಂದು
ಇಂತಿ ಶಿವದರ್ಶನ ಮಾರ್ಗವಲ್ಲದೆ ಮುಕ್ತಿಯಿಲ್ಲವೆಂದು
ಆ ಪರಶಿವನೆಂಬ ಗುರುಮೂರ್ತಿ ಅರುಹಿ ಕಾಣಿಸಿ ಹೇಳಿ ತೋರಿ ಕೊಟ್ಟಬಳಿಕ

ಅದೆಂತೆಂದಡೆ ಶಿವಧರ್ಮೇ—

> ದರ್ಶನಂ ಷಡ್ವಿಧಂ ಪ್ರೋಕ್ತಂ ಶೈವಂ ಶಾಕ್ತೇಯ ವೈಷ್ಣವೇ ।
> ಗಾಣಾಪತ್ಯಂಚ ಸೌರಂಚ ಕಾಪಾಲಿಕಮಿತಿ ಸ್ಮೃತಮ್ ॥ ಮತ್ತಂ
> ಷಡ್ದರ್ಶನಾದಿ ದೇವೋ ಹಿ ಮಹಾದೇವೋ ನ ಸಂಶಯಃ ।
> ಮಂತ್ರಪೂಜಾದಿ ಭಿನ್ನಾನಾಂ ಮೂಲಂ ಪರಶಿವಸ್ತಥಾ ॥

ಎಂದುದಾಗಿ ಇನ್ನು ವೈಷ್ಣವವೆಂದು ಆತ್ಮಯೋಗವೆಂದು ಶಾಕ್ತಿಕ ವೆಂದು
ವೈದಿಕವೆಂದು ಇಂತೀ ಭ್ರಾಂತಿನ ದರ್ಶನ ಮತಂಗಳನು ಕೇಳಿ
ಅಲ್ಲಿಯ ಧರ್ಮಾಧರ್ಮಂಗಳನು ಕೇಳಿ ಅಲ್ಲಿ ಉಪದೇಶವ ಮಾಡಿಸಿಕೊಳ್ಳಬಹುದೇ
ಶಿವಶಿವಾ ಅದು ಗುರುದ್ರೋಹ ಆ ಶ್ರೀಗುರುವಿನಾಜ್ಞೆಯ ಮೀರದಿರಿ
ಆ ಪರಶಿವಮೂರ್ತಿ ತತ್ತ್ವವೇ ಗುರುಸ್ವಾಮಿಯಾಗಿ ಚನ್ನಾಗಿ ಅರುಹಿಸಿ
ತೋರಿ ಹೇಳಿ ಕೊಟ್ಟನಲ್ಲದೆ ಆ ಗುರುಸ್ವಾಮಿ ಏನು ತಪ್ಪಿ ಹೇಳಿದುದಿಲ್ಲ
ಶ್ರುತಿ "ಏಕೋ ದೇವೋ ನ ದ್ವಿತೀಯಾಯ ತಸ್ಥೇ"
ಎಂದುದಾಗಿ ಶಿವನೊಬ್ಬನೇ ದೈವವೆಂದು ತೋರಿಕೊಟ್ಟ ಶ್ರೀಗುರು
ಶ್ರುತಿ "ಏಕೋ ಧ್ಯೇಯಃ" ಎಂದು
ಶಿವನೊಬ್ಬನನ್ನೇ ಧ್ಯಾನಿಸಿ ಪೂಜಿಸೆಂದು ಹೇಳಿ ತೋರಿಕೊಟ್ಟನು ಶ್ರೀಗುರು
ಶ್ರುತಿ "ನಿರ್ಮಾಲ್ಯಮೇವ ಭಕ್ಷಯಂತಿ" ಎಂದುದಾಗಿ
ಶಿವಪ್ರಸಾದವನೆ ಗ್ರಹಿಸಿಯೆಂದು ಪ್ರಸಾದವ ಕರುಣಿಸಿದ ಶ್ರೀಗುರು
ಇಂತಹ ಶ್ರೀಗುರು ಮರುಳನು ನೀನು ಬುದ್ಧಿವಂತನೇ?
ಕೇಳಾ ನಿಮ್ಮ ಗುರುವ ಮರುಳ ಮಾಡಿದಿರಿ ಅದೆಂತೆಂದಡೆ
ನಿಮ್ಮಿಚ್ಛೆಯಲ್ಲಿಯೇ ಬಂದುದಾಗಿ ಅದಲ್ಲದೆ ಮತ್ತೆ ಕೇಳು
ಪೂವಗದ ಪುರುಷರು ಮರುಳರು ನೀನೊಬ್ಬನೇ ಬುದ್ಧಿವಂತ ಕೇಳೋ

ದೂರ್ವಾಸ ಉಪಮನ್ಯು ದಧೀಚಿ ಜಮದಗ್ನಿ ಮಾರ್ಕಂಡೇಯ
ಪರಾಶರ ಮೊದಲಾದ ಋಷಿಗಳೆಲ್ಲ ಶಿವಾರ್ಚನೆಯಂ ಮಾಡಿದರು
ಬ್ರಹ್ಮ ವಿಷ್ಣು ಮೊದಲಾದವರೆಲ್ಲರೂ ಶಿವಲಿಂಗಾರ್ಚನೆಯ
ಮಾಡಿದರು ಕೇಳಿರೇ
ನೋಡಿರೇ ದೃಷ್ಟವನು ಮತ್ಸ್ಯಕೇಶ್ವರ ಕೂರ್ಮೇಶ್ವರ ವರಾಹೇಶ್ವರ
ನಾರಸಿಂಹೇಶ್ವರ ರಾಮೇಶ್ವರ ಎಂಬ ದಶಾವತಾರಗಳಲ್ಲಿ
ಶಿವಲಿಂಗ ಪ್ರತಿಷ್ಠೆಯಂ ಮಾಡಿ ಶಿವಲಿಂಗಾರ್ಚನೆಯಂ ಮಾಡಿದರು
ಅನೇಕ ವೇದಶಾಸ್ತ್ರಾಗಮ ಪುರಾಣಂಗಳ ಕೇಳಿರೇ ನೋಡಿರೇ

> ಯಂ ಯಂ ಕಾಮಯತೇ ಕಾಮಂ ತಂ ತಂ ಲಿಂಗಾರ್ಚನಾಲ್ಲಭೇತ ।
> ಸ ಲಿಂಗೇನ ವಿನಾ ಸಿದ್ಧಿ ದುರ್ಲಭಂ ಪರಮಂ ಪದಂ ॥ ಮತ್ತಂ
> ಅಸುರಾ ದಾನವಾಶ್ಚೈವ ಪಿಶಾಚೋರಗರಾಕ್ಷಸಾಃ ।
> ಆರಾಧ್ಯ ಪರಮಂ ಲಿಂಗಂ ಪ್ರಾಪುಸ್ತೇ ಸಿದ್ಧಿಮುತ್ತಮಾಮ್ ॥ ಮತ್ತಂ
> ಅಗ್ನಿಹೋತ್ರಶ್ಚವೇದಶ್ಚ ಯಜ್ಞಾಶ್ಚ ಬಹುದಕ್ಷಿಣಾಃ ।
> ಶಿವಲಿಂಗಾರ್ಚನಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ ॥

ಎಂದುದಾಗಿ ಇಂತು ಇಂದ್ರ ಮೊದಲಾದ ದೇವ ಜಾತಿಗಳೆಲ್ಲ
ಶಿವಲಿಂಗಾರ್ಚನೆಯಂ ಮಾಡಿದುದಕ್ಕೆ ದೃಷ್ಟ ನೋಡಿರೇ
ಕಾಶೀ ಕ್ಷೇತ್ರದಲ್ಲಿ ಬ್ರಹ್ಮೇಶ್ವರ ಇಂದ್ರೇಶ್ವರ ಯಕ್ಷಸಿದ್ಧೇಶ್ವರ
ಎಂಬ ಲಿಂಗಂಗಳಂ ಪ್ರತಿಷ್ಠಿಸಿ ಶಿವಲಿಂಗಾರ್ಚನೆಯಂ ಮಾಡಿದರು
ತಾರಕ ರಾವಣಾದಿಗಳೆಲ್ಲ ಶಿವಲಿಂಗಾರ್ಚನೆಯಂ ಮಾಡಿದರು
ಇಂತವರೆಲ್ಲರು ಮರುಳರು ನೀನೊಬ್ಬನೇ ಬುದ್ಧಿವಂತನೇ
ಅದು ಕಾರಣ ಆ ಶ್ರೀಗುರುವಿನಾಜ್ಞೆಯಂ ಮೀರಿ ಕೆಡದಿರಿ ಕೆಡದಿರಿ
ಆ ಮಹಾ ಶ್ರೀಗುರುವಿನ ವಾಕ್ಯವನೇ ನಂಬಿ
ಗುರುಲಿಂಗಜಂಗಮವನೊಂದೇಯೆಂದು ನಿಶ್ಚಯಿಸಿ
ಇದೇ ಅಧಿಕ ಇದರಿಂದ ಬಿಟ್ಟು ಮತ್ತಾವುದೂ ಅಧಿಕವಿಲ್ಲ
ಅಂತು ಗುರುಲಿಂಗ ಜಂಗಮದಲ್ಲಿಯ ಭಕ್ತಿಯೇ ಭಕ್ತಿ
ಅರ್ಚನೆಯೇ ಅರ್ಚನೆ ಆ ಸಂಗವೇ ಶಿವಯೋಗ
ಇದು ಸತ್ಯ ಶಿವನಾಣೆ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

ಈ ಪ್ರಕಾರದಿಂ ಬ್ರಹ್ಮ ವಿಷ್ಣ್ವಾದಿ ದೇವತೆಗಳು ಋಷಿ ಜನಂಗಳೆಲ್ಲರು ಶಿವಲಿಂಗಾರ್ಚನೆಯಂ ಮಾಡಿದರೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಪುವಾ ಪುರಾತನರು. ಆ ಶಿವಲಿಂಗಾರ್ಚನೆಯ ದೆಶೆಯಿಂದ ಮಹದೈಶ್ವರ್ಯ ಪದಂಗಳಂ ಪಡೆದು ದೇವದಾನವ ಮಾನವರೆಲ್ಲರು ಅಹಂ ಬ್ರಹ್ಮವೆಂದು ಕೆಟ್ಟರೆಂಬುದನರುಪಲೋಸ್ಕರ ನುಡಿದ ವಚನಂಗಳು

ಶಿವಧರ್ಮೇ—

ಅಹಂ ಕರ್ತಾಹ್ಯಹಂ ಕರ್ತಾ ಮತ್ತೋ ನಾನ್ಯೋ ಜಗತ್ಪ್ರಭುಃ ।
ಏವಮಾಹ ಹರಿಂ ಬ್ರಹ್ಮಾ ಬ್ರಹ್ಮಾಣಂಚ ತಥಾ ಹರಿಃ ॥ ೧ ॥

ಬ್ರಹ್ಮದೇವನು ನಾನೇ ಕರ್ತನಲ್ಲವೇ ನನಗಿಂತಲೂ ಜಗತ್ತಿಗೆ ಒಡೆಯನು ಮತ್ತೊಬ್ಬನಿಲ್ಲ; ಹೀಗೆಂದು ವಿಷ್ಣುವಿನೊಡನೆ ನುಡಿವನು. ವಿಷ್ಣುವೂ ಬ್ರಹ್ಮನೊಡನೆ ಹಾಗೆಯೇ ನುಡಿದನು.

ಭಾಸ್ಕರ ಸಂಹಿತಾಯಾಂ—

ಯುದ್ಧಸಂಯುತಾವುಭೌ ಚ ದೃಷ್ಟ್ವಾ ಬ್ರಹ್ಮವಿಷ್ಣೂ ರಜಸಾ ಬದ್ಧವೈರೌ
ಮಧ್ಯೇತಯೋರ್ದೃಶ್ಯತೇ ಜಾತವೇದಾಃ ಸ್ಥಾಣೂ ರುದ್ರಸ್ತಿಷ್ಠತಿ ಭುವನಸ್ಯ ಗೋಪ್ತಾ ॥
ದೃಷ್ಟ್ವಾ ಸ್ಥಾಣುಮುಪರಮ್ಯ ಯುದ್ಧಂ ಪ್ರತಸ್ಥತುರ್ದೂರ-ಮನಾದಿದೃಕ್ಷೂ ।
ವರಾಹೋ ವಿಷ್ಣುರ್ನಿಮಮಜ್ಜ ಭೂಮೌ ಬ್ರಹ್ಮೋದಪತದ್ದಿವ ಮಾಶು ಗೃಧ್ರಃ ॥ ೨ ॥

ರಾಜಸದಿಂದ ಕಟ್ಟಲ್ಪಟ್ಟ ವೈರವುಳ್ಳವರಾಗಿ ಯುದ್ಧದಲ್ಲಿ ಕೂಡಿದವರಾದ ಬ್ರಹ್ಮವಿಷ್ಣುಗಳಿಬ್ಬರನ್ನು ನೋಡಿ ಆ ಇಬ್ಬರ ನಡುವೆ ನೋಡನೋಡಲು ಅಗ್ನಿಸ್ವರೂಪವಾಗಿ ಭುವನ ರಕ್ಷಕವಾದ ಶಿವಲಿಂಗವು ಪ್ರಕಟವಾಯಿತು. ಆ ಉರಿಲಿಂಗವ ನೋಡಿ ಯುದ್ಧವಂ ಬಿಟ್ಟು ನೋಡಲಿಚ್ಛಿಸಿ ದೂರವಾಗಿ

ಹೋದರು. ವಿಷ್ಣುವು ವರಾಹವಾಗಿ ಭೂಮಿಯಲ್ಲಿ ಮುಳುಗಿದನು. ಬ್ರಹ್ಮದೇವನು ಆಕಾಶವನ್ನು ಕುರಿತು ಶೀಘ್ರವೇ ಗೃಧ್ರವಾಗಿ ನೆಗೆದನು.

ಸ್ಕಾಂದಪುರಾಣೇ—

ಅನಿರ್ದೇಶ್ಯ ಮನೌಪಮ್ಯಂ ವಿಧಿವಿಷ್ಣು ಪ್ರಮೋಹ ಕೃತ್ ।
ಮಹೋದಾರಂ ಮಹಾಲಿಂಗಂ ಭಾವೇ ಧ್ಯಾಯಂತಿ ಯೋಗಿನಃ ॥ ೩ ॥

ಹೆಸರುಗೊಂಡು ಇದುಯೆಂದು ತೋರಬಾರುದುದಾಗಿ ತನಗೆ ಸರಿಯಾದುದು ಮತ್ತೊಂದು ಇಲ್ಲದುದಾಗಿ ಬ್ರಹ್ಮವಿಷ್ಣುಗಳು ತುದಿಮೊದಲಂ ಕಾಣುವೆ ವೆಂದು ಹಂಸ ವರಾಹ ರೂಪಗಳಿಂದ ಮೇಲಕ್ಕೆಯೂ ಕೆಳಕ್ಕೆಯೂ ಹೋದರೂ ಗೋಚರಿಸದೆ ಅವರ ಅಜ್ಞಾನವಂ ತೊಲಗಿಸಿದುದಾಗಿ ಅತ್ಯಂತಾಧಿಕ ಜ್ಯೋತಿಸ್ತಂಭರೂಪವಾದ ಮಹಾಲಿಂಗವನ್ನು ಶಿವಯೋಗಿಗಳು ಧ್ಯಾನವಂ ಮಾಡುತ್ತಿರುವರು.

ಋಗ್ವೇದೇ—

ಜ್ಯೋತಿರ್ಲಿಂಗಂ ಸ್ವಕೀಯಕರ್ತಾರಂ ಪರಮೇಶ್ವರಮವಿದಿತ್ವಾ
ಅಹಂ ಕರ್ತಾ ಹ್ಯಹಂ ಕರ್ತೇತಿ ವದತೋರ್ಬ್ರಹ್ಮ ವಿಷ್ಣ್ವೋರಸ್ಮದೀಯ
ವಾಚಕ ದೋಷೇಣ
ಪಕ್ಷಿ ಮೃಗತ್ವಂ ಗತಾವಿತಿ ಕರ್ಮವಿಪಾಕಶಾಸ್ತ್ರವಚನಾ ದತ್ಯುತ್ಕಟೈಃ
ಪಾಪ ಪುಣ್ಯೈರಿಹೈವ ಫಲಮಶ್ನುತೇ ಇತ್ಯೇವಂ ದೋಷವಶಾದೇವ
ಉಭೌತದಾನೀಮೇವ ಕೋಲ ಮರಾಳರೂಪ ಜಾತಾವಿತಿ ವದಂತಿ ॥೪॥

ಜ್ಯೋತಿರ್ಲಿಂಗವಾಗಿ ನಮಗೆ ಕರ್ತನಾದ ಶಿವನನ್ನು ಅರಿಯದೆ ನಾನೇ ಕರ್ತನೆಂದು ನುಡಿಯುತ್ತಿದ್ದ ಬ್ರಹ್ಮವಿಷ್ಣುಗಳಿಗೆ ಅಹಂ ಎಂದು ನುಡಿದ ದೋಷದಿಂದ ಹಂಸವರಾಹತನವನ್ನೈದಿದರೆಂದು ಕರ್ಮ ವಿಪಾಕವಂ ಹೇಳುವ ಶಾಸ್ತ್ರವಚನದ ದೆಶೆಯಿಂದ ನಾನೇ ಕರ್ತನೆಂದು ಅತ್ಯುತ್ಕಟಗಳಾದ ಪುಣ್ಯ ಪಾಪಗಳಿಂದ ಈಗಳಂತೆ ಫಲವನ್ನೈದುತ್ತಿಹವೆಂಬ ಗರ್ವ ದೋಷದಿಂದಲೇ ಆಗಳಂತೆ ಹಂಸವರಾಹ ರೂಪವುಳ್ಳವರಾದರೆಂದು ಹೇಳುತ್ತಿಹರು.

ಕೂರ್ಮಪುರಾಣೇ—

ಸಕೃತ್ವಾ ಸುಮಹದ್ಯುದ್ಧಂ ಬ್ರಹ್ಮಣಾ ಕಾಲಭೈರವಃ ।
ಚಕರ್ತ ತಸ್ಯ ವದನಂ ವಿರಿಂಚೇಶ್ಚಾಥ ಪಂಚಮಮ್ ॥ ೫ ॥

ಕಾಲ ಭೈರವನು ಬ್ರಹ್ಮನೊಡನೆ ಮಹಾಯುದ್ಧವಂ ಮಾಡಿ ಅನಂತರವೇ ಬ್ರಹ್ಮನ ಐದನೆಯ ಶಿರಸ್ಸನ್ನು ಚಿವುಟಿದನು.

ಸ್ಕಾಂದಪುರಾಣೇ—

ಹಸ್ತಾಂಗುಷ್ಠನಖೇನಾಶು ವಾಮೇನಾವಜ್ಞಯೈವ ಹಿ ।
ಚಕರ್ತ ತು ಮಹಾಘೋರಂ ಬ್ರಹ್ಮಣಃ ಪಂಚಮಂ ಶಿರಃ ॥ ೬ ॥

ಆ ಕಾಲಭೈರವನು ಎಡದ ಕೈಯ್ಯ ಹೆಬ್ಬೆಟ್ಟಿನ ಉಗುರಿನಿಂದ ಅವಮಾನದೊಡನೆ ಬ್ರಹ್ಮನ ಮಹಾಭಯಂಕರವಾದ ಐದನೆಯ ಶಿರಸ್ಸನ್ನು ಚಿವುಟಿದನು.

## ವಚನಗಳು

೧

ಎಲೆ ಸಿರೀಶ್ವರವಾದಿಗಳಿರಾ ನೀವು ಕೇಳಿರೇ
ನಿಮ್ಮ ನಿಟಿಲತಟದಲ್ಲಿ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಲಿಖಿತವ್ವ
ಬರೆದವರಾರು
ಹೇಳಿರೇ ನೀವು ನೀವೇ ಬ್ರಹ್ಮವು ಬೇರೆ ಈಶ್ವರನಿಲ್ಲೆಂದು ನುಡಿವಿರಿ
ತಪಸ್ಸು ತನ್ನಂತೆ ಊಟ ಮನದಿಚ್ಛೆ ಎಂಬ ಗಾದೆಯ ಮಾತು
ನಿಮಗಾಯಿತ್ತು
ಅನ್ನವನುಂಡು ವ್ಯಸನಕ್ಕೆ ಹರಿದು ವಿಷಯಂಗಳೆಂಬ ಹಿಡಿಮಲಕ್ಕೆ ಸಿಕ್ಕಿ
ಪಂಚೇಂದ್ರಿಯಗಳೆಂಬ ನಾಯಿಗಳಿಚ್ಛೆಗೆ ಹರಿದು ನಾಯಾಗಿ ಬಗುಳಿ
ನಾಯಡೋಣಿಯಲುಂಡು ನಾಯಿಸಾವು ಸಾವ ಅದ್ವೈತಿಗಳಿರಾ
ನಿಮಗೇಕೋ ಬೊಮ್ಮದ ಮಾತು
ಬ್ರಹ್ಮ ವಿಷ್ಣ್ವಾದಿಗಳು ಬ್ರಹ್ಮೋಹಮೆಂದು-
ಕೆಮ್ಮನೆ ಕೆಟ್ಟು ಹದ್ದು ಹೆಬ್ಬಂದಿಗಳಾದುದನರಿಯಿರೇ

ಹಮ್ಮಿನಿಂದ ಸನತ್ಕುಮಾರ ಒಂಟೆಯಾದುದನರಿಯಿರೇ
ಕರ್ತನು ಭರ್ತನು ಹರ್ತನು ಶಿವನಲ್ಲದೆ—
ಬೇರೆ ಕಾವಲ್ಲಿ ಕೊಲುವಲ್ಲಿ ಮತ್ತೊಬ್ಬರುಳ್ಳರೆ ಹೇಳಿರೇ

ಅದೆಂತೆಂದಡೆ—

> ತ್ವಂ ವಿಶ್ವಕರ್ತಾ ತವ ನಾಸ್ತಿ ಕರ್ತಾ ತ್ವಂ ವಿಶ್ವಭರ್ತಾ ತವ ನಾಸ್ತಿ ಭರ್ತಾ।
> ತ್ವಂ ವಿಶ್ವಹರ್ತಾ ತವ ನಾಸ್ತಿ ಹರ್ತಾ ತ್ವಂ ವಿಶ್ವನಾಥ ಸ್ತವ ನಾಸ್ತಿ ನಾಥಃ॥
> "ಅಸತ್ಯಮಪ್ರತಿಷ್ಠಂ ಚ ಜಗದಾಹುರನೀಶ್ವರಮ್" ಎಂದುದಾಗಿ

ಶಿವನೇ ನಿಮ್ಮನಿಲ್ಲೆಂದು ಬೊಮ್ಮ ತಾನೆಂಬ ಹಮ್ಮಿನ ಅದ್ವೈತಿಗಳ ಹಿಡಿದು
ಕಾಲನ ಕೈಯ್ಯಲ್ಲಿ ಕೆಡಹಿ ಬಾಯಲ್ಲಿ ಹುಡಿಯ ಹೊಯಿಸಿ
ನರಕಾಗ್ನಿಯಲ್ಲಿ ಅಕ್ಷಯ ಕಾಲವಿರಿಸದೆ ಮಾಬ್ಬನೇ
ನಮ್ಮ ಬಸವಪ್ರಿಯ ~~ಕೂಡಲ ಚೆನ್ನಸಂಗಮದೇವಾ~~

೨

ಕಾಮದ ಕಳವಳವಲ್ಲಿ ಹುಟ್ಟಿ ಸಂಸಾರವ ತೊಟ್ಟು-
ಲಿಂಗಮುಖವನರಿಯುವವರೆಲ್ಲರೂ ಅಂತಿರಲಂತಿರಲಿ
ಬ್ರಹ್ಮಪಾಶವ ಕೊರಳಲ್ಲಿರಿಸಿಕೊಂಡು-
ವಿಷಯಾದಿಗಳಂ ಕೊಂಡವರಂತಿರಲಂತಿರಲಿ
ಪಂಚವೇದಶಾಸ್ತ್ರವನೋದಿ
ಲಿಂಗವುಂಟು ಇಲ್ಲವೆಂಬ ಶ್ವಾನಜ್ಞಾನರಂತಿರಲಂತಿರಲಿ
ತನುವ ಹೊತ್ತು ತೊಳಲುವ-
ಕಾಲವಂಚಕ ಯೋಗಿಗಳೆಲ್ಲಾ ಅಂತಿರಲಂತಿರಲಿ
ಪಂಚ ಮಹಾಶೈವರು ಭ್ರಷ್ಟರಾಗಿ ಹೋದರು
ಇವರನೆಂತು ಸರಿಯೆಂಬೆನಯ್ಯಾ ಲಿಂಗವಂತಂಗೆ
ಅದ್ವೈತಿಗಳೆಲ್ಲ ಲಿಂಗಾರಾಧನೆ ಹುಸಿಯೆಂದು-
ಬುದ್ಧಿತಪ್ಪಿ ನುಡಿದು ಗಮ್ಮನೆ ಕೆಟ್ಟುಹೋದರು

"ವ್ಯೃತಸ್ಯ ಭಾವನಂ ನಾಸ್ತಿ ದೃಶ್ಯಮೇವ ವಿನಶ್ಯತಿ ।
ಅವರ್ಣಮಕ್ಷಯಂ ಬ್ರಹ್ಮ ಕಥಂ ಧ್ಯಾಯಂತಿ ಯೋಗಿನಃ ॥" ಎಂದುದಾಗಿ
ಪರಬ್ರಹ್ಮವಾಸೆಂದಡೆ ಶಿರವ ದಂಡನಕೊಂಡರು ಕೇಳಿರಂಣಾ
ಬ್ರಹ್ಮಾದಿಗಳು ಲಿಂಗಕ್ಕೆ ದೂರವಾಗಿ ಹೋದರು
ಆ ಹಮ್ಮಿಲ್ಲದ ಕಾರಣ ಸಕಳೇಶ್ವರಾ ನಿಮ್ಮ ಶರಣರು
ಜಗದ್ವಂದ್ಯರಾದರು

೩

ಸಾಕಾರವಿಡಿದು ಪರಬ್ರಹ್ಮವೆಂದೆಂಬಿರಿ ಪರಬ್ರಹ್ಮವ ನುಡಿವಿರಿ
ಪರಬ್ರಹ್ಮವನರಿದೆವೆಂಬಿರಿ ಪರಬ್ರಹ್ಮವನರಿಯದೆ ನುಡಿವಿರಿ
ಬ್ರಹ್ಮನೊಡಕು ಅರಿದು ಕಾಣಿರಂಣಾ ಈ ಬ್ರಹ್ಮದೊಡಕಿಂದ
ಮುನ್ನೊಮ್ಮೆ ದೇವಜಾತಿಗಳು ಋಷಿ ಜನಂಗಳು-
ಬ್ರಹ್ಮನನ್ನು ಪರಬ್ರಹ್ಮವ ಬೆಸಗೊಳಲು
ಅಹಂ ಬ್ರಹ್ಮವೆಂದು ತಲೆಯ ಹೋಗಾಡಿಸಿಕೊಂಡ
ಸರ್ವಪುರಾಣ ಪ್ರಸಿದ್ಧ ಇನ್ನೂ ತಲೆಯ ನೋಟು ಕಾಣಬರುತ್ತಿದೆ
ಬ್ರಹ್ಮನ ಶಿರ ಆ ಪರಬ್ರಹ್ಮನ ಹಸ್ತದಲ್ಲಿದೆ
ನಾನೇ ಬ್ರಹ್ಮವೆಂದು ಸನತ್ಕುಮಾರ ಒಂಟೆಯಾದ
ಸ್ಕಂದ ಪುರಾಣ ಪ್ರಸಿದ್ಧ ಅವರಂತೆ ನೀವಾಗದೆ ಪರಬ್ರಹ್ಮದ
ನೆಲೆಯ ಕೇಳಿರಂಣಾ
ಲಿಂಗವೇ ಪರಬ್ರಹ್ಮವೆಂದು ಅಥರ್ವಣವೇದ ನುಡಿಯುತ್ತಿದೆ

ಶ್ರುತಿ—

"ಓಂ ಸ ಏಕೋ ರುದ್ರಃ ಸ ಈಶಾನಸ್ಸ ಭಗವಾನ್ ಸ ಮಹೇಶ್ವರಃ ಸ
ಮಹಾದೇವ ಇತಿ"

ಎಂದುದಾಗಿ ಮತ್ತೆಯೂ ಈ ಪ್ರಕಾರದಲ್ಲಿ ಯಜುರ್ವೇದ—

"ಋತಂ ಸತ್ಯಂ ಪರಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮಃ ॥

ಮತ್ತೆಯೂ ಈ ಪ್ರಕಾರದಲ್ಲಿ ಶಿವ ಸಂಕಲ್ಪೋಪನಿಷತ್ತು-

ಋತಂ ಸತ್ಯಂ ಪರಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ತಮೀಶಾನಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥

ಎಂದುದಾಗಿ ಲಿಂಗವೇ ಪರಬ್ರಹ್ಮ
ಮುನ್ನೊಮ್ಮೆ ಹರಿಬ್ರಹ್ಮರ ಸಂವಾದದಲ್ಲಿ ಉರಿಲಿಂಗ ಉಪ್ಭವವಾದಲ್ಲಿ
ಹರಿಬ್ರಹ್ಮಾದಿಗಳು ಸ್ತೋತ್ರವ ಮಾಡಿದರು

ಲೈಂಗೇ—

ಜ್ವಾಲಾಮಾಲಾವೃತಾಂಗಾಯ ಜ್ವಲನಸ್ತಂಭರೂಪಿಣೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥

ಎಂದುದಾಗಿ ಲಿಂಗವೇ ಪರಬ್ರಹ್ಮ

ಶಿವನೇ ಪರಬ್ರಹ್ಮವೆಂದು ಮತ್ತು ಯಜುರ್ವೇದದಲ್ಲಿ—

ಓಂ ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ ।
ಬ್ರಹ್ಮಾಧಿಪತಿ ಬ್ರ್ರಹ್ಮಣೋಽಧಿಪತಿಬ್ರ್ರಹ್ಮಾ ಶಿವೋಮೇಽಸ್ತು
ಸದಾಶಿವೋಂ ॥

ಮತ್ತಂ ಆದಿತ್ಯ ಪುರಾಣದಲ್ಲಿ

ಪರಬ್ರಹ್ಮ ಸ ಈಶಾನ ಏಕೋರುದ್ರಃ ಸ ಏವ ಚ ।
ಭಗವಾನ್ಮಹೇಶ್ವರಃ ಸಾಕ್ಷಾನ್ಮಹಾದೇವೋ ನ ಸಂಶಯಃ ॥
ಯಸ್ಮಾಂತಸ್ಥಾನಿ ಭೂತಾನಿ ಬ್ರಹ್ಮಾದ್ಯಾ ದೇವತಾಸ್ತಥಾ ।
ಭಜಂತಿ ಶರಣಂ ರುದ್ರಂ ಕಾಲೇ ಕಾಲೇ ವಿಶೇಷತಃ ॥

ಎಂದುದಾಗಿ ಲಿಂಗವೇ ಪರಬ್ರಹ್ಮ ಮತ್ತಂ ಕೂರ್ಮ ಪುರಾಣೇ—

ಅವ್ಯಕ್ತಂ ಕಾರಣಂ ಪ್ರಾಹುರಾನಂದಂ ಜ್ಯೋತಿರಕ್ಷರಮ್ ।
ಅಹಮೇವ ಪರಬ್ರಹ್ಮ ಮತ್ತೋ ಹ್ಯನ್ಯಂ ನ ವಿದ್ಯತೇ ॥
ಏತಸ್ಮಾದ್ವಿಶ್ವರೂಪತ್ವಂ ನಿಶ್ಚಿತಂ ಪರಮಾತ್ಮನಃ ।
ಏಕತ್ವೇಚ ಪೃಥಕ್ತ್ವೇ ಚ ಪ್ರೋಕ್ತಮೇವಮನಾಮಯಮ್ ॥
ಅಹಂ ತತ್ಪರಮಂ ಬ್ರಹ್ಮ ಪರಮಾತ್ಮಾ ಸನಾತನಃ ।

ಎಂದುದಾಗಿ ಲಿಂಗವೇ ಪರಬ್ರಹ್ಮ ಮತ್ತಂ ಮಾನವ ಪುರಾಣೇ—

ಋತಂ ಸತ್ಯಂ ಪರಬ್ರಹ್ಮ ಪುರುಷಂ ಸೋಮಮೀಶ್ವರಂ ।
ಊರ್ಧ್ವರೇತಂ ಸಮುತ್ಪತ್ತಿ—ಸ್ಥಿತಿ ಸಂಹಾರಕಾರಿಣಮ್ ॥
ವಿಶ್ವರೂಪಂ ವಿರೂಪಾಕ್ಷಂ ಚಂದ್ರಮೌಲಿಂ ಘೃಣಾನಿಧಿಮ್ ।
ಹಿರಣ್ಯಬಾಹುಮುದ್ವಂದ್ವಂ ಹಿರಣ್ಯಪತಿಮೀಶ್ವರಮ್ ॥
ಅಂಬಿಕಾಯಾಃ ಪತಿಂ ಸಾಕ್ಷಾದುಮಾಯಾಃ ಪತಿಮಕ್ರಿಯಮ್ ।
ಪರತತ್ವಸಮಾಖ್ಯಾತಂ ಶಿವಂ ಧ್ಯಾಯಂತಿ ಸಂತತಮ್ ॥

ಎಂದುದಾಗಿ ಲಿಂಗವೇ ಪರಬ್ರಹ್ಮ ಮತ್ತಂ ಯಜುರ್ವೇದೇ—

" ವಿಶ್ವತಶ್ಚಕ್ಷುರುತದೇವ ನಿಕವಿವ " ಎಂದುದಾಗಿ

ಬಹಳ ಬಹಳ ಚಕ್ಷು ಬಹಳ ಬಹಳ ಮುಖನು ಬಹಳ ಬಹಳ ಪಾದನು

" ಅಣೋರಣೀಯಾನ್ ಮಹತೋ ಮಹೀಯಾನ್ " ಎಂದುದಾಗಿ

ಇಂಥ ಬಹಳವುಳ್ಳ ಲಿಂಗವೇ ಪರಬ್ರಹ್ಮ ಕಾಣಿರಂಣಾ

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಹ ।
ನಾದ ಬಿಂದು ಕಲಾತೀತಂ ಗುರುಣಾ ಲಿಂಗಮುದ್ಭವಂ ॥

ಎಂದುದಾಗಿ ಮನವಾಕ್ಕು ನಾದಬಿಂದು ಕಳೆಗತೀತವಾದ
ಮಹಾಲಿಂಗವನು ಶ್ರೀಗುರು ನಿರೂಪಿಸಿಕೊಟ್ಟನಾಗಿ
ಈ ಲಿಂಗವೇ ಪರಬ್ರಹ್ಮ ಕಾಣಿರಣ್ಣಾ
ಇದುಕಾರಣ ಲಿಂಗವೇ ಪರಬ್ರಹ್ಮವೆಂದು ಅರಿದು
ಧ್ಯಾನಿಸಿ ಪೂಜಿಸಿ ಮಹದಾನಂದ ಮುಕ್ತಿಯನೈದಿದರು—
ಬ್ರಹ್ಮ ವಿಷ್ಣು ಮುಖ್ಯವಾದ ದೇವಜಾತಿ ಋಷಿಜನಂಗಳು
ಇದು ಪುರಾಣಪ್ರಸಿದ್ಧ, ಇನ್ನು ಕಲಿಯುಗದಲ್ಲಿ ದೃಷ್ಟವೇ ನೋಡಿರೇ—
ಬಸವರಾಜದೇವರು ಮುಖ್ಯವಾದ ಅಸಂಖ್ಯಾತ ಪುರಾತನರು
ಇದನರಿದು ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರ ಲಿಂಗವೇ—
ಸಾಕಾರ ನಿರಾಕಾರ ಸಂಸಿದ್ಧವೆಂದರಿದು
ಧ್ಯಾನಿಸಿ ಪೂಜಿಸಿ ಮಹಾನಂದ ಮುಕ್ತಿಯನೈದಿದರು ಕಾಣಿರಂಣಾ

## ಶೂನ್ಯಸ್ಥಲ ೨೩

ಈ ಪ್ರಕಾರದಿಂದ ಬ್ರಹ್ಮವಿಷ್ಣ್ವಾದಿ ದೇವತೆಗಳು ಋಷಿಜನಂಗಳು ತಾವೇ ಬ್ರಹ್ಮರೆಂದು ಶಿವನಿಂ ಶಿಕ್ಷೆಯೊಳಗಾದರೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದವರ್ಮಹಾಪುರಾತನರು. ಇಂತಹ ಪರಬ್ರಹ್ಮದೊಡನೆ ದೇವ ದಾನವ ಮಾನವರು ಸರಿಯಲ್ಲವೆಂಬುದನರುಪಲೋಸ್ಕರ ನುಡಿವ ವಚನಂಗಳು.

ಉಪನಿಷದಿ——

ಅಲಕ್ಷ್ಯಮದ್ವಯಂ ಶೂನ್ಯಮಮೂರ್ತಂ ಪರಮವ್ಯಯಮ್ ।
ಅನಾಮಂ ಚಾಕುಲಂ ಶುದ್ಧಮನಾದ್ಯಂ ಶಿವಮುಚ್ಯತೇ ॥ ೧ ॥

ಕುರುಹಿಲ್ಲದಿದ್ದ ಎಡೆಯಿಲ್ಲದಿದ್ದ ಶೂನ್ಯವಾಗಿದ್ದ ಮೂರ್ತಿಯಿಲ್ಲದಿದ್ದ ಪರತತ್ವವೆನಿಸಿದ್ದ ಕೇಡಿಲ್ಲದಿದ್ದ ನಾಮವಿಲ್ಲದಿದ್ದ ಕುಲವಿಲ್ಲದಿದ್ದ ಶುದ್ಧವಾಗಿದ್ದ ಅನಾದಿಯೆನಿಸಿದ ವಸ್ತುವು ಆವುದಾನೊಂದುಂಟೋ ಅದೀಗ ಶಿವತತ್ವವೆಂದು ಹೇಳಿಸಿಕೊಳ್ಳಲ್ಪಡುವದು.

ಶಿವಧರ್ಮಪುರಾಣೇ——

ನ ಬ್ರಹ್ಮಾದ್ಯಾ ನ ವಿಷ್ಣುಶ್ಚ ರುದ್ರೋ ನೋ ರವಿರ್ವಿಧುಃ ।
ನಾಗ್ನಿರ್ವ್ಯೋಮಸಮೀರಾಂಬು ನ ಭೂಮಿರ್ನಗ್ರಹೋ ದಿಶಃ ॥ ೨ ॥

ಅಂತಹ ಶಿವತತ್ವಕ್ಕಿಂತ ಮುನ್ನ ಬ್ರಹ್ಮಾದಿಗಳೂ ವಿಷ್ಣು ರುದ್ರ ಸೂರ್ಯ ಚಂದ್ರ ಅಗ್ನಿ ಆಕಾಶ ವಾಯು ಉದಕ ಭೂಮಿ ನವಗ್ರಹ ದಿಕ್ಕುಗಳು ಏನೂ ಇದ್ದುದಿಲ್ಲ.

ಶಿವೋಽಸ್ತಿ ಸಚ್ಚಿದಾನಂದ ಪರಿಪೂರ್ಣೋ ನಿರಂಜನಃ
ಅಕಾರಣಮಕಾರ್ಯಂ ಚ ಮನೋವಾಚಾಮಗೋಚರಃ

ಸಚ್ಚಿದಾನಂದವಾದ ಪರಿಪೂರ್ಣವೆನಿಸಿದ ನಿರಂಜನನಾದ ಕಾರ್ಯಕಾರಣವಿಲ್ಲದ ಮನೋವಾಕ್ಕುಗಳಿಗೆ ಗೋಚರಿಸದಿದ್ದ ಶಿವತತ್ವವೊಂದೇ ಇದ್ದಿತು.

ಅನಿರ್ವಾಚ್ಯಂ ಪದಂ ವಕ್ತುಮಶಕ್ಯಂ ತತ್ಸುರೈರಪಿ ।
ಸ್ವಾತ್ಮಪ್ರಕಾಶರೂಪೇಣ ಕಿಂ ಶಾಸ್ತ್ರೇಣ ಪ್ರಕಾಶ್ಯತೇ ॥ ೪ ॥

ಅನಿರ್ವಾಚ್ಯವಾದ ಶಿವತತ್ವವಾದ ಪದವನು ಹೇಳುವುದೆಂದರೆ ಸಕಲ ದೇವತೆಗಳಿಂದಾಗದು. ಅದು ತನ್ನ ಸ್ವಭಾವ ಸ್ವಾನುಭಾವದ ಪ್ರಕಾಶದಿಂದಲ್ಲದೆ ಶಾಸ್ತ್ರಜಾಲದಿಂದ ಕಾಣಿಸದು.

> ತಸ್ಮಿನ್ನೇಕತ್ರ ವಿಶ್ರಾಂತಿಂ ಜಗದ್ಗಚ್ಛತಿ ಶೂನ್ಯತಾಂ ।
> ನ ಶೂನ್ಯಂ ಯಸ್ಸ್ವತಸ್ತಸ್ಯ ಮಹಃ ಶೂನ್ಯಮನುತ್ತಮಮ್ ॥ ೫ ॥

ಶಿವತತ್ವವೊಂದರಲ್ಲಿಯೇ ವಿಶ್ರಾಂತಿಯಿಂದ ಜಗತ್ತು ಶೂನ್ಯತೆಯನ್ನೈದುವದು. ಆವುದಾನೊಂದು ಶೂನ್ಯತ್ವವೆಂಬುದು ತಾನು ಸ್ವತಂತ್ರವಲ್ಲ. ಮಹಾ ಶೂನ್ಯವೆಂದು ಹೇಳಲ್ಪಡುತ್ತಿಹ ಆ ಶಿವತತ್ವವು ಸ್ವತಃ ಶೂನ್ಯತೆಯನ್ನೈದದಿಹುದು.

> ಆದಿ ಮಧ್ಯಾಂತಶೂನ್ಯಂ ಚ ವ್ಯೋಮಾವ್ಯೋಮ ವಿವರ್ಜಿತಮ್ ।
> ಜ್ಞಾನಧ್ಯಾನ ದ್ವಯೈರ್ಹೀನಂ ಶೂನ್ಯಲಿಂಗಮನಾಶ್ರಯಮ್ ॥ ೬ ॥

ಮೊದಲು ನಡುತುದಿಯೆಂಬುದಿಲ್ಲದ ಆಕಾಶ ಅನಾಕಾಶತ್ವವಿಲ್ಲದ ಜ್ಞಾನಧ್ಯಾನವೆಂಬ ದ್ವಂದ್ವಗಳಿಲ್ಲದ ಆವ ಆಶ್ರಯವೂ ಇಲ್ಲದ ಶೂನ್ಯವೆಂಬ ನಾಮಮಾತ್ರವಾದ ಲಿಂಗವೊಂದೇ ಇಹುದೆಂಬುದೀಗ ಆಗಮದ ವಾಕ್ಯ.

> ಅಂತಃ ಶೂನ್ಯಂ ಬಹಿಃಶೂನ್ಯಂ ಶೂನ್ಯ ಶೂನ್ಯಾ ದಶಾದಿಶಃ ।
> ಸರ್ವಶೂನ್ಯಂ ನಿರಾಕಾರಂ ನಿರ್ದ್ವಂದಂ ಪರಮಂ ಪದಮ್ ॥ ೭ ॥

ಒಳಗೂ ಇಲ್ಲದ ಹೊರಗೂ ಇಲ್ಲದ ಹತ್ತು ದಿಕ್ಕುಗಳಲ್ಲಿಯೂ ಇಲ್ಲದ ಆವ ಠಾವಿನಲ್ಲಿಯು ಇಲ್ಲದ ಎರಡಿಲ್ಲದ ಪರಮ ಪದವೆಂಬ ಕೇವಲ ನಾಮ ವಾಚ್ಯವಾದ ಶಿವತತ್ವವುಂಟೆಂಬುದು ಶಿವಾಗಮದ ಪ್ರಮಾಣವು.

> ಅನಾದಿ ಸಿದ್ಧ ಸಂಸ್ಕಾರಂ ಕರ್ತೃ ಕರ್ಮ ವಿವರ್ಜಿತಮ್ ।
> ಸ್ವಯಮೇವ ಭವೇದ್ದೇಹಿ ಸ್ವಯಮೇವ ವಿಲೀಯತೇ ॥ ೮ ॥

ಕರ್ತೃ ಕರ್ಮಗಳೇನೂಯಿಲ್ಲದ ಅನಾದಿ ಸಿದ್ಧ ಸಂಸ್ಕಾರವೆಂಬ ಸ್ವಭಾವವಾದ ವಸ್ತುವು ತಾನೇ ದೇಹದ ರೂಪವಿಡಿದು ತಾನೇ ತನ್ನಲ್ಲಿ ಎರಕವಾಗುತ್ತಿಹುದು.

## ವಚನಗಳು

೧

ಪರವಿಲ್ಲದಂದು ಪರಬ್ರಹ್ಮವಿಲ್ಲದಂದು
ಆದಿಯಿಲ್ಲದಂದು ಅನಾದಿಯಿಲ್ಲದಂದು
ಸದಾಶಿವನಿಲ್ಲದಂದು ಶಿವನಿಲ್ಲದಂದು
ಏನೆಂಬುದೇನೋ ತಾನಿಲ್ಲದಂದು
ಕೂಡಲ ಚೆನ್ನಸಂಗಮಯ್ಯ ತಾನು ತಾನೆನ್ನದಿರ್ದನೆಂದು

೨

ಆದಿ ಅನಾದಿಯಿಲ್ಲದಂದು
ಹಮ್ಮು ಬಿಮ್ಮುಗಳಿಲ್ಲದಂದು
ಸುರಾಳ ನಿರಾಳವಿಲ್ಲದಂದು
ಶೂನ್ಯ ನಿಃಶೂನ್ಯವಿಲ್ಲದಂದು
ಸಚರಾಚರವೆಲ್ಲ ರಚನೆಗೆ ಬಾರದಂದು
ಗುಹೇಶ್ವರನೊಬ್ಬನೇ ಇದ್ದೆಯಲ್ಲ ಇಲ್ಲದಂತೆ

೩

ಆದಿ ಅನಾದಿಯಿಲ್ಲದಂದು
ಶೂನ್ಯ ಮಹಾಶೂನ್ಯವಿಲ್ಲದಂದು
ಸಾಧ್ಯಾಸಾಧ್ಯವಿಲ್ಲದಂದು
ರೂಪು ನಿರೂಪು ಇಲ್ಲದಂದು
ಸ್ಥೂಲ ಸೂಕ್ಷ್ಮವಿಲ್ಲದಂದು
ಸಾಕಾರ ನಿರಾಕಾರವೆಂಬ ವಾಕ್ಕು ಹುಟ್ಟದಂದು
ದ್ವೈತಾದ್ವೈತವಿಲ್ಲದಂದು
ಶಂಕರ ಶಶಿಧರ ಈಶ್ವರರೆಂಬ ಗಣಾಧೀಶ್ವರರಿಲ್ಲದಂದು
ವರ್ತನ ನಿರ್ವರ್ತನವಿಲ್ಲದಂದು
ಉಮೆಯ ಕಲ್ಯಾಣವಿಲ್ಲದಂದು

ಇವರಾರೊಬ್ಬರ ನಾಮಸೀಮೆಯಿಲ್ಲದಂದು
ನೀನು ಉಲುಹಡಗಿದ್ದೆಯಲ್ಲಾ ಕಲಿದೇವಯ್ಯಾ

೪

ಶೂನ್ಯ ಹುಟ್ಟದಂದು ನಿಶ್ಶೂನ್ಯವಿಲ್ಲದಂದು
ಬ್ರಹ್ಮ ವಿಷ್ಣು ಮಹೇಶ್ವರರಿಲ್ಲದಂದು
ಹದಿನಾಲ್ಕು ಭುವನದಿಗ್ವಲಯವಿಲ್ಲದಂದು
ಕೂಡಲಚೆನ್ನಸಂಗಯ್ಯನೆಂಬ ಹೆಸರಿಲ್ಲದಿದ್ದನಂದು

೫

ಬ್ರಹ್ಮ ತಲೆದೋರದಂದು ವಿಷ್ಣು ಉದಯಿಸದಂದು
ರುದ್ರನವತರಿಸದಂದು ಈರೇಳು ಭುವನ ನೆಲೆಗೊಳ್ಳದಂದು
ಸಪ್ತ ಸಾಗರಂಗಳು ಉಕ್ಕಿ ಹರಿಯದಂದು ಅಮೃತ ಮಥನವಿಲ್ಲದಂದು
ಮೂವತ್ತುಮೂರುಕೋಟಿ ದೇವರ್ಕಳಿಲ್ಲದಂದು ಮುನ್ನಾರು ಬಲ್ಲರು
ಅದೇ ಮೂಲಸ್ವಾಮಿ ಕೂಡಲ ಚೆನ್ನಸಂಗಯ್ಯ ಹಮ್ಮಿಲ್ಲದಿದ್ದನಂದು

೬

ಆದಿ ಸ್ವಯಂಭುವಿಲ್ಲದ ಮುನ್ನ
ಸಂಗ ನಿಃಸಂಗವಿಲ್ಲದ ಮುನ್ನ
ನಕ್ಷತ್ರ ಗ್ರುಹಗಳಿಲ್ಲದ ಮುನ್ನ
ಯೋಗ ಕರಣಗಳಿಲ್ಲದ ಮುನ್ನ
ಖೇಚರ ಭೂಚರರಿಲ್ಲದ ಮುನ್ನ
ಆರು ಆರೂ ಇಲ್ಲದ ಮುನ್ನ
ಆಕಾಶಮಾರುತವಿಲ್ಲದ ಮುನ್ನ
ಅಂಬುಧಿ ಕಮಠವಿಲ್ಲದ ಮುನ್ನ
ಹರಿ ಬ್ರಹ್ಮಾದಿಗಳಾರ ನಿಲವಿಲ್ಲದ ಮುನ್ನ
ಹಿಮಕರ ದಿನಕರರ ಸುಳುಹಿಲ್ಲದ ಮುನ್ನ
ಹಿಂದಿಲ್ಲ ಮುಂದಿಲ್ಲ ಒಂದೂಯಿಲ್ಲದ ಮುನ್ನ
ಗುಹೇಶ್ವರ' ತಾನಿದ್ದ ತನ್ನ ತಾನರಿಯದಂತೆ

೭

ಬ್ರಹ್ಮಾ ಬ್ರಹ್ಮವಿಲ್ಲದಂದು ವಿಷ್ಣು ಮಾಯೆ ಜಗವಿಲ್ಲದಂದು
ಸೃಷ್ಟಿಯಿಲ್ಲದಂದು ಕಾಳಿಂಗ ಕರಿಕಂಠರಿಲ್ಲದಂದು
ಉಮೆಯ ಕಲ್ಯಾಣವಿಲ್ಲದಂದು
ದ್ವಾದಶಾದಿತ್ಯರಿಲ್ಲದಂದು ನಂದಿಕೇಶ್ವರನಿಲ್ಲದಂದು
ಲಿಂಗಸ್ಥಲ ಜಂಗಮಸ್ಥಲವಿಲ್ಲದಂದು
ಪ್ರಸಾದಸ್ಥಲವಿಲ್ಲದಂದು ದೇಹಾಹಂಕಾರಪ್ರಕೃತಿಯಿಲ್ಲದಂದು
ಕೂಡಲ ಚೆನ್ನಸಂಗಯ್ಯಾ ತನ್ನ ತಾನೆ ಇದ್ದನಂದು

೮

ಅಸುರರ ಮಾಲೆಗಳಿಲ್ಲ ತ್ರಿಶೂಲ ಡಮರುಗವಿಲ್ಲ
ಬ್ರಹ್ಮಕಪಾಲವಿಲ್ಲ ಭಸ್ಮಭೂಷಣನಲ್ಲ
ವೃಷಭವಾಹನನಲ್ಲ ಋಷಿಯರುಗಳೊಡನಿದ್ದಾತನಲ್ಲ
ಎಸಗುವ ಸಂಸಾರದ ಕುರುಹಿಲ್ಲದಾತಂಗೆ
ಹೆಸರಾವುದಿಲ್ಲೆಂದನಂಬಿಗರ ಚೌಡಯ್ಯ

## ಸ್ವಯಂಭುಲಿಂಗೆ ಉಮಾಪತಿಸ್ಥಲ ೨೪

ಈ ಪ್ರಕಾರದಿಂ ಹದಿನಾಲ್ಕು ಲೋಕಂಗಳು ಬ್ರಹ್ಮಾದಿ ದೇವತೆಗಳು ಇಲ್ಲ. ಶಿವನೊಬ್ಬನೇ ಇದ್ದನೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು. ಇಂತಹ ಶಿವನು ತನ್ನಯ ಲೀಲೆಯಿಂದ ಜಗತ್ತಂ ಸೃಷ್ಟಿಸ ಬೇಕಾಗಿ ಸಾಕಾರ ಮೂರ್ತಿಯಾದನೆಂಬುದನರುಪಲೋಸ್ಕರ ನುಡಿದ ವಚನಂಗಳು

ಲೈಂಗೇ—

ಅರೂಪಂ ನಿಷ್ಕಲಂ ಬ್ರಹ್ಮ ಭಾವಾತೀತಂ ನಿರಂಜನಮ್।
ಶಬ್ದಾದಿ ವಿಷಯಾತೀತಂ ಮೂಲಲಿಂಗಮಿಹೋಚ್ಯತೇ ॥ ೧ ॥

ರೂಪಿಲ್ಲದಿದ್ದ ಕುಂದಿಲ್ಲದಿದ್ದ ನಿಷ್ಕಲವಾದ ಬ್ರಹ್ಮಾಭಿಧಾನವುಳ್ಳ ಭಾವಕ್ಕತೀತವಾಗಿದ್ದ ನಿರಂಜನವಾಗಿದ್ದ ಶಬ್ದ ಮೊದಲಾದ ವಿಷಯಂ ಗಳಿಗೆ ಅತೀತವಾದ ಆವುದಾನೊಂದು ವಸ್ತುವುಂಟೋ ಅದು ಮೂಲ ಲಿಂಗವೆಂದು ಹೇಳಲ್ಪಟ್ಟುದು.

ಮೂಲಮಂತ್ರಸ್ವರೂಪಾಯ ಮೂಲಮಂತ್ರಾತ್ಮರೂಪಿಣೇ ।
ಮೂಲಪ್ರಕೃತಿಸಂಜ್ಞಾಯ ಮೂಲಸ್ತಂಭಾಯ ಶಂಭವೇ ॥ ೨ ॥

ಮೂಲಮಂತ್ರ ಸ್ವರೂಪನಾದ ಶಿವನಿಗೋಸ್ಕರ ಮೂಲಮಂತ್ರಾತ್ಮಸ್ವರೂಪ ನಾಗಿದ್ದಾತಂಗೋಸ್ಕರ ಮೂಲಪ್ರಕೃತಿಯೆಂಬ ಸಂಜ್ಞೆಯುಳ್ಳಾತಂಗೋಸ್ಕರ ವಿಶ್ವಮೂಲಸ್ತಂಭವಾದ ಶಿವಂಗೋಸ್ಕರ ನಮಸ್ಕರಿಸುತ್ತಿದ್ದೆನು.

ಫಲಪತ್ರ ಲತಾಪುಷ್ಪ ಶಾಖಾ ವಿಟಪಿಮೂಲವಾನ್ ।
ಬೀಜವೃಕ್ಷಸ್ಯ ನ್ಯಾಯೇನ ತದೇತದ್ಬ್ರಹ್ಮಣಿ ಸ್ಥಿತಮ್ ॥ ೩ ॥

ಎಲೆ ಹೂ ಕಾಯಿ ಕೊಂಬೆ ಬೇರು ಮೊದಲಾದವುಗಳುಳ್ಳ ವೃಕ್ಷವು ಹೇಗೆ ಬೀಜದಲ್ಲಿ ಅಡಕವಾಗಿದ್ದಿತು ಮತ್ತೆ ಆ ಬೀಜವೃಕ್ಷದಲ್ಲಿ ಹೇಗೆ ಯಿದ್ದಿತು, ಹಾಗೆ ಎಲ್ಲ ಪ್ರಪಂಚವು ಬ್ರಹ್ಮನಲ್ಲಡಗಿಹುದು. ಮತ್ತೆಯೂ ಬ್ರಹ್ಮದಲ್ಲಿಯೇ ತೋರುವದೆಂಬರ್ಥವು.

ಲೀಲಯಾ ಸಹಿತಃ ಸಾಕ್ಷಾದುಮಾಪತಿರಿತೀರಿತಃ ।
ಲೀಲಯಾ ರಹಿತಃ ಪಶ್ಚಾತ್ಸ್ವಯಂಭುರಿತಿ ಕಥ್ಯತೇ ॥ ೪ ॥

ಲೀಲೆಯನ್ನೈದಿದಾಗಲೇ ಉಮಾಪತಿ ಲೀಲೆಯಂ ಬಿಟ್ಟಾಗಳೇ ಮರಳಿ ಸ್ವಯಂಭುವೆನಿಕೊಂಬನು ಶಿವನು

ಪಂಚಮೂರ್ತಿಮಯೋ ದೇವಃ ಪಂಚತತ್ತ್ವಾತ್ಮಕೋ ಭವೇತ್ ।
ಮೂರ್ತೀನಾಂ ದೇಹ ಭೇದೈಸ್ತು ಗುಣೈಃ ಪಂಚಾನನೈರ್ಯುತಃ ॥ ೫ ॥

ಐದು ಮೂರ್ತಿಗಳ ಮಯವಾದ ಚೈತನ್ಯಾತ್ಮಕನಾದ ದೇವನೇ ಐದು ತತ್ವಾತ್ಮಕನಹನು. ಮೂರ್ತಿಗಳ ದೇಹ ಭೇದಂಗಳಿಂದಲು ಗುಣಂಗಳಿಂದಲು ಐದು ಮುಖಂಗಳೊಡನೆ ಕೂಡಿದಾತನಹನು.

ಸ್ವಯಂಭು ಸರ್ವಚೈತನ್ಯಂ ತತ್ತ್ವಮಾಲಾಧರಾಂಕಿತಮ್ ।
ಪರಾಶಕ್ತಿ ಸಮಾಯೋಗಾತ್ ಜಗತ್ಸೃಷ್ಟ್ಯರ್ಥ ಕಾರಣಮ್ ॥ ೬ ॥

ಸ್ವಯಂಭುವಾದ ಸರ್ವ ಚೈತನ್ಯವಾಗಿರ್ದ ತತ್ತ್ವ ಮಾಲೆಗಳಿಂದ ಕುರುಹಿಡಲ್ಪಟ್ಟ, ಆ ಪರಮೇಶ್ವರನೇ ಪರಾಶಕ್ತಿಯ ಸಂಯೋಗದ ದೆಸೆಯಿಂದ ಜಗತ್ತಿನ ಸೃಷ್ಟಿಯ ಪ್ರಯೋಜನಕ್ಕೆ ಕಾರಣವಹುದು.

## ವಚನಗಳು

೧

ಬೀಜವೃಕ್ಷದಂತೆ ನೀನಿಪ್ಪೆಯಯ್ಯಾ ನಿರಾಕಾರವೇ ಮೂರ್ತಿಯಾಗಿ
ಮೂರ್ತಿಯೇ ನಿರಾಕಾರವಾಗಿ ಇವೆಲ್ಲವನತಿಗಳೆದು
ಬಯಲಾಗಿಪ್ಪೆಯಯ್ಯಾ ನೀನು
ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನದೇವಯ್ಯಾ

೨

ಮಹಾಕಾಲದಲ್ಲಿ ಓಂ ಪ್ರಥಮ ನಿಮ್ಮಿಂದ ನೀವೆ—
ಸ್ವಯಂಭುವಾಗಿದ್ದಿರಯ್ಯಾ ಒಂದನಂತಕಾಲ
ಮನವು ಮಹದಲ್ಲೊಕ್ಕಾಡಿ ಮತ್ತಲ್ಲಿಯೇ—
ತಲ್ಲೀಯವಾಗಿರಲೊಂದನಂತ ಕೋಟಿ ವರುಷ
ಕೂಡಲ ಸಂಗಯ್ಯ ವಿಪರೀತ ಚರಿತ್ರನು

೩

ಕಾಮ್ಯಕಲ್ಪಿತಗಳಿಲ್ಲದೆ ನಿಮ್ಮಿಂದ ನೀವೇ ಸ್ವಯಂಭುವಾಗಿದ್ದಿರಯ್ಯಾ
ನಿಮ್ಮ ಪರಮಾನಂದ ಪ್ರಭಾವ ಪರಿಣಾಮದಲ್ಲಿ ಒಂದನಂತ
ಕಾಲವಿದ್ದಿರಯ್ಯಾ
ನಿಮ್ಮಾದ್ಯಂತವ ನೀವೇ ಅರಿವುತ್ತಿದ್ದಿರಯ್ಯಾ
ನಿಮ್ಮ ಸ್ವಭಾವದುಡಯುವ ನೀವೇ ಬಲ್ಲಿರಿ ಕೂಡಲ ಚೆನ್ನ
ಸಂಗಮದೇವಾ

೪

ಹುಟ್ಟು ಹೊಟ್ಟೆಂಬುದು ನಿಮ್ಮಲ್ಲಿಲ್ಲ
ನಿಮ್ಮಿಂದ ನೀವೆ ಸ್ವಯಂಭುವಯ್ಯಾ
ಇಂತಾದಿರಯ್ಯಾ ಇಂತಾದಿರಯ್ಯಾ ಇಂತಾದಿರಯ್ಯಾ
ಪರುಷದಿಂದ ನೀವಿಂತಾದಿರಯ್ಯಾ ನಿಮ್ಮ ಮಹತ್ಮೆಯ ನೀವೇ ಬಲ್ಲಿರಿ
ನಿಜಗುರು ಕಪಿಲಸಿದ್ಧ ಮಲ್ಲಿನಾಥಯ್ಯಾ

೫

ಅಮೂಲ್ಯನು ಅಪ್ರಮಾಣನು ಅಗೋಚರಲಿಂಗವು
ಆದಿಮಧ್ಯ ಅಂತ್ಯವಿಲ್ಲದ ಲಿಂಗವು
ಸ್ವತಂತ್ರ ಲಿಂಗವು ನಿತ್ಯನಿರ್ಮಲ ಲಿಂಗವು
ಅಯೋನಿ ಸಂಭವನಯ್ಯಾ ನಮ್ಮ ಕೂಡಲ ಸಂಗಮದೇವಾ

೬

ಮರದೊಳಗಣ ಪತ್ರಫಲಂಗಳು ಮರಕಾಲವಶದಲ್ಲಿ ತೋರುವಂತೆ
ಹರನೊಳಗಣ ಲೀಲಾಪ್ರಕೃತಿ ಸ್ವಭಾವ—
ಹರನ ಲೀಲಾವಶದಲ್ಲಿ ತೋರುವುದು
ಲೀಲೆಯಾದಡೆ ಉಮಾಪತಿ ಲೀಲೆನಿಂದಡೆ ಸ್ವಯಂಭು
ನಮ್ಮ ಗುಹೇಶ್ವರ ಲಿಂಗವು

೭

ನಿಜವಸ್ತುವೊಂದೇ ಎರಡಾಗ ಬಲ್ಲುದದೊಂದೇ
ಬೇರೆ ತೋರಬಲ್ಲುದದೊಂದೇ ತನ್ನ ಮರವೆಯ ಬಲ್ಲುದದೊಂದೇ
ತಾನಲ್ಲದನ್ಯವಿಲ್ಲೆಂಬರಿವು ತಾನೇ ಸಿಮ್ಮಲಿಗೆಯ ಚೆನ್ನರಾಮಾ

## ವಿಶ್ವೋತ್ಪತ್ತಿ ಸ್ಥಲ ೨೫

ಈ ಪ್ರಕಾರದಿಂ ಸ್ವಯಂಭುಲಿಂಗವು ಜಗತ್ಸೃಷ್ಟಿಯ ಮಾಡಬೇಕಾಗಿ ಪಾರ್ವತಿವಲ್ಲಭನಾದನೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ವಹಾ ಪುರಾತನರು. ಇಂತಹ ಪಾರ್ವತೀವಲ್ಲಭನು ಸಚರಾಚರವೆಲ್ಲವ ರಚಿಸ ಬೇಕಾಗಿ ನುಡಿದ ವಚನಂಗಳು—

ಶಿವಧರ್ಮೇ—

ಮಾತಾ ಶಂಭುಃ ಪಿತಾ ಶಂಭುಃ ಭ್ರಾತಾ ಶಂಭುಸ್ತಥೈವ ಚ ।
ದೇವಾಸುರಮನುಷ್ಯಾಣಾಂ ಸೃಷ್ಟಿಶ್ಚ ಪರಮೇಶ್ವರಾತ್ ॥ ೧ ॥

ತಾಯಿಯೂ ಶಂಭುವು ತಂದೆಯೂ ಶಂಭುವು ಒಡಹುಟ್ಟಿದಾತನೂ ಶಂಭುವು ಹಾಗು ದೇವತೆಗಳು ರಾಕ್ಷಸರುಗಳು ಮನುಷ್ಯರುಗಳು ಇವರೆಲ್ಲ ರಿಗೆಯೂ ಪರಮೇಶ್ವರನೇ ತಂದೆಯು.

ಸರ್ವಶೂನ್ಯಾಂತರೇ ಮಧ್ಯೇ ಆದಿಮೂರ್ತಿ ಸಮುದ್ಭವಃ ।
ಆದಿಮೂರ್ತಿಸಮಾಖ್ಯಾತಃ ಪರಶಕ್ತಿ ಸಮುದ್ಭವಃ ॥ ೨ ॥
ಪರಶಕ್ತಿ ಸಮಾಖ್ಯಾತಃ ನಾದಬಿಂದು ಸಮುದ್ಭವಃ ।
ನಾದಬಿಂದು ಸಮಾಖ್ಯಾತಃ ಸಮ್ಯಜ್ಞಾನ ಸಮುದ್ಭವಃ ॥ ೩ ॥
ಸಮ್ಯಜ್ಞಾನಂ ಸಮಾಖ್ಯಾತಃ ಶಿವತತ್ವ ಸಮುದ್ಭವಃ ।
ಶಿವತತ್ವ ಸಮಾಖ್ಯಾತಃ ಈಶ್ವರಾತ್ಮ ಸಮುದ್ಭವಃ ॥ ೪ ॥
ಈಶ್ವರಾತ್ಮ ಸಮಾಖ್ಯಾತಃ ರುದ್ರಕ್ರಿಯಾ ಸಮುದ್ಭವಃ ।
ರುದ್ರಕ್ರಿಯಾ ಸಮಾಖ್ಯಾತಃ ವಿಷ್ಣು ಲಕ್ಷ್ಮೀ ಸಮುದ್ಭವಃ ॥ ೫ ॥
ವಿಷ್ಣು ಲಕ್ಷ್ಮೀ ಸಮಾಖ್ಯಾತಃ ಬ್ರಹ್ಮವಾಣೀ ಸಮುದ್ಭವಃ ।
ಬ್ರಹ್ಮವಾಣೀ ಸಮಾಖ್ಯಾತಃ ಸರ್ವಜೀವ ಸಮುದ್ಭವಃ ॥ ೬ ॥

ಸರ್ವಶೂನ್ಯಾಂತರದ ಮಧ್ಯದಲ್ಲಿ ಆದಿಮೂರ್ತಿಯೆಂಬ ತತ್ವಹುಟ್ಟಿತ್ತು. ಆದಿ ಮೂರ್ತಿಯಲ್ಲಿ ಪರಶಕ್ತಿಯೆಂಬ ಶಕ್ತಿ ಹುಟ್ಟಿದಳು. ಪರಶಕ್ತಿಯಿಂದ ನಾದಬಿಂದುಗಳು ಹುಟ್ಟಿದವು. ಆ ನಾದಬಿಂದುಗಳಿಂದ ಸಮ್ಯಜ್ಞಾನ ಹುಟ್ಟಿ ತ್ತು. ಆ ಸಮ್ಯಜ್ಞಾನದಿಂದ ಶಿವತತ್ವ ಹುಟ್ಟಿತ್ತು. ಆ ಶಿವತತ್ವದಿಂದ ಈಶ್ವರ ತತ್ವವಾದ ಆತ್ಮ ಹುಟ್ಟಿದನು. ಆ ಈಶ್ವರನೆಂಬಾತ್ಮನಿಂದ ರುದ್ರನೂ ಕ್ರಿಯಾ

ಶಕ್ತಿಯೂ ಹುಟ್ಟಿದರು. ಆ ರುದ್ರ ಕ್ರಿಯಾಶಕ್ತಿಯರಿಂದ ವಿಷ್ಣು ಲಕ್ಷ್ಮಿಯರು ಹುಟ್ಟಿದರು. ಆ ವಿಷ್ಣು ಲಕ್ಷ್ಮಿಯರಿಂದ ಬ್ರಹ್ಮಸರಸ್ವತಿ ಹುಟ್ಟಿದರು. ಆ ಬ್ರಹ್ಮವಾಣಿಯಿಂದ ಸರ್ವ ಜೀವರಾಶಿಗಳೆಲ್ಲವು ಹುಟ್ಟಿದವು.

## ವಚನಗಳು

೧

ಏನೇನೆಂದೆನಲಿಲ್ಲದ ಮಹಾಘನವು ತನ್ನ ಲೀಲೆಯಿಂ ತಾನೇ
ಸ್ವಯಂಭು ಲಿಂಗಸ್ಥಲವಾಯಿತ್ತು
ಆ ಲಿಂಗದಿಂದಾಯಿತ್ತು ಶಿವಭಕ್ತ್ಯಾತ್ಮಕವು
ಆ ಶಿವಭಕ್ತ್ಯಾತ್ಮಕವಿಂದಾಯಿತ್ತು ಆಕಾಶ
ಆಕಾಶದಿಂದಾಯಿತ್ತು ವಾಯು
ಆ ವಾಯುವಿನಿಂದಾಯಿತ್ತು ಅಗ್ನಿ
ಆ ಅಗ್ನಿಯಿಂದಾಯಿತ್ತು ಅಪ್ಪು
ಆ ಅಪ್ಪುವಿಂದಾಯಿತ್ತು ಪೃಥ್ವಿ
ಆ ಪೃಥ್ವಿಯಿಂದಾಯಿತ್ತು ಸಕಲ ಜೀವಜಗ
ಇವೆಲ್ಲ ನಿಮ್ಮ ನೆನಹುಮಾತ್ರವಿಂದಾದವು ನೋಡಾ
ನಿಮ್ಮಲಿಗೆಯ ಚೆನ್ನರಾಮಾ

೨

ಅನಾದಿಯ ಮಗನು ಆದಿ ಆದಿಯ ಮಗನು ಅತೀತ
ಅತೀತನ ಮಗ ಆಕಾಶ ಆಕಾಶನಮಗ ವಾಯು
ವಾಯುವಿನ ಮಗನು ಅಗ್ನಿ ಅಗ್ನಿಯ ಮಗ ಅಪ್ಪು
ಅಪ್ಪುವಿನ ಮಗ ಪೃಥಿವಿ ಪೃಥಿವಿಯಿಂದ ಸಕಲ ಜೀವಿಗಳೆಲ್ಲ
ಉದಯಿಸಿದವಂದವಸ್ಥ್ಯ ಗುಹೇಶ್ವರ

೩

ಆದಿಯಲ್ಲೊಬ್ಬ ಶರಣ ಮೂರ್ತಿಯಾದ
ಆ ಶರಣಮೂರ್ತಿಯಿಂದ ಸದಾಶಿವನಾದ
ಆ ಸದಾಶಿವನ ಮೂರ್ತಿಯಿಂದ ಜ್ಞಾನಶಕ್ತಿಯಾದಳು
ಆ ಸದಾಶಿವಂಗೆ ಜ್ಞಾನಶಕ್ತಿಗೆ ಇಬ್ಬರಿಗೆಯೂ ಶಿವನಾದ

ಆ ಶಿವಂಗೆ ಇಚ್ಛಾಶಕ್ತಿಯಾದಳು
ಆ ಶಿವಂಗೆಯೂ ಇಚ್ಛಾಶಕ್ತಿಗೆ ಇಬ್ಬರಿಗೆಯೂ ರುದ್ರನಾದ
ಆ ರುದ್ರಂಗೆ ಕ್ರಿಯಾಶಕ್ತಿಯಾದಳು
ಆ ರುದ್ರಂಗೆ ಕ್ರಿಯಾಶಕ್ತಿಗೆ ಇಬ್ಬರಿಗೆಯೂ ವಿಷ್ಣುವಾದ
ಆ ವಿಷ್ಣುವಿಗೆ ಲಕ್ಷ್ಮಿಯಾದಳು
ಆ ವಿಷ್ಣುವಿಗೆ ಮಹಾಲಕ್ಷ್ಮಿಗೆ ಇಬ್ಬರಿಗೆಯೂ ಬ್ರಹ್ಮನಾದ
ಆ ಬ್ರಹ್ಮಂಗೆ ಸರಸ್ವತಿಯಾದಳು
ಆ ಬ್ರಹ್ಮಂಗೆ ಸರಸ್ವತಿಗೆ ಇಬ್ಬರಿಗೆಯೂ—
ನರರು ಸುರರು ದೇವರ್ಕಳು ಹೆಣ್ಣು ಗಂಡು—
ಸಚರಾಚರಂಗಳು ಸಹಿತವಾಗಿ ಎಂಬತ್ನಾಲ್ಕು ಲಕ್ಷ
ಜೀವಜಂತುಗಳ ಜಾತಿ
ಅಂದರೆ ಜಗವಾಯಿತ್ತು. ಹೊರೆಯೆಂದಡೆ ಆಕಾಶದಲ್ಲಿ ನಿಂದಡು
ಗರುಡ ಗಂಧರ್ವ ಸಿದ್ಧವಿದ್ಯಾಧರರು ಮೊದಲಾದ ದೇವ
ಸಮೂಹಂಗಳೆಲ್ಲಾ
ಕೂಡಲ ಸಂಗಮದೇವಾ ನೀವು ಮನದಲ್ಲಿ ಸಂಕಲ್ಪಿಸಿ ಆಗೆಂದಡಾದವು

೪

ಶಿವನ ಮುಖದಲ್ಲಿ ರುದ್ರ ಜನಿಸಿದ ಭುಜದಲ್ಲಿ ವಿಷ್ಣು ಜನಿಸಿದ
ಜಂಘೆಯಲ್ಲಿ ಬ್ರಹ್ಮ ಜನಿಸಿದ ಇಂದ್ರ ಪಾದದಲ್ಲಿ ಜನಿಸಿದ
ಚಂದ್ರ ಮನದಲ್ಲಿ ಜನಿಸಿದ
ಸೂರ್ಯ ನಯನದಲ್ಲಿ ಜನಿಸಿದ
ನೊಸಲಲ್ಲಿ ಅಗ್ನಿ ಜನಿಸಿದ ಪ್ರಾಣವಾಯು ನಾಭಿಯಲ್ಲಿ ಜನಿಸಿತ್ತು
ಅಂತರಂಗದಲ್ಲಿ ಗಗನ ಜನಿಸಿತ್ತು ಶಿರದಲ್ಲಿ ಮೂವತ್ತು
ಮೂರುಕೋಟಿ ದೇವತೆಗಳು ಜನಿಸಿದರು
ಪಾದದಲ್ಲಿ ಭೂಮಿ ಜನಿಸಿತ್ತು ಶ್ರೋತ್ರದಲ್ಲಿ ದಿಕ್ಕುಗಳು ಜನಿಸಿದವು
ಜಗವ ನಿಕ್ಷೇಪಿಸಿಕೊಂಡು ಕುಕ್ಷಿಯೊಳಗೆ ಅಕ್ಷಯನಗಣಿತನು
ಸಾವಿರ ಶಿರ ಸಾವಿರ ಕಣ್ಣು ಸಾವಿರ ಮುಖ ಸಾವಿರ
ಪಾದ ಸಾವಿರ ತೋಳು
ನಮ್ಮ ಕೂಡಲ ಸಂಗಯ್ಯನೊಬ್ಬನೇ ಮೂರು ಲೋಕಕ್ಕೊಡೆಯನು

೫

ಬ್ರಹ್ಮ ವಿಷ್ಣು ಮೊದಲಾದ ದೇವತೆಗಳಿಗೆ ಶಿವನೇ ಜನಕನೆಂದೆಂಬ
ಯಜುರ್ವೇದವ ಕೇಳಿರೇ ದ್ವಿಜರೆಲ್ಲರು

“ ಉಮಯಾ ಸಹಿತಃ ಸೋಮಃ ಸೋಮ ಇತ್ಯುಚ್ಯತೇ ಬುಧೈಃ ।

ಋಗ್ವೇದೇ—

“ ಸೋಮಃ ಪವತೇ ಜನಿತಾ ಮತೀನಾಂ ಜನಿತಾದಿವೋ ಜನಿತಾ ಪೃಥಿವ್ಯಾ
ಜನಿತಾಗ್ನಿರ್ಜನಿತಾ ಸೂರ್ಯಶ್ಚ ಜನಿತೇಂದ್ರೋ ಜನಿತಾಥ ವಿಷ್ಣುಃ ”

ಎಂದುದಾಗಿ ಮತ್ತೆಯೂ ಆದಿತ್ಯ ಪುರಾಣದಲ್ಲಿ—

ಉಮಯಾ ಸಹಿತಃ ಸೋಮಃ ಸೋಮ ಇತ್ಯುಚ್ಯತೇ ಬುಧೈಃ ।
ಸ ಏವ ಕಾರಣಂ ನಾನ್ಯೋ ವಿಷ್ಣೋರಪಿ ಚ ವೈ ಶ್ರುತಿಃ ॥

ಲೈಂಗೇ—

ಮತೀನಾಂ ಚ ದಿವಃ ಪೃಥ್ವ್ಯಾವಹ್ನೇ ಸೂರ್ಯಸ್ಯ ವಜ್ರಿಣಃ
ಸಾಕ್ಷಾದಪಿ ಚ ವಿಷ್ಣೋರ್ವೈ ಸೋಮೋ ಜನಯಿತೇಶ್ವರಃ ॥

ಎಂದುದಾಗಿ ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೆಲ್ಲರೂ—
ಶಿವನಿಂದಲುತ್ಪತ್ಯರಾದರೆಂಬ ವೇದವನೋದಿಯೂ ಕೇಳಿಯೂ—
ಮತ್ತೆಯೂ ದೈವವುಂಟೆಂಬ ಅಜ್ಞಾನಿ ಜಾತ್ಯಂಧರ—
ನಾನೇನೆಂಬೆನಯ್ಯಾ ಬಸವ ಪ್ರಿಯ ಕೂಡಲ ಚೆನ್ನ ಸಂಗಮದೇವಾ

೬

ಅಯ್ಯಾ ನೀನು ನಿರಾಳ ನಿರ್ಮಾಯನಾಗಿರುತ್ತಿದ್ದೆಯಾಗಿ
ಆಕಾಶ ಪ್ರಕಾಶಂಗಳಿಲ್ಲದಂದು ಸಾಕ್ಷಿ ಸಭೆಗಳಿಲ್ಲದಂದು
ಸಚರಾಚರವೆಲ್ಲ ರಚನೆಗೆ ಬಾರದಂದು
ಆಧಾರದೊಳಗಣ ವಿಭೂತಿಯನೆ ತೆಗೆದು ಭೂಮಿಯ ನೆಲೆಗೊಳಿಸಿ
ಪಂಚಾಶತ್ಕೋಟಿಯೋಜನ ವಿಸ್ತೀರ್ಣ ಭೂಮಂಡಲಕ್ಕೆ
ಸುತ್ತಿ ಹರಿದವು ಸಪ್ತ ಸಾಗರಂಗಳು

ಎಂಬತ್ತಾರುಕೋಟಿ ತೊಂಬತ್ತೇಳು ಲಕ್ಷ ಕಾಲ ಭುವನ
ಮಂಡಲಕ್ಕೆ ಉದಯ
ಬ್ರಹ್ಮಾಂಡ ಅರುವತ್ತಾರುಕೋಟಿ ತಾರಾಮಂಡಲವೆಂದರೆ—
ಬೆಳಗಿದೋರುವ ಹನ್ನೆರಡು ಜ್ಯೋತಿಯ ನಿಲಿಸಿ ತೋರಿದ
ಹದಿನಾಲ್ಕು ಲೋಕವ
ಈ ಜಗದ ಜಂಗುಳಿಯ ಕಾವ ಗೋವಳ ತಾನಾಗಿ—
ಎಂಬತ್ನಾಲ್ಕು ಲಕ್ಷ ಜೀವರಾಶಿಗಳಿಗೆ ರಾಶಿವಾಳಕ ತಾನಾಗಿ—
ಸಕಲದ ಅಳಿವಿನ ಉಳಿವಿನಿಂದ ನಿಜದ ನಿಲವ ನೋಡಿ ಕಂಡು—
ಗುಹೇಶ್ವರಾ ನಿಮ್ಮ ಪಾದಕ್ಕೆ ನಮೋನಮಃ ಎನುತಿರ್ದೆನು.

ಈ ಪ್ರಕಾರದಿಂ ಪರಮೇಶ್ವರನು ಜಗತ್ತೆಲ್ಲವನುತ್ಪತ್ತ್ಯವ ಮಾಡಿದ ನೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದಮಾಡಿರ್ದರುಹಾ ಪುರಾತನರು. ಇಂತಹ ಪರಮೇಶ್ವರನು ದೇವದಾನವ ಮಾನವರೆಲ್ಲರ ಹುಟ್ಟಿಸದೇಕೆಂದು ನುಡಿದ ವಚನಂಗಳು.

ಶಿವಧರ್ಮೇ—

> ದೇಹಸ್ಥಂ ಸಕಲಂ ಜ್ಞೇಯಂ ನಿಷ್ಕಲಂ ದೇಹವರ್ಜಿತಮ್।
> ದೇಹಸ್ಯ ವಕ್ಷ್ಯಲೋಪೇತಂ ಧಾತು ಪಿಂಡಮಿತಿ ಸ್ಮೃತಮ್ ॥ ೧ ॥

ದೇಹದಲ್ಲಿದ್ದಾತ್ಮನೇ ಸಕಲನೆನಿಸಿಕೊಂಬನು ದೇಹವಿಲ್ಲದಾತ್ಮನು. ನಿಷ್ಕಲನೆನಿಸಿಕೊಂಬನು. ದೇಹವಾಯುತ್ತಾದರೆ ಮಲಸಂಬಧವಾಗಿ ಪಿಂಡವೆನಿಸುವುದು.

> ತನ್ಮಾತ್ರ ಪಂಚಕಂ ಚೈವ ಭೂತಪಂಚಕಮೇವ ಚ।
> ಜ್ಞಾನೇಂದ್ರಿಯಂ ತಥಾ ಶ್ರೋತ್ರಂ ಕರ್ಮೇಂದ್ರಿಯಮತಃಪರಮ್ ॥ ೨ ॥

ತನ್ಮಾತ್ರ ಪಂಚಕವೆಂದಡೆ ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಭೂತ ಪಂಚಕವೆಂದರೆ ಪೃಥಿವಿ ಅಪ್ ತೇಜ ವಾಯು ಆಕಾಶ ಜ್ಞಾನೇಂದ್ರಿಯ ಪಂಚಕವೆಂದರೆ ಶ್ರೋತ್ರ ತ್ವಕ್ ನೇತ್ರ ಜಿಹ್ವೆ ಘ್ರಾಣ ಕರ್ಮೇಂದ್ರಿಯ ಪಂಚಕವೆಂದರೆ ವಾಕ್ ಪಾದ ಪಾಣಿ ಪಾಯು ಗುಹ್ಯ.

> ಅಂತಃಕರಣಸಂಯುಕ್ತಂ ಗುಣತ್ರಯಮನಂತರಮ್ ।
> ಕಲಾಪಂಚಕಮಿತ್ಯುಕ್ತಂ ಅವ್ಯಕ್ತಾಖ್ಯ ಸಮನ್ವಿತಮ್ ॥
> ಇತ್ಯೇವಾಷ್ಟಪುರಿಯೋಗಾದಾತ್ಮಾ ಬಹುವಿಧಂ ಯಯೌ ॥ ೩ ॥

ಮನ, ಬುದ್ಧಿ, ಚಿತ್ತ, ಅಹಂಕಾರ, ಸತ್ವ, ರಜ, ತಮಂ, ನಿವೃತ್ತಿ, ಪ್ರತಿಷ್ಠೆ, ವಿದ್ಯೆ, ಶಾಂತಿ,

ಶಾಂತ್ಯ ತೀತೆ ಅವ್ಯಕ್ತ ತತ್ವವೆಂಬ ಎಂಟು ಪಟ್ಟಣಗಳಲ್ಲಿ ಆತ್ಮನು ಹಲವು ಪ್ರಕಾರದಿಂ ವ್ಯವಹರಿಸುತ್ತಿಹನು.

ಸಂಸಾರೋಽವಿದ್ಯಯಾ ಸತ್ಯ ಸತ್ಯವತ್ ಪರಿಕಲ್ಪಿತಃ ।
ದೇಹೇಂದ್ರಿಯಾದಿ ಸಂಘಾತೇಽಹಂ ಮಮ ಭ್ರಾಂತಿರೂಪತಃ ॥ ೪ ॥

ಅವಿದ್ಯೆಯಿಂದಲೇ ಸಂಸಾರವು ತನಗೆ ಸತ್ಯವೆಂಬಹಾಗೆ ಪರಿಕಲ್ಪಿಸಲ್ಪಟ್ಟಿತು. ದೇಹೇಂದ್ರಿಯಾದಿಗಳ ಸಮೂಹದ ಸಂಗದಿಂದ ನಾನು ನನ್ನದು ನನಗೆ ಎಂಬ ಅಭಿಪ್ರಾಯದಿಂ ಭ್ರಾಂತಿ ರೂಪದಿಂದಿರುತ್ತಿಹನು.

ಸೋಽಯಮಾತ್ಮಾ ಶಿವಃ ಸಾಕ್ಷಾಚ್ಛಿವಸ್ಯಾಂಶೋಽಪಿ ತತ್ವತಃ ।
ವ್ಯವಹಾರದಶಾಯುಕ್ತಃ ಸಂಸಾರೀವ ಪ್ರಕಾಶತೇ ॥ ೫ ॥

ಆ ಈ ಆತ್ಮನೇ ಪರಮಾತ್ಮನಾಗಿ ಶಿವಾಂಶಿಕನು ವ್ಯವಹಾರಾವಸ್ಥೆಯಿಂದಲೇ ಸಂಸಾರಿಯೋಪಾದಿಯಲ್ಲಿ ತೋರುತ್ತಿಹನು.

ಪಾಶಶ್ಚೇಂದ್ರಿಯ ಮಿತ್ಯುಕ್ತಂ ಪಶುರಾತ್ಮೇತ್ಯುದಾಹೃತಮ್ ।
ಶಿವ ಏವ ಪತಿಃ ಸಾಕ್ಷಾದಾಗಮಾಮ್ನಾಯ ನಿರ್ಣಯಃ ॥ ೬ ॥

ಆ ಆತ್ಮನಿಗೆ ಇಂದ್ರಿಯಂಗಳೇ ಪಾಶಂಗಳು. ಜೀವನೇ ಪಶುವು. ಆ ಜೀವನೆಂಬ ಪಶುವಿಗೆ ಶಿವನೇ ಪತಿಯೆಂಬುದು ಶಿವಾಗಮಂಗಳ ನಿರ್ಣಯವು.

ಪಂಚವಿಂಶತಿ ತತ್ವಾನಿ ಮಾಯಾ ಕರ್ಮ ಗುಣಾ ಇತಿ ।
ವಿಷಯಾ ಇತಿ ಕಥ್ಯಂತೇ ಪಾಶೇ ಜೀವನಿಬಂಧನಾತ್ ॥ ೭ ॥

ಇಪ್ಪತ್ತೈದು ತತ್ವಂಗಳು ಮಾಯಾಕರ್ಮ ಗುಣಂಗಳಾಗುತ್ತಿಹವು. ಅವು ವಿಷಯಂಗಳ ರೂಪಿನಿಂದಲೇ ಜೀವನನ್ನು ಕಟ್ಟುವವು.

## ವಚನಗಳು

ಪೃಥಿವಿ ಅಪ್ಪು ತೇಜ ವಾಯು ಆಕಾಶವೆಂಬುವು ಪಂಚ ಮಹಾ
ಭೂತಂಗಳು

ಪ್ರಾಣ ಅಪಾನ ವ್ಯಾನ ಉದಾನ ಸಮಾನವೆಂಬಿವು ಪಂಚಪ್ರಾಣ
ವಾಯುಗಳು

ವಾಕ್ಕು ಪಾಣಿ ಪಾದ ಪಾಯು ಗುಹ್ಯವೆಂಬಿವು ಪಂಚ
ಕರ್ಮೇಂದ್ರಿಯುಗಳು

ಶ್ರೋತ್ರ ತ್ವಕ್ಕು ನೇತ್ರ ಜಿಹ್ವೆ ಘ್ರಾಣವೆಂಬಿವು ಪಂಚ
ಜ್ಞಾನೇಂದ್ರಿಯಂಗಳು

ಮನ ಬುದ್ಧಿ ಚಿತ್ತ ಅಹಂಕಾರವೆಂಬಿವು ಅಂತಃಕರಣ
ಚತುಷ್ಟಯಂಗಳು
ಇಂತು ಇಪ್ಪತ್ನಾಲ್ಕು ತತ್ವಂಗಳು ಕೂಡಿ ದೇಹವಾಯಿತ್ತು
ಅದೆಂತೆಂದಡೆ

ಭೂತೈಶ್ಚ ಪಂಚಭಿಃ ಪ್ರಾಣೈಶ್ಚತುರ್ದಶಭಿರಿಂದ್ರಿಯೈಃ ।
ಚತುರ್ವಿಂಶತಿ ದೇಹಾನಿ ಸಾಂಖ್ಯ ಶಾಸ್ತ್ರವಿದೋ ವಿದುಃ ॥ ಎಂದುದಾಗಿ

ಇಂತೀ ಇಪ್ಪತ್ನಾಲ್ಕು ತತ್ವಂಗಳು ಕೂಡಿ ಚೇಷ್ಟಿಸುವಾತನೇ
ಜೀವಾತ್ಮನು
ಇಂತು ಪಂಚವಿಂಶತಿ ತತ್ವಂಗಳುತ್ಪತ್ತಿಯು ನಿಮ್ಮ ನೆನಹು
ಮಾತ್ರದಿಂದಾದವಾಗಿ
ಅವರ ಗುಣಧರ್ಮ ಕರ್ಮಂಗಳು ನಿಮಗಿಲ್ಲ ನೋಡಾ ಸಿಮ್ಮಲಿಗೆಯ
ಚೆನ್ನರಾಮಾ

೨

ಪರಶಿವನ ಚಿತ್ಕಲೆ ಜಗತ್ತಿನ ಶಿರೋಮಧ್ಯಕ್ಕೆ ಬಿಂಬಿಸಿ
ಅದಕ್ಕೆ ಚೈತನ್ಯಗೊಳಿಸಿದಲ್ಲಿ ಅದೇ ಪರಮಾತ್ಮನಾಯಿತ್ತು
ಆ ಪರಮಾತ್ಮನೇ ಜಗತ್ತಿನ ಭ್ರೂಮಧ್ಯಕ್ಕೆ ಬಿಂಬಿಸಿದಲ್ಲಿ
ಅದೇ ಅಂತರಾತ್ಮನಾಯಿತ್ತು
ಆ ಅಂತರಾತ್ಮನೇ ಜಗತ್ತಿನ ಹೃದಯಕ್ಕೆ ಬಿಂಬಿಸಿದಲ್ಲಿ
ಅದೇ ಜೀವಾತ್ಮನಾಯಿತ್ತು
ಆ ಜೀವಾತ್ಮನೇ ಘಟ ಅಂತರಾತ್ಮನೇ ಪ್ರಾಣ ಪರಮಾತ್ಮನೇ
ಸರ್ವಸಾಕ್ಷಿಕ
ಆ ಸಾಕ್ಷಿಕನೇ ವಸ್ತು ಆ ಪರವಸ್ತು ಈ ಜೀವಾಂತರಾದಿಗಳೆಂಬ
ಅಂಗಪ್ರಾಣಕ್ಕೆ
ಪಂಚವಿಂಶತಿ ತತ್ವಂಗಳೆಂಬ ಪಾಶವಂ ತೊಡಿಸಿ ಅಂತದನೇ ಪಶುವೆನಿಸಿ
ತಾನದಕ್ಕೆ ಪತಿಯಾಗಿ ಅಲ್ಲಿ ನಾನಾ ವಿನೋದಂಗಳಂ ವಿನೋದಿಸಿತ್ತು
ಅದೆಂತೆಂದಡೆ—

ವಿದ್ಯುದ್ರೂಪಮಿವಾಕಾಶೇ ಪ್ರತ್ಯಕ್ಷಂ ಸರ್ವತೋ ಮುಖೈಃ ।
ಶಿವತತ್ತ್ವಮಿದಂ ಪ್ರೋಕ್ತಂ ಸರ್ವತತ್ತ್ವಾಲಯಂ ವಿದುಃ ॥
ಜೀವಾಂತರ ಪರಾತ್ಮೇತಿ ತ್ರಿಭಿರ್ನಾಮಭಿರುಚ್ಯತೇ ।
ಆತ್ಮಸ್ವ ಜೀವ ಸಬಂಧಶ್ಚಾಂತರಃ ಪ್ರಾಣ ಸಂಯುತಃ ॥
ಪರಮಾತ್ಮಾ ತತ್ತ್ವ ಸಂಯುಕ್ತಃ ಆತ್ಮತ್ರಯಮಿದಂ ಶೃಣು ।

ಎಂದುದಾಗಿ ಬಸವಪ್ರಿಯ ಕೂಡಲ ಚೆನ್ನಸಂಗಯ್ಯ
ನಿಂತೀ ಪರಿಯಲ್ಲಿ ಅಡಗಿರ್ದ ಸರ್ವ ಜಗತ್ತನ್ನು

೩

ಪರಮಾತ್ಮನ ಪ್ರತಿಲಹರಿಯಿಂದ ಅಂತರಾತ್ಮನುತ್ಪತ್ತಿಯು
ಅಂತರಾತ್ಮನ ಪ್ರತಿಲಹರಿಯಿಂದ ಜೀವಾತ್ಮನುತ್ಪತ್ತಿಯು
ಇಂತೀ ಜೀವಾಂತರಾದಿಗಳು ಅಂಗ ಪ್ರಾಣದಲ್ಲಿ
ಒಂದೇಯೆಂದೆನಿಸಿದರೂ
ಆ ವೊಂದೆಂಬ ತಾಮಸ ಜೀವನು ಅಂಗನೆಯ ಸಂಗ ಮೊದಲಾದ
ನಾನಾ ದುಃಖಂಗಳಲ್ಲಿ ನೋವುತ್ತ
ನಾನಾ ಯೋನಿಗಳಲ್ಲಿ ಜನಿಸುತ್ತ ರೌರವ ನರಕದಲ್ಲಿ ಏಳುತ್ತ
ಮುಳುಗುತ್ತಲಿಹನು
ಆ ಪರಮಾತ್ಮನು ಜೀವಾತ್ಮನ ಶಿಖಾ ಮಧ್ಯದಲ್ಲಿದ್ದು—
ನಾಹಂ ಎನ್ನದೆ ಸೋಽಹಂ ಎನ್ನುತ್ತ ನಮ್ಮ ಸಿಮ್ಮಲಿಗೆಯ
ಚೆನ್ನರಾಮನೆಂಬ
ಅಖಂಡಲಿಂಗದೊಳಗೆ ನಿತ್ಯತ್ವವನೈದುತ್ತ ಎಡೆದೆರಹಿಲ್ಲದೆ
ಪರಮ ಸಂತೋಷದೊಳಗಿದ್ದಿತ್ತು

೪

ಜಗತ್ತೆಂಬ ಯಂತ್ರದ ಹಾಹೆಗೆ ಅಜ್ಞಾನವೆಂಬ ತುಷವ ತೊಡಿಸಿ
ಅಹಂ ಮಮತೆಯೆಂಬ ಸೊಕ್ಕನಿಕ್ಕಿ ಬಾರದ ಬಟ್ಟೆಯ ಬರಿಸಿ
ಕಾಣದ ದುಃಖವ ಕಾಣಿಸಿ ಉಂಣದ ಹೇಯವನುಣ್ಣಿಸಿ
ಮಾರಾರಿ ನೀನು ವಿನೋದಿಸಿದೆಯಯ್ಯಾ ಕೂಡಲಸಂಗಮದೇವಾ

೫

ತನ್ನ ವಿನೋದಕ್ಕೆ ತಾನೇ ಸೃಷ್ಟಿಸಿದ ಸಕಲ ಪ್ರಪಂಚವನು
ತನ್ನ ವಿನೋದಕ್ಕೆ ತಾನೇ ತಿರುಗಿಸಿದ ಅನಂತ ದುಃಖಂಗಳಲ್ಲಿ
ಇಂತೆನ್ನ ಚೆನ್ನ ಮಲ್ಲಿಕಾರ್ಜುನ ದೇವನೆಂಬ ಪರಶಿವನು
ತನ್ನ ಜಗದ್ವಿಲಾಸ ಸಾಕಾದಡೆ ಮತ್ತೆ ತಾನೇ ಪರಿದನವರ
ಮಾಯಾ ಪಾಶವನು

೬

ಶುಕ್ಲ ಶೋಣಿತ ಪಿಂಡೈಕ್ಯನ ಚಿತ್ತ ವಾಯು ಆರು ದಳದ
ಪದ್ಮದಲ್ಲಿಹುದು
ಮೊಲೆ ಮುಡಿ ಬಂದರೆ ಆ ಪಿಂಡವನು ಹೆಣ್ಣೆಂಬರು
ಗಡ್ಡ ಮೀಸೆಗಳು ಬಂದರೆ ಆ ಪಿಂಡವನು ಗಂಡಸೆಂಬರು
ಆ ಇಬ್ಬರ ನಡುವೆ ಸುಳಿದ ಆತ್ಮನು ಹೆಣ್ಣು ಅಲ್ಲ ಗಂಡು
ಅಲ್ಲ ನೋಡಾ
ಇದರಂತುವ ತಿಳಿದು ನೋಡಿಹೆನೆಂದರೆ ಶ್ರುತಿಗಳಿಗಗೋಚರವೆಂದಾತ
ನಮ್ಮ ಅಂಬಿಗರ ಚೌಡಯ್ಯ

## ಅಷ್ಟಮೂರ್ತಿ ನಿರಸನಸ್ಥಲ ೨೭

ಈ ಪ್ರಕಾರದಿಂ ಬ್ರಹ್ಮವಿಷ್ಣ್ವಾದಿ ದೇವದಾನವ ಮಾನವರ ಶಿವನೇ ಉತ್ಪತ್ತಿಯ ಮಾಡಿದನೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಆ ದೇವದಾನವ ಮಾನವರ ಶಿವನೆನ್ನಲಾಗದೆಂದು ನುಡಿದ ವಚನಂಗಳು

ಋಗ್ವೇದೇ—

ಘಟೋತ್ಪತ್ತಿ ಹೇತು ಭೂತಶ್ಚ ಮೃದ್ದಂಡಸಲಿಲ ಸೂತ್ರಾದಿಃ ಕುಲಾಲಃ ।
ಸ್ವಯಮೇವ ಭವತಿ ಕಿಮ್ ? " ॥ ೧ ॥

ಹರವಿಯ ಮಾಡುವದಕ್ಕೆ ಕಾರಣಗಳಾದ ಮಣ್ಣು ಉದಕ ಕೋಲು ಸೂತ್ರ ಮೊದಲಾದ ಸಾಧನಂಗಳು ಕುಂಬಾರ ತಾನೇ ಆಗುತ್ತಿಹನೇ ಇಲ್ಲವಾಗಿ ಮತ್ತಂ—

" ತಥೈವ ಜಗದುತ್ಪತ್ತಿ ಹೇತ್ವರ್ಥಂ ನಿರ್ಮಿತಾಃ ಪೃಥಿವ್ಯಾದ್ಯಷ್ಟ ।
ತನವಃ ಪರಮೇಶ್ವರಃ ಸ್ವಯಮೇವ ನ ಭವತಿ " ॥ ೨ ॥

ಹಾಗೆಯೇ ಲೋಕಸೃಷ್ಟಿಯ ಕಾರಣಕ್ಕೋಸ್ಕರ ನಿರ್ಮಿಸಲ್ಪಟ್ಟವಾದ ಪೃಥಿವ್ಯಾದ್ಯಷ್ಟ ತನುಗಳು ಪರಮೇಶ್ವರನೇ ಅಲ್ಲವು.

ಯಜುರ್ವೇದೇ—

ಆತ್ಮನ ಆಕಾಶಃ ಸಂಭೂತಃ ಆಕಾಶದ್ವಾಯುಃ ವಾಯೋರಗ್ನಿ ।
ಅಗ್ನೇರಾಪಃ ಅದ್ಭ್ಯಃ ಪೃಥಿವೀತಿ ಭೂತ ಪರಂಪರಾ ಸಂಭವೇ ।
ಪರಮೇಶ್ವರಸ್ಯ ಸಾಕ್ಷಾನ್ಮೂರ್ತಿತ್ವಂ ಪೃಥಿವ್ಯಾದ್ಯಷ್ಟತನೂನಾಂ
ಕಥಂ ಸಂಭವತಿ ॥ ೩ ॥

ಆತ್ಮನ ದೆಸೆಯಿಂದ ಆಕಾಶವು ಹುಟ್ಟಿತ್ತು. ಆಕಾಶದ ದೆಸೆಯಿಂದ ವಾಯು ಹುಟ್ಟಿತ್ತು. ವಾಯುವಿನ ದೆಸೆಯಿಂದ ಅಗ್ನಿ ಹುಟ್ಟಿತ್ತು. ಅಗ್ನಿಯ ದೆಸೆಯಿಂದ ಅಪ್ಪು ಹುಟ್ಟಿತ್ತು. ಅಪ್ಪುವಿನ ದೆಸೆಯಿಂದ ಪೃಥಿವಿ ಹುಟ್ಟಿತ್ತು. ಭೂತಂಗಳುತ್ಪತ್ತಿಯು ಹೀಗಿದ್ದರೂ ಶಿವನ ಪ್ರತ್ಯಕ್ಷವಾದ ಮೂರ್ತಿತ್ವವು ಪೃಥಿವಿ ಮೊದಲಾದ ಅಷ್ಟ ತನುಗಳಿಗೆ ಹೇಗೆ ಸಮನಿಸುವದು? ಸಮನಿಸುವುದಿಲ್ಲ.

ಮತ್ತ್ರಂ ಶ್ರುತಿ—

> ಸೋಮಃ ಪ್ರವತೇ ಜನಿತಾ ಮತೀನಾಂ ಜನಿತಾ ದಿವೋ ।
> ಜನಿತಾ ಪೃಥಿವ್ಯಾ ಜನಿತಾಗ್ನೇರ್ಜನಿತಾ ಸೂರ್ಯಸ್ಯ
> ಜನಿತೇಂದ್ರಸ್ಯ ಜನಿತಾಥ ವಿಷ್ಣೋಃ ॥೪॥

ಉಮಾ ವಲ್ಲಭನು ವಾಯುವಿಗೆ ತಂದೆಯು ಬುದ್ಧಿಗಳಿಗೆ ತಂದೆಯು ಆಕಾಶಕ್ಕೆ ತಂದೆಯು ಭೂಮಿಗೂ ತಂದೆಯು ಅಗ್ನಿಗೂ ತಂದೆಯು ಸೂರ್ಯನಿಗೂ ತಂದೆಯು ಇಂದ್ರನಿಗೂ ತಂದೆಯು ವಿಷ್ಣುವಿಗೂ ತಂದೆಯು ವಿಶ್ವಕ್ಕೇ ತಂದೆಯೆಂಬರ್ಥವು.

ರುದ್ರ ಭಾಷ್ಯೇ—

> ಪೃಥಿವ್ಯಾ ಭವ ಅಪಾಂ ಶರ್ವ ಅಗ್ನೇರುದ್ರೋ ವಾಯೋರ್ಭೀಮ
> ಆಕಾಶಸ್ಯ ಮಹಾದೇವಃ ಸೂರ್ಯಸ್ಯೋಗ್ರಶ್ಚಂದ್ರಸ್ಯ ಸೋಮ ಆತ್ಮನಃ
> ಪಶುಪತಿರಿತಿ ಪ್ರತ್ಯೇಕಾಧಿಷ್ಠಿತಾ ಜನಯಿತಾ ಚ ಭವತಿ ॥೫॥

ಭೂಮಿಗೆ ಭವನು ಉದಕಕ್ಕೆ ಈಶ್ವರನು ಅಗ್ನಿಗೆ ರುದ್ರನು ವಾಯುವಿಗೆ ಭೀಮನು ಆಕಾಶಕ್ಕೆ ಮಹಾದೇವನು ಸೂರ್ಯನಿಗೆ ಉಗ್ರನು ಚಂದ್ರನಿಗೆ ಸೋಮನು ಜೀವಾತ್ಮನಿಗೆ ಪಶುಪತಿಯೆಂದು ಹೀಗೆ ಬೇರೆ ಬೇರೆ ಹೆಸರಿನಿಂದ ತಂದೆಯಾಗುತ್ತಿಹನು.

## ವಚನಗಳು

೧

ಅಷ್ಟತನುಮೂರ್ತಿಗಳು ಲಿಂಗವೆಂದೆಂಬರಿ ಇವರಾರೆಂದು
ನಾನರಿಯೆನಯ್ಯಾ
ಆದಿಯ ಮಗನತೀತ ಅತೀತನ ಮಗ ಆಕಾಶ ಆಕಾಶನ ಮಗ ವಾಯು
ವಾಯುವಿನ ಮಗ ಅಗ್ನಿ ಅಗ್ನಿಯ ಮಗ ಅಪ್ಪು ಅಪ್ಪುವಿನ
ಮಗ ಪೃಥಿವಿ
ಪೃಥಿವಿಯ ಮಗ ಸೂರ್ಯ ಸೂರ್ಯನ ಮಗ ಚಂದ್ರ ಚಂದ್ರನ
ಮಗ ದೇಹ

ದೇಹದ ಮಗನಾತ್ಮ ಇಂತೀ ಅಷ್ಟತನುವೆಲ್ಲಕ್ಕೆಯೂ
ಉತ್ಪತ್ತಿಯುಂಟು
ಅಜಾತ ಜನಿತ ನಮ್ಮ ಕೂಡಲಸಂಗಮದೇವಯ್ಯಂಗೆ ಮಾತಾ ಪಿತರಿಲ್ಲ

೨

ಅಷ್ಟತನು ಮೂರ್ತಿ ಲಿಂಗವೆಂದೆಂಬ ಕಷ್ಟದ ಮಾತ ಕೇಳಲಾಗದು
ಪೃಥಿವಿಯಂತೆ ಕಠಿಣವುಳ್ಳಾತನೇ ?
ಅಪ್ಪುವಿನಂತೆ ಓಟಭರಿತವುಳ್ಳಾತನೇ ?
ಅಗ್ನಿಯಂತೆ ತೃಣಕಾಷ್ಠವಿಲ್ಲದಿರ್ದಡೆ ನಂದುವಾತನೇ ?
ವಾಯುವಿನಂತೆ ಚಲನೆಯುಳ್ಳಾತನೇ ?
ಆಕಾಶದಂತೆ ಬಚ್ಚಬರಿಯ ಬಯಲಾದಾತನೇ ?
ಚಂದ್ರ ಸೂರ್ಯರಂತೆ ದಿವರಾತ್ರಿಗಳ ನಡೆಸುವಾತನೇ ?
ಜೀವಾತ್ಮನಂತೆ ಜನನ ಮರಣವುಳ್ಳಾತನೇ ?
ಇದು ಕಾರಣ ಕೂಡಲ ಚೆನ್ನಸಂಗಮದೇವಯ್ಯಾ
ನೀನು ನಿನ್ನಂತೆ ಇವರೆಲ್ಲರೂ ನೀನಿರಿಸಿದಂತೆ

೩

ಪೃಥ್ವಿ ಲಿಂಗವೆಂದು ಹತರಾದರು ಕೆಲವರು
ಅಪ್ಪು ಲಿಂಗವೆಂದು ತಪ್ಪಿದರು ಶಿವನನರಿಯದೆ ಹಲವರು
ತೇಜ ಲಿಂಗವೆಂದು ವಾದಿಸಿ ಕೆಟ್ಟರು ಕೆಲಬರು
ವಾಯು ಲಿಂಗವೆಂದು ಘಾಸಿಯಾದರು ಹಲಬರು
ಅಕಾಶ ಲಿಂಗವೆಂದು ಶೂನ್ಯವಾದಿಗಳಾದರು ಹಲಬರು
ಚಂದ್ರ ಸೂರ್ಯರು ಲಿಂಗವೆಂದು ಭ್ರಮಣೆಯಲ್ಲಿ ತಿರುಗುತಿಪ್ಪರು
ಹಲಬರು
ಆತ್ಮಲಿಂಗವೆಂದು ಎಂಬತ್ನಾಲ್ಕು ಲಕ್ಷ ಜೀವರಾಶಿಗಳ
ಯೋನಿಗಳೊಳಗೆ ಜನಿಸುತಿಪ್ಪರು ಹಲಬರು
ಇಂತೀ ಶಿವನ ಲೀಲಾಸಂಚುವನರಿಯದೆ ಶಿವನು ಜಗತ್ತಿಗೆ
ಮರೆವೆಯನ್ನಿಕ್ಕಿ ಆಡಿಸುವನು

ಜಗತ್ರಿನ ಹುಸಿಯ ವಚನವ ತೊಡೆದು-
ನಿಜಗುರುಲಿಂಗ ಜಂಗಮದ ನಿತ್ಯಪ್ರಸಾದವ ತೋರಿದಾತ-
ಸಂಗನಬಸವಂಣ ಕಾಣಾ ಕಲಿದೇವರ ದೇವಯ್ಯಾ

೪

ಅಷ್ಟತನುಮೂರ್ತಿ ಶಿವನೆಂಬ ಕಷ್ಟಜೀವಿಗಳ ಮಾತ ಕೇಳಲಾಗದು.
ನಾನೇನೆಂಬೆನಯ್ಯಾ ಯುಗ ಜುಗ ಪ್ರಳಯವಾಹಲ್ಲಿ ಧರೆ ಜಲದಲ್ಲಿ ಅಡಗಿತ್ತು
ಜಲ ಅಗ್ನಿಯಲ್ಲಡಗಿತ್ತು ಅಗ್ನಿ ವಾಯುವಿನಲ್ಲಡಗಿತ್ತು
ವಾಯು ಆಕಾಶದಲ್ಲಡಗಿತ್ತು ಆಕಾಶ ಅತೀತನಲ್ಲಡಗಿತ್ತು
ಅತೀತನಾದಿಯೊಳಗಡಗಿತ್ತು ಆದಿ ಅನಾದಿಯೊಳಗಡಗಿತ್ತು
ಅನಾದಿ ನಿಜದೊಳಗಡಗಿತ್ತು ಇಂತೀ ಅಷ್ಟತನುಗಳು
ಒಂದರೊಳಗೊಂದಡಗುವಲ್ಲಿ ಒಂದರಿಂದೊಂದು ಹುಟ್ಟುವಲ್ಲಿ
ಎಂದಳಿದರೆಂಬುದ ಬಲ್ಲರೆ ನೀವು ಹೇಳಿರೇ
ಎಂದು ಹುಟ್ಟಿದರೆಂಬುದ ನೀವು ಬಲ್ಲರೆ ಹೇಳಿರೇ
ಹುಟ್ಟಿದನಳಿದನೆಂಬ ಕಷ್ಟವಚನವ ನುಡಿಯಲಾಗದು
ಇಂತೀ ಅಷ್ಟತನುವೆಲ್ಲವೂ ನಮ್ಮ ಮಹಾಘನಲಿಂಗ
ಹುಲಿಗೆರೆಯ ಸೋಮೇಶ್ವರ ಆಗೆಂದಡಾದವು ಬೇಡೆಂದಡೆ ಮಾದವು

೫

ಅಂಡಜ ಸ್ವೇದಜ ಉದ್ಭಿಜ್ಜ ಜರಾಯುಜವೆಂಬ
ನಾಲ್ಕು ಯೋನಿಗಳಲ್ಲಿ ಬರುತ್ತಿಹ ಅನಂತಕೋಟಿ ಜೀವಿಗಳು
ಸತ್ತುಪಾಪವು ವಿಧಿಯ ತಾಗುವುದೇ ಅಯ್ಯಾ ?
ಕಾನನದೊಳಗೊಂದು ಕಾಡುಗಿಚ್ಚು ಹುಟ್ಟಿ-
ಧಗಿಲು ಭುಗಿಲೆಂದು ಉರಿ ಸುಳಿಗೊಂಡು ಅಟ್ಟಿ ಸುಡುವಲ್ಲಿ-
ಅನಂತಕೋಟಿ ಜೀವಿಗಳು ಸತ್ತಪಾಪವು ಅಗ್ನಿಯ ತಾಗುವುದೇ ಅಯ್ಯಾ ?

ಕಾಳಮೇಘ ಗಗನದಿಂ ಸುರಿಯೆ ಈ ಭೂಮಿ ಜರ್ಝರಿತವಾಗಿ-
ಹಳ್ಳಕೊಳ್ಳ ತೊರೆ ತುಂಬಿ ದಶದಿಕ್ಕುಗಳೆಲ್ಲ ಭರಿತವಾಗಿ-
ನದಿಯೊಲಿದು ಪುರಂಗಳಂ ಹೊಗಲು-
ಅಲ್ಲಿ ಅನಂತ ಕೋಟಿಜೀವ ಸತ್ತಪಾಪವು ಮಳೆಯ
ತಾಗುವುದೇ ಅಯ್ಯಾ ?
ದಶದಿಕ್ಕುಗಳಲ್ಲಿ ಭರಿತವಾಗಿ ಪವನನೊಲಿದು ಬ್ರಹ್ಮಾಂಡವ ಮುಟ್ಟಿ-
ಮಲೆತು ಬೀಸುವಲ್ಲಿ ಅನಂತ ಕೋಟಿಜೀವ ಸತ್ತಪಾಪವು-
ವಾಯುವ ತಾಗುವುದೇ ಅಯ್ಯಾ ?
ಧರೆಹೊತ್ತಿ ಉರಿಯೆ ಬ್ರಹ್ಮಾಂಡವನುರಿತಾಗಲು-
ಕೆಂಡದ ಮಳೆ ಸುರಿಯೆ ಸುರಾಸುರರುಗಳೆಲ್ಲ ಭುಗಿಲೆಂದುರಿದು-
ಸತ್ತ ಅತಿ ವಿಶೇಷವಾದ ಪಾಪವು ಧರೆಯ ತಾಗುವುದೇ ಅಯ್ಯಾ ?
ಪೃಥ್ವಿ ಅಪ್ ತೇಜ ವಾಯು ಆಕಾಶ ಚಂದ್ರ ಸೂರ್ಯ ಆತ್ಮ
ಈ ಅಷ್ಟತನುಮೂರ್ತಿಗಳು ನಷ್ಟವಾಗಿ ಕೆಟ್ಟಪಾಪವು
ಸದಾಶಿವನ ತಾಗುವುದೇ ಅಯ್ಯಾ ?
ಉತ್ಪತ್ತಿ ಸ್ಥಿತಿಲಯ ಕಾಲಕಲ್ಪಿತನಲ್ಲ
ಪ್ರಳಯರಹಿತ ನಮ್ಮ ಕೂಡಲ ಸಂಗಮದೇವರು

## ಸರ್ವಗತನಿರಸನ ಸ್ಥಲ : ೨೮

ಈ ಪ್ರಕಾರದಿಂ ಅಷ್ಟತನುಮೂರ್ತಿಗಳು ಶಿವನಲ್ಲವೆಂಬುದುಂ ಪ್ರತಿಷ್ಠೆಯಂ ಮಾಡಿನುಡಿದವರ್ಗಾಹಾ ಪುರಾತನರು. ಇಂತಹ ಶಿವನಿಂದ ಉತ್ಪತ್ತಿಯಾದ ಸಮಸ್ತ ಜೀವಜಂತುಗಳನ್ನು ಶಿವನೆನ್ನಾಲಾಗದೆಂದು ನುಡಿದ ವಚನಗಳು.

ವಶಿಷ್ಠ ಪುರಾಣೇ—

ಶಿವ ಸರ್ವಪದಾತೀತ ಸರ್ವಸಂಕಲ್ಪನಾತಿಗಃ ।
ಸರ್ವಸಂಕಲ್ಪರಹಿತೋ ನ ಸರ್ವೋ ನ ಚ ಸರ್ವಗಃ ॥೧॥

ಶಿವನು ಸಮಸ್ತವಾದ ವಸ್ತುಗಳನ್ನು ಮೀರಿ ವರ್ತಿಸುವಾತನು ಸಮಸ್ತವಾದ ನೆನಹುಗಳಿಂದ ಬಿಡಲ್ಪಟ್ಟಾತನು ಸಮಸ್ತನೂ ಅಲ್ಲ ಸರ್ವಗತನೂ ಅಲ್ಲ.

ಪರಿಚ್ಛಿನ್ನಃ ಪ್ರಪಂಚೋಽಯಂ ಶಿವಃ ಪರಮವೈಭವಃ ।
ಕಥಂ ನು ಶಕ್ಯತೇ ದ್ರಷ್ಟುಮತ್ರ ವಿಶ್ವಾಧಿಕಃ ಶಿವಃ ॥೨॥

ಈ ಪ್ರಪಂಚವು ಹವಣಿಸಲ್ಪಟ್ಟುದು ಶಿವನಾದರೂ ಉತ್ಕೃಷ್ಟವಾದ ಪರಿಪೂರ್ಣತೆಯುಳ್ಳಾತನು ಲೋಕವನು ಮೀರಿದ ಶಿವನು ಪ್ರಪಂಚದಲ್ಲಿ ಕಾಣಲು ಹೇಗೆ ಶಕ್ತನಹನು.

### ವಚನಗಳು

೧

ಶಿವನಿಂದ ಸಕಲವೂ ಉದಯಿಸಿದವೆಂದಡೆ
ಉದಯಿಸಿದವೆಲ್ಲವೂ ಶಿವನೇ ?
ಸಕಲಬೀಜವ ಬಿತ್ತಿದನೊಕ್ಕಲಿಗನೆಂದರೆ-
ಆ ಬೆಳೆ ತಾನೊಕ್ಕಲಿಗನೇ ?
ಮಡಕೆಯ ಕುಂಬಾರ ಮಾಡುವನೆಂದರೆ-
ಮಡಕೆ ತಾ ಕುಂಬಾರನೇ ?

ಕಬ್ಬುನವ ಕಮ್ಮಾರನು ಮಾಡುವನೆಂದರೆ-
ಆ ಕಬ್ಬುನ ತಾ ಕಮ್ಮಾರನೇ ?
ಈ ಪರಿಯಲ್ಲಿ ಸಕಲ ಜಗತ್ತ ಶಿವಮಾಡಿದನೆಂದರೆ
ಆ ಜಗವೆಲ್ಲವೂ ಶಿವನೇ ?
ಹಾಗಾದರೆ ಅಷ್ಟಾದಶ ವರ್ಣಂಗಳೇಕಾದುವು ?
ಎಂಬತ್ತಾಲ್ಕು ಲಕ್ಷ ಜೀವರಾಶಿಗಳೇಕಾದವು ?
ಸುಖದುಃಖಂಗಳೇಕಾದುವು ? ಸ್ವರ್ಗನರಕಗಳೇಕಾದುವು ? !
ಆಚಾರ ಅನಾಚಾರಗಳೇಕಾದುವು ? ಪುಣ್ಯ ಪಾಪಂಗಳೇ-
ಕಾದುವು ?
ಭವಿಭಕ್ತರೆಂಬ ಭಾವಭೇದಂಗಳೇಕಾದವು ?
ಇದು ಕಾರಣ ಶಿವನಿಂದಾದ ಜಗತ್ತು ಶಿವನಾಜ್ಞೆಯಲಿಪ್ಪುದೆನ್ನದೆ-
ಆ ಸರ್ವವು ಶಿವನೆಂದರೆ ಅಘೋರ ನರಕ ತಪ್ಪದು ಕಾಣಾ-
ಕೂಡಲಚೆನ್ನಸಂಗಮದೇವಾ

೨

ಸರ್ವಗತ ಶಿವನೆಂಬುದೀ ಲೋಕವೆಲ್ಲ
ಶಿವ ಶಿವಾ ನಿರ್ಬುದ್ಧಿ ಮಾನವರನೇನೆಂಬೆನಯ್ಯಾ
ಸರ್ವವೂ ಶಿವನಾದಡೆ ಹಿಂದಣ ಪ್ರಳಯಂಗಳೇಕಾದವು ?
ಸೂತ್ರಧಾರಿ ಸೂತ್ರದ ಹಾಹೆಯ ಹೊರಗಿದ್ದಾಡಿಸುವನಲ್ಲದೇ
ತಾನೊಳಗಿದ್ದಾಡಿಸುವನೇ ?
ಹಾಗೆ ಶಿವನು ತನ್ನಿಂದಾದ ಜಗತ್ತೆಂಬ ಹಾಹೆಯ ಹೊರಗಿದ್ದಾಡಿಸಿದ-
ನೆಂದರೆ ತಾನಾದಿದಾತನೇ ?
ಸರ್ವವವೂ ಶಿವನಾದಡೆ ತೀರ್ಥಕ್ಷೇತ್ರಂಗಳಿಗೆ ಹೋಗಲದೇಕೆ ?
ಇದು ಕಾರಣ ಸರ್ವವೂ ಶಿವನಲ್ಲ
ಸದಾಚಾರಸನ್ನಿಹಿತ ಗುರುಲಿಂಗಜಂಗಮವೇ ಶಿವನಲ್ಲದೆ-
ಮತ್ತುಳಿದವರ ಶಿವನೆಂದರೆ ಅಘೋರ ನರಕ ತಪ್ಪದು ಕಾಣಾ-
ಕೂಡಲ ಚೆನ್ನಸಂಗಮದೇವಾ

೩

"ಅಣೋರಣೀಯಾನ್ ಮಹತೋಮಹೀಯಾನ್" ಎಂಬ ಶ್ರುತಿ ಹುಸಿ
ಶಿವನಿದ್ದ ಠಾವಿಂಗೆ ಪ್ರಳಯವುಂಟೇ
ಸದ್ಭಕ್ತಿ ಸದಾಚಾರವೆಲ್ಲಿಪ್ಪುದು ಅಲ್ಲಿಪ್ಪುದಲ್ಲದೆ
ಮತ್ತೆಲ್ಲಿಯೂ ಇಲ್ಲ ಕಾಣಾ ನಮ್ಮ ಗುಹೇಶ್ವರಲಿಂಗವು

೪

"ಯತ್ರ ಜೀವಸ್ತತ್ರ ಶಿವಃ "ಎಂಬ ಬಾಲಭಾಷೆಯ ಕೇಳಲಾಗದು
ಶಿವಶಿವಾ ಮರಣವೇಕೋ " ಯತ್ರ ಜೀವಸ್ತತ್ರ ಶಿವ" ನಾದಡೆ
ಜನನಸ್ಥಿತಿ ರುಜಸಂಸಾರ ಬಂಧವೇಕೋ
" ಯತ್ರ ಜೀವಸ್ತತ್ರಶಿವ" ನಾದಡೆ
ಪುಣ್ಯ ಪಾಪ ಕಾಲ ಕಲ್ಪಿತಗಳೇಕೋ ?
ಇದುಕಾರಣ "ಯತ್ರ ಜೀವಸ್ತತ್ರ ಶಿವ" ನಲ್ಲ
ಉತ್ಪತ್ತಿ ಸ್ಥಿತಿ ಲಯ ವಿರಹಿತ ನಮ್ಮ
ಕೂಡಲ ಚನ್ನ ಸಂಗಮದೇವ

೫

ಸದ್ಭಕ್ತಿ ಯುಕ್ತಿ ಸದಾಚಾರವೆಲ್ಲಿದ್ದಲ್ಲಿಪ್ಪನಲ್ಲದೆ
ಮತ್ತೆಲ್ಲಿಯೂ ಇಲ್ಲ ಕಾಣಿಭೋ-
ಒಂದೆರಡಹುದೇ ? ಎರಡೊಂದಹುದೇ ?
ಶಿವನು ತನ್ನಲೀಲೆಯ ನಿಮಿತ್ತವಾಗಿ ಮಾಯಾನಿರ್ಮಿತವ ಮಾಡಿ
ಆ ಮಾಯಾರಚನೆಯಿಂದಾದ ಬ್ರಹ್ಮಾಂಡಸಂದೋಹ
ಹರಿ ವಿರಿಂಚಿ ಸುರಪತಿ ಸುರರು ನರನಿಕರ
ಖಗಮೃಗ ಜೀವರಾಶಿಗಳೆಲ್ಲವು
ಶಿವನಿಂದಲಾಗಿ ಶಿವನಿಂದ ಹೊರಯಿಸಿಕೊಂಡು
ಶಿವನಿಂದ ಹೋದವೆಂದಡೆ
ಅವರ ಆಗುಹೋಗಿನೊಳಗೆಲ್ಲಿಯ ಗಮನಸ್ಥಿತಿ ಶಿವಗುಂಟೇ ?
ಇಲ್ಲವಾಗಿ

ಗಗನದೊಳು ತೋರಿದ ಮೇಘ ಗಗನದಲಡಗಿದವೆಂದರೆ
ಆ ಗಗನ ತಾ ಮೇಘವೇ ? ಅಲ್ಲವಾಗಿ
ತನ್ನ ಧೀನ ಶಕ್ತಿದಂಡದಿಂದ ಕುಂಬಾರನು ಚಕ್ರವ ತಿರುಗಿಸಲು
ಆ ಚಕ್ರಭ್ರಮಣ ಚೈತನ್ಯವು ತನ್ನಲ್ಲಡಗುವದೇ ? ಇಲ್ಲವಾಗಿ
ಬಿಲ್ಲನಾರಿಗೆ ಅಂಬು ಸಂಧಾನಿಸಿ ಯಸೆಯಲು ಆ ಅಂಬು
ಹರಿವ ಚೈತನ್ಯವು
ಆ ಬಿಲ್ಲುಗಾರನದೇ ? ಅಲ್ಲವಾಗಿ
ಇಂತಿವೆಲ್ಲವು ಆ ಚೈತನ್ಯಂಗಳು ಅಂತು ಸರ್ವವೂ
ತೋರಿ ಅಡಗುವವು
ಸರ್ವೇಶ್ವರ ಸರ್ವಕೃತಚೈತನ್ಯವು ಸೂತ್ರಯಂತ್ರವಾಹಕ ಶಿವನು
ಸರ್ವಲಯ ಗಮನಸ್ಥಿತಿ ತನಗುಂಟೆ ?
ಗಗನದ ರವಿಕಿರಣದಿಂದ ಸಕಲ ರೂಪಿತ ದ್ರವ್ಯ ಪದಾರ್ಥಂಗಳಲ್ಲ
ಪ್ರತಿಭೆತೋರಲು ಆ ಪ್ರತಿಭೆಯಾಗು ಹೋಗಿನ ಸ್ಥಿತಿ
ಆ ಗಗನದ ಸೂರ್ಯನಿಗುಂಟೇ ? ಇಲ್ಲವಾಗಿ
ಈ ಪರಿಯಲ್ಲಿ ವಿಶ್ವವೆಲ್ಲಕ್ಕೆಯೂ ತಾನಲ್ಲದೆ ತಾನಿಲ್ಲದ ಆಡಿಸುವ-
ಸೂತ್ರಾತ್ಮಕನಲ್ಲದೆ ಅವರ ಆಗು ಹೋಗು ತನಗುಂಟೇ ?

ಯಜುರ್ವೇದೇ—

**ಓಂ ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಸ್ಪಾತ್**
**ಸ ಬಾಹುಭ್ಯಾಮಿತಿ ಸಂಪದಸ್ತ್ರೈದ್ಯಾವಾಭೂಮೀಜನಯನ್ದೇವ ಏಕ ಏವ ॥**
**ಓಂ ಈಶಾನಃ ಶಿವ ಏಕೋ ದೇವಃ ಶಿವಂಕರಃ ಸರ್ವಮನ್ಯತ್ ಪರಿತ್ಯಜೇತ್॥**
**ನ ಯಥಾ ಕೂರ್ಮರೋಮಾಣಿ ನ ಶೃಂಗಂ ನರಮಸ್ತಕೇ ।**
**ನ ಯಥಾಸ್ತಿ ವಿಯತ್ಪುಷ್ಪಂ ನ ತಥಾಸ್ತಿ ಹರಾತ್ ಪರಃ ॥**

ಎಂದುದಾಗಿ ಇದನರಿತು ಬಸವಪ್ರಿಯ
ಕೂಡಲ ಚೆನ್ನಸಂಗಯ್ಯನನೇ-
ಧ್ಯಾನಿಸಿ ಪೂಜಿಸಿ ನಿರೀಕ್ಷಿಸಿ ಜಪಿಸಿ ಕೃತಾರ್ಥರಾಗಿರೇ
ಮರಳು ವಿಪ್ರರಿರಾ

ಈ ಪ್ರಕಾರದಿಂ ಜೀವಂಗಳೆಲ್ಲವು ಶಿವನಲ್ಲವೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಇಂತಹ ಶಿವನಿಂದಲಾದ ಸಮಸ್ತ ವಿದ್ಯೆಗಳನರಿದಾತನೂ ಶಿವಭಕ್ತಂಗೆ ಸಮವಲ್ಲವೆಂದು ನುಡಿದ ವಚನಗಳು.

ಶಿವಧರ್ಮ ಪುರಾಣೇ—

ಮಾರಣೋಚ್ಚಾಟನೇ ಚೈವ ಮೋಹನ ಸ್ತಂಭನೇ ತಥಾ ।
ದ್ವೇಷಣಾಕರ್ಷಣೇ ಚೈವ ಷಟ್ಕಂ ಕ್ಷುದ್ರಮಿತಿ ಸ್ಮೃತಮ್ ॥೧॥

ಮಾರಣ ಉಚ್ಚಾಟನ ಮೋಹನ ಸ್ತಂಭನ ವಿದ್ವೇಷಣ ಆಕರ್ಷಣ ಗಳೆಂಬ ಆರು ಕ್ಷುದ್ರಗಳೆಂದು ಹೇಳಲ್ಪಟ್ಟಹುದು. ಇಂತಿವ ಬಿಟ್ಟಲ್ಲದೆ ಲಿಂಗಸಾಹಿತ್ಯವ ಮಾಡಲಾಗದು.

ಜ್ವರಾದಿ ಸರ್ವರೋಗಾಣಾಂ ಮಂತ್ರ ತಂತ್ರ ಪ್ರತಿಕ್ರಿಯಾಃ ।
ಭೂತ ಪ್ರೇತ ಪಿಶಾಚಾನಾಂ ಕ್ಷುದ್ರಾಶ್ಚ ಬ್ರಹ್ಮರಕ್ಷಸಾಮ್ ॥೨॥

ಜ್ವರ ಮೊದಲಾದ ಎಲ್ಲ ರೋಗಗಳಿಗೆಯೂ ಭೂತ-ಪ್ರೇತ-ಪಿಶಾಚ ಗಳಿಗೂ ಬ್ರಹ್ಮರಾಕ್ಷಸರಿಗೂ ಮಾಡಲ್ಪಡುವ ಮಂತ್ರತಂತ್ರ ಪ್ರತೀಕಾರ ಕ್ರಿಯೆಗಳು ಕ್ಷುದ್ರಕರ್ಮಗಳೆನಿಸುವುವು. ಇವಂ ಬಿಟ್ಟಲ್ಲದೆ ಲಿಂಗಧಾರಣ ವಾಗದು.

ಲೈಂಗೇ—

ಅಕ್ಷದ್ಯೂತ ವಿನೋದಾಶ್ಚ ನೃತ್ಯಗೀತೇಷು ಮೋಹನಂ ।
ಅಪಶಬ್ದ ಪ್ರಯೋಗಶ್ಚ ಜ್ಞಾನಹೀನಸ್ಯ ಕಾರಣಮ್ ॥೩॥

ಜೂಜು ಬೇಂಟೆ ಮೊದಲಾದ ವಿನೋದಗಳೂ ನೃತ್ಯಗೀತಗಳಲ್ಲಿ ಮೋಹವೂ ಅಪಶಬ್ದಗಳ ಪ್ರಸಂಗಗಳೂ ಜ್ಞಾನವಿಲ್ಲದ ಅವಿಚಾರಗಳಿಗೆ ಕಾರಣವಲ್ಲದೆ ಲಿಂಗಾ ಸಾಹಿತ್ಯವಾದೆನೆಂಬಾತನು ಇಷ್ಟುಬಿಟ್ಟಲ್ಲದೆ ಆಗದು: ಬರ್ಹವು.

ವಶ್ಯಾಕರ್ಷಣ ವಿದ್ವೇಷ ಸ್ತಂಭೋಚ್ಚಾಟನಕಾನಿ ಚ ।
ಅಭಿಚಾರ ಕ್ರಿಯಾ ಚಾಪಿ ಜ್ಞಾನಹೀನಸ್ಯ ಕಾರಣಮ್ ॥೪॥

ವಶ್ಯ ಆಕರ್ಷಣ ವಿದ್ವೇಷಣ ಸ್ತಂಭನ ಉಚ್ಚಾಟನ ಅಭಿಚಾರಕ್ರಿಯೆಗಳು ಜ್ಞಾನವಿಲ್ಲದ ಮನುಷ್ಯರಿಗಲ್ಲದೆ ಶಿವಭಕ್ತನಾದೆನೆಂಬಾತಂಗೆ ಇವ ಬಿಟ್ಟಲ್ಲದೆ ಆಗದೆಂಬುದರ್ಥವು.

ವೀರಾಗಮೇ—

ಕಂದಭಕ್ಷೀ ದಲಂ ಭಕ್ಷೀ ವಾಯು ಭಕ್ಷಸ್ತು ನಗ್ನಕಃ
ಕಾಲ ಕರ್ಮವಿದೂರಸ್ಥಃ ಸಿದ್ಧಯೋಗ ಪರಾಯಣಃ ॥೨॥
ವಾಯುವೇಗ ಮನೋವೇಗ ಇತಿ ವಿದ್ಯಾಸಮರ್ಥನಾಮ್ ।
ಪ್ರಾಣಲಿಂಗವ್ರತಂ ನಾಸ್ತಿ ವೀರಶೈವಾಗಮೇ ಸ್ಥಿತಃ ॥೬॥

ಗೆಣಸುಗಳ ಮೆದ್ದು ಜೀವಿಸುವುದು ತರಗತಿಯ ಮೆದ್ದು ಜೀವಿಸುವುದು ವಾಯು ಭಕ್ಷಣೆಯ ಕೊಂಬುದು ದಿಗಂಬರವನಾಚರಿಸುವದು ಕಾಲ ಕರ್ಮಂಗಳನು ದೂರವ ಮಾಡಿ ನಡೆದನೆಂದೆಡೆಯೂ ಸಿದ್ಧಯೋಗದಲ್ಲಿ ತತ್ಪರನಾದಡೆಯೂ ವಾಯುವೇಗ ಮನೋವೇಗ ದೂರದೃಷ್ಟಿ ದೂರ ಶ್ರವಣವೆಂಬ ಮಹಾವಿದ್ಯಾಸಮರ್ಥಿಕೆಗಳುಳ್ಳವರಿಯೂ ಪ್ರಾಣಲಿಂಗತತ್ಪರರಾಗತಕ್ಕ ವ್ರತವು ಸಲ್ಲದೆಂದು ವೀರಶೈವಾಗಮದಲ್ಲಿ ಹೇಳಿರುವದು.

ಶಿವರಹಸ್ಯೇ—

ವೇದಾಭ್ಯಾಸೀ ಕ್ರಿಯಾಭ್ಯಾಸೀ ಯೋಗಾಭ್ಯಾಸೀ ಚ ಪಾರ್ವತಿ ।
ಪ್ರಾಣಲಿಂಗಾರ್ಚನಾಭ್ಯಾಸೀ ತ್ರೈಲೋಕ್ಯವಿಜಯೀ ಭವೇತ್ ॥೭॥

ವೇದವಬಲ್ಲಾತನು ಕ್ರಿಯೆಯ ಬಲ್ಲಾತನು ಯೋಗವಬಲ್ಲಾತನು ಇವರುಗಳು ಮಾಡಿದ ಪುಣ್ಯಕ್ಕಿಂತಲೂ ಪ್ರಾಣಲಿಂಗಾರ್ಚಕನೊಬ್ಬನೇ ಮೂರು ಲೋಕದಲ್ಲಿ ವಿಜಯನಾಗುತ್ತಿಹನು.

ಶಿವಧರ್ಮೋತ್ತರೇ—

ವೇದಶಾಸ್ತ್ರವತಾಂ ಪುಂಸಾಂ ಭಾಷಣಂ ಲೋಕಭೂಷಣಮ್ ।
ಪ್ರಾಣಲಿಂಗವತಾಂ ಪುಂಸಾಂ ಭಾಷಣಂ ಮೋಕ್ಷಭೂಷಣಮ್ ॥೮॥

ವೇದಶಾಸ್ತ್ರಂಗಳಂ ಬಲ್ಲವರುಗಳ ಸಂಭಾಷಣವು ಲೋಕಭೂಷಣವು ಪ್ರಾಣಲಿಂಗಿಗಳಾದ ಪುರುಷರ ಸಂಭಾಷಣೆಯು ಮೋಕ್ಷಕ್ಕೆ ಭೂಷಣವು.

ಶಿವಭಕ್ತಿವಿಹೀನಾನಾಂ ದರ್ಶನಂ ಯಮದರ್ಶನಮ್ ।
ಶಿವಭಕ್ತಿಮತಾಂ ಪುಂಸಾಂ ದರ್ಶನಂ ಶಿವದರ್ಶನಮ್ ॥೯॥

ಶಿವಭಕ್ತಿಯಲ್ಲಿ ತಾತ್ಪರ್ಯವಿಲ್ಲದವರುಗಳ ದರ್ಶನವೆಂಬುದು ಯಮದರ್ಶನದೋಪಾದಿ ಶಿವಭಕ್ತಿಯುಳ್ಳ ಶಿವಶರಣರ ದರ್ಶನವೆಂಬುದೇ ಶಿವನಕಂಡೋಪಾದಿಯೆಂದದಿರುವುದು.

## ವಚನಗಳು

೧

ಅಕ್ಷರ ಗಣಿತ ಗಂಧರ್ವ ಜ್ಯೋತಿಷ ಆತ್ಮವಿದ್ಯೆ ತರ್ಕ ವ್ಯಾಕರಣ
ಅಮರಸಿಂಹ ಛಂದಸ್ಸು ನಿಘಂಟು ಶಾಲಿಗೋತ್ರ ಗ್ರಹವಾದ ಗಾರುಡ
ದ್ಯೂತ ವೈದಿಕಶಾಸ್ತ್ರ ಸಾಮುದ್ರಿಕ ಶಾಸ್ತ್ರ ಲಕ್ಷಣಶಾಸ್ತ್ರ ಅಶ್ವಶಿಕ್ಷೆ
ಗಜ ಶಿಕ್ಷೆ ಗೋಕರ್ಣ ದಾಡಾಬಂಧ ಮೂಲಿಕಾಸಿದ್ಧಿ ಭೂಚರತ್ವ
ಖೇಚರತ್ವ ಅತೀತ ಅನಾಗತ ವರ್ತಮಾನ ಸ್ಥೂಲ ಸೂಕ್ಷ್ಮ
ಇಂದ್ರುಜಾಲ ಮಹೇಂದ್ರುಜಾಲ ವಡ್ಯಾನಚೇಷ್ಟೆ ಪರಕಾಯಪ್ರವೇಶ
ದೂರದೃಷ್ಟಿ ದೂರಶ್ರವಣ ಋಗ್ಯಜುಃ ಸಾಮಾಥರ್ವಣ ಶ್ರುತಿ ಸ್ಮೃತಿ
ಆಯುರ್ದಾಯ ನಷ್ಟಿಕಾಮುಷ್ಟಿ ಚಿಂತನೆ ಚೋರವಿದ್ಯೆ
ಅಮೃತೋದಯ
ಭಾಷಾಪರೀಕ್ಷೆ ವೀಣಾವಿದ್ಯೆ ಭೃಂಗಿವಿದ್ಯೆ ಮಲ್ಲವಿದ್ಯೆ ಶಸ್ತ್ರವಿದ್ಯೆ
ಧನುರ್ವಿದ್ಯೆ ಅಗ್ನಿಸ್ತಂಭ ಜಲಸ್ತಂಭ ವಾಯುಸ್ತಂಭ ವಾದ
ವಶ್ಯ ಅಂಜನಾಸಿದ್ಧಿ ಘುಟಿಕಾಸಿದ್ಧಿ ಮಂತ್ರತಂತ್ರಸಿದ್ಧಿ
ಇವೆಲ್ಲವ ಕಲಿತಡೇನು ಅರುವತ್ನಾಲ್ಕು ವಿದ್ಯಾಪ್ರವೀಣನೆನಿಸಿ
ಕೊಂಬನಲ್ಲದೆ
ಲಿಂಗವಂತನೆನಿಸಿಕೊಂಬುದಿಲ್ಲ ಲಿಂಗವುಳ್ಳ ಶಿವಭಕ್ತಂಗೆ
ಇವರೆಲ್ಲರೂ ಕೂಡಿ ಸರಿಬಾರರೆಂದ ನಮ್ಮ ಕಲಿದೇವರ ದೇವನು

೨

ವೇದ ಶಾಸ್ತ್ರ ಪುರಾಣಾಗಮಗ್ರಂಥಂಗಳನೋದಿದವರನೆಲ್ಲರನೂ
ಹಿರಿಯರೆಂಬೆನೇ ಅಲ್ಲಲ್ಲ ನಿಲ್ಲು ನಿಲ್ಲು ಅವರೇ ಹಿರಿಯರಾದಡೆ
ನಟ್ಟುವ ಪಾಣ ಗಣಿಯಾಟ ಮಿಣಿಯಾಟ ಅದೃಶ್ಯಕರಣ ಅಗ್ನಿಸ್ತಂಭ
ಕನ್ಯಾವಾದ ಆಕರ್ಷಣ ಮೊದಲಾದ ಅರುವತ್ನಾಲ್ಕು ವಿದ್ಯೆಗಳ
ಸಾಧಿಸಿದ ಡೊಂಬನೇನು ಕಿರಿಯನೇ
ಇದು ಹಿರಿದು ಕಿರಿದಿನ ಪರಿಯಲ್ಲ ಹಿರಿದು ಕಿರಿದಿನ ಪರಿ
ಬೇರೆ ಕಾಣಿರಣ್ಣಾ
ಅದು ಉದರ ಪೋಷಣಾರ್ಥ ವಿದ್ಯೆಯೆನಿಸುವುದು
ಅವರನೆಂತು ಸರಿಯೆಂಬೆನಯ್ಯಾ ಲಿಂಗವಂತಂಗೆ ಇದುಕಾರಣ-
ಗುಣ ಜ್ಞಾನ ಧರ್ಮ ಆಚಾರ ಶೀಲ ಗುರು ಲಿಂಗ ಜಂಗಮ
ಪಾದತೀರ್ಥ ಪ್ರಸಾದವ
ಸಾಧಿಸಿದಾತನೇ ಹಿರಿಯ ಕಾಣಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

೩

ಗೀತವ ಹಾಡಿದಡೇನು ಶಾಸ್ತ್ರಪುರಾಣಾಗಮವ ಹೇಳಿದಡೇನು
ವೇದವ ನೋದಿದಡೇನು ಮನವೊಲಿದು ಲಿಂಗವ ಪೂಜಿಸದವರು-
ಏತಕ್ಕೆ ಬಾತೆಯಯ್ಯಾ ಎಲ್ಲರಲ್ಲಿ ಪ್ರಾಜ್ಞನಾದಡೇನು
ಭಕ್ತಿಯಿಲ್ಲದವರನೊಲ್ಲ ನಮ್ಮ ಕೂಡಲಸಂಗಮದೇವರು

೪

ವೇದಪಾಠಕ ಶಾಸ್ತ್ರವಿತ್ತು ಪುರಾಣ ಬಹುಶ್ರುತಿವಂತ ವಾದಿ ಚಾಳಕ
ಆಡಂಬರ ಭೇದಕ ಸಂಸ್ಕೃತ ಪ್ರಾಕೃತ ಅಪಭ್ರಂಶ ದೇಶಿ
ಇವರು ಮೊದಲಾದ ವಾಚಕ ಚಾರ್ವಾಕ
ಮುಖಂಗಳಿಂದ ಹೋರುವ
ಮಾಯಾವಾದದ ತೆರನಲ್ಲ
ಮೂಲಿಕಾ ಸಿದ್ಧಿ ರಸಸಿದ್ಧಿ ಅದೃಶ್ಯಕರಣ ಕಾಯಸಿದ್ಧಿ
ಇಂತೀ ಕುಟಿಲಂಗಳ ತೆರಕ್ಕೆ ಅಗೋಚರ ಅಪ್ರಮಾಣ
ಅಂಗ ಲಿಂಗ ಸಂಬಂಧವಾದ ಶರಣನ ಇರವು ಎಂತೆಂದಡೆ

ಶಬ್ದ ಹತ್ತದ ಅಲೇಖದಂತೆ ಅನಿಲ ಮುಟ್ಟದ ಪುಷ್ಪದಂತೆ-
ಶ್ರುತಿ ಮುಟ್ಟದ ಕಡ್ಡಿಯಂತೆ ಕೈ ಮುಟ್ಟದ ಗತಿಯಂತೆ-
ನೈ ಮುಟ್ಟದ ನಾಲಿಗೆಯಂತೆ ಪವನ ಮುಟ್ಟದ ಪರ್ಣದಂತೆ-
ಭಾವ ಭ್ರಮೆಯೊಳಗಿದ್ದೂ ಇಲ್ಲದ ಶರಣನ ಇರವು
ಸದಾಶಿವ ಮೂರ್ತಿ ಲಿಂಗದಂಗವು ತಾನೆ

೫

ಲಿಂಗವನರಿತು ಲಿಂಗಾಚರ್ನೆಯ ಮಾಡಿ
ಗುರುಲಿಂಗಜಂಗಮಕ್ಕೆ ತನು-ಮನ-ಧನವ ಸವೆಸಿ
ಲಿಂಗವಲ್ಲದನ್ಯವ-ನರಿಯದಿರ್ಪ ಮಹಾ ಮಹಿಮನ ನಿಲವು
ಸರ್ವಾಂಗ ಲಿಂಗಮೂರ್ತಿ ಆತನ ನುಡಿಯೇ ವೇದ
ನಡೆಯೇ ಆಗಮ ಮಾಡಿತ್ತೇ ಶಾಸ್ತ್ರ ಹೇಳಿದ್ದೇ ಪುರಾಣ
ಆತನಿಪ್ಪುದೇ ದೇವಲೋಕ ಆತನ ದರ್ಶನ
ಸ್ಪರ್ಶನದಿಂದ ಪಾಪಕ್ಷಯ
ಆತನ ಪಾದತೀರ್ಥಪ್ರಸಾದದಿಂದ ದೇವದಾನವ
ಮಾನವರೆಲ್ಲರೂ ಜೀವನ್ಮುಕ್ತರು
ಆ ಮಹಾ ಮಹಿಮನ ಶ್ರುತ ದೃಷ್ಟಾನು ಮಾನದಿಂದ
ವಿಚಾರಿಸಿ ನೋಡಿದರೆ
ಬಸವರಾಜ ದೇವರು ಮೊದಲಾದ ಪುರಾತನರ
ಚಾರಿತ್ರವು ಹೀಗಲ್ಲದೆ
ಲಿಂಗವನರಿಯದೆ ಲಿಂಗಾರ್ಚನೆಯ ಮಾಡದೆ
ಗುರು ಲಿಂಗ ಜಂಗಮಕ್ಕೆ ತನು-ಮನ-ಧನವ ಸವಿಸದೆ
ಇನ್ನೂ ಆವನಾನೊಬ್ಬನು ವೇದಾದಿ ಅಷ್ಟಾದಶ ಪುರಾಣಂಗಳನೋದಿ
ಹೇಳಿ ಕೇಳಿದಡೇನೋ ಗಿಳಿಯೋದಿನಂತೆ-
ಸರ್ವಸಂಗ ಪರಿತ್ಯಾಗವ ಮಾಡಿ ಅರಣ್ಯದಲ್ಲಿ ಚರಿಸಿದಡೇನೋ
ವನಚರ ವ್ಯಾಧರುಗಳಂತೆ-
ಅತನವ ಬಿಟ್ಟರೇನೋ ಪರಾಕಿಯಂತೆ
ವಿಷಯವ ಬಿಟ್ಟರೇನೋ ಅಶಕ್ತ ನಪುಂಸಕನಂತೆ

ನಿದ್ರೆಯ ಬಿಟ್ಟರೇನೋ ಜಾರ ಚೋರರಂತೆ-
ಸಾಮರ್ಥ್ಯಪುರುಷನೆಂದು ಖೇಚರತ್ವದಲ್ಲಿ ಬಂದರೇನೋ ಪಕ್ಷಿಯಂತೆ
ಜಲದಲ್ಲಿ ಚರಿಸಿದಡೇನು ಮತ್ಸ್ಯಾದಿಗಳಂತೆ
ಭೂ ಪ್ರದಕ್ಷಣ ಬಂದಡೇನು ಮೃಗಾದಿಗಳಂತೆ
ದಾನಾದಿಗಳ ಕೊಟ್ಟರೇನು ಕ್ಷತ್ರಿಯರಂತೆ ಅದೆಂತೆಂದಡೆ-

> ಪಯೋಹಾರೇ ತು ಮಾರ್ಜಾಲಃ ನಗ್ನೋ ಮುಂಗ್ಧಃ ಪಿಶಾಚವತ್ ।
> ನಿತ್ಯಸ್ನಾಯೀ ಚ ಕಾಕಸ್ತು ವಾಲ್ಮೀಕೀ ಸರ್ಪಜಾತಯಃ ॥
> ತೃಣಂ ಭಕ್ಷ್ಯಂತಿ ಪಶವಃ ವನವಾಸೀ ಮೃಗಸ್ತಥಾ ।
> ಯೇನ ಚೈತಾನಿ ಕಾರ್ಯಾಣಿ ನ ಕರೋತಿ ಹಿ ಪಾರ್ವತಿ ॥

ಎಂದುದಾಗಿ ಆವ ಸಿದ್ಧಿಗಳಿಂದಲೂ ಫಲವಿಲ್ಲ
ಇಂತು ಏನನೋದಿ ಏನ ಕೇಳಿ ಏನ ಹೇಳಿಯೂ ಫಲವಿಲ್ಲ
ಇವು ಭಕ್ತಿಯೊಳರಲ್ಲಿ ಮುಕ್ತಿಗೆ ಸಲ್ಲವು
ಇದನರಿದು ಆವನಾನೊಬ್ಬನು ಲಿಂಗವನರಿತು
ಲಿಂಗಾರ್ಚನೆಯಂ ಮಾಡಿ
ಗುರಲಿಂಗಜಂಗಮಕ್ಕೆ ತನು-ಮನ-ಧನವ ಸವಿಸಿದಡೆ
ಅದೇ ಚಲ್ವ ಭಕ್ತಿ ಅದೇ ಚಲ್ವಮುಕ್ತಿ ಅದೇ ಸರ್ವಸಿದ್ಧಿ
ಅದೇ ಸರ್ವಕಾರಣವಯ್ಯಾ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ

## ಕರ್ಮವಾದ ನಿರಸನ ಸ್ಥಲ: ೩೦

ಈ ಪ್ರಕಾರದಿಃ ಅರುವತ್ತುನಾಲ್ಕು ಕಲಾವಿದ್ಯೆಗಳ ಕಲಿತಾತನು ಲಿಂಗಭಕ್ತಂಗೆ ಸರಿಯಲ್ಲವೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು. ಇಂತಹ ಶಿವನಿಂದಾದ ತೀರ್ಥಯಾತ್ರೆ ಜಪತಪ ನಿತ್ಯ ಕರ್ಮಂಗಳ ಮಾಡುವಾತ ಲಿಂಗಭಕ್ತಂಗೆ ಸರಿಯಲ್ಲವೆಂದು ನುಡಿದ ವಚನಂಗಳು.

ಶಿವಧರ್ಮೇ—

ವ್ರತಾನಿ ಸರ್ವಕರ್ಮಾಣಿ ತಪಾಂಸಿ ನಿಯಮಸ್ತಥಾ ।
ಕಥಿತಾ ವಿಫಲಾಃ ಸದ್ಭಿರ್ಭಕ್ತಿರೇಕೈವ ಮುಕ್ತಿದಾ ॥೧॥

ವ್ರತಂಗಳು ಎಲ್ಲ ಕರ್ಮಂಗಳು ತಪಂಗಳು ನಿಯಮಂಗಳು ಇವೆಲ್ಲ ವುಗಳು ಫಲವಿಲ್ಲದವು. ಮುಕ್ತಿಗೆ ಶಿವಭಕ್ತಿಯೇ ಕಾರಣವೆಂದು ಆದ್ಯರು ಪೇಳ್ದರು.

ಚಾಂದ್ರಾಯಣಸಹಸ್ರಂ ಚ ಪ್ರಾಜಾಪತ್ಯಂಶತಂ ತಥಾ ।
ಮಾಸೋಪವಾಸಲಕ್ಷಂ ಚ ಶಿವಭಕ್ತಿಸಮಂ ನ ಹಿ ॥೨॥

ಸಾವಿರ ಚಾಂದ್ರಾಯಣವನಾಚರಿಸಿದರೂ ಪ್ರಾಜಾಪತ್ಯವ ನೂರ ನಿತ್ತಡೆಯೂ ಮಾಸೋಪವಾಸವ ಲಕ್ಷ ಮಾಡಿದಡೆಯೂ ಶಿವಭಕ್ತಿಗೆ ಸರಿಬಾರದು.

ಶಿವಧರ್ಮೋತ್ತರೇ—

ತೀರ್ಥಯಾತ್ರಾ ಬಹುವಿಧಾ ಯಜ್ಞಾಶ್ಚ ವಿವಿಧಾಃ ಕೃತಾಃ ।
ತೇಷಾಂ ಜನ್ಮಸಹಸ್ರೇಷು ಿನಾ ಭಕ್ತಿಂ ನ ಸ್ವೈ ಗತಿಃ ॥೩॥

ಆವಾತನಾದಡೊಬ್ಬನು ಸಹಸ್ರ ಜನ್ಮಂಗಳಲ್ಲಿ ತೀರ್ಥಯಾತ್ರೆಗಳನು ಹಲವಂ ಮಾಡಿದಲ್ಲಿಯೂ ಯಜ್ಞಂಗಳ ಹಲವ ಮಾಡಿದಲ್ಲಿಯೂ ಶಿವಭಕ್ತಿ ಯಿಲ್ಲದೆ ಮೋಕ್ಷವಿಲ್ಲವು.

ಮಮ ಭಕ್ತಿಂ ಸದಾ ಕುರ್ಯಾದ್ಭವಪಾಶವಿಮೋಚನೀಮ್ ॥
ಭಕ್ತಿಗಮ್ಯಸ್ತ್ವಹಂ ವತ್ಸ ಮಮ ಯೋಗೋ ಹಿ ದುರ್ಲಭಃ ॥೪॥

ಶಿವಭಕ್ತಿಯನ್ನು ನಿತ್ಯ ನಿಯಮವಾಗಿ ಮಾಡುವದು ಭವಪಾಶ ಚ್ಛೇದನವಹುದು ಭಕ್ತಿಮಾರ್ಗದಲ್ಲಿಯೇ ಶಿವನು ಸುಲಭನು ಶಿವಯೋಗವು ಅಪೂರ್ವವು.

ಸೌರಸಂಹಿತಾಯಾಮ್—

ಅಭಕ್ತ್ಯಾ ಮಾನವಾಶ್ಚಾಸ್ಮಿನ್ಲೋಕೇ ಗಿರಿಗುಹಾಸು ಚ ।
ತಪಂತಿ ಚಾತ್ಮಬೋಧಾರ್ಥಂ ಭಕ್ತಿಭಾವೇನ ಮುಚ್ಯತೇ ॥೫॥

ಶಿವನಲ್ಲಿ ಭಕ್ತಿಯಂ ಮಾಡದೇ ಗಿರಿಗಹ್ವರಗಳಲ್ಲಿ ಆತ್ಮಬೋಧೆ ಗೋಸುಗ ತಪವ ಮಾಡುವರು ಅಲ್ಲಿ ಫಲವಿಲ್ಲ ಶಿವಭಕ್ತಿಯಲ್ಲಿಲ್ಲದೆ ಮುಕ್ತಿಯಿಲ್ಲ.

ಬ್ರಹ್ಮಗೀತೆಯಲ್ಲಿ—

ನಾಹಂ ಪ್ರಸನ್ನಸ್ತಪಸಾ ನ ದಾನೇನ ನ ಚೇಜ್ಯಯಾ ।
ತುಷ್ಟೋಽಹಂ ಭಕ್ತಿಲೇಶೇನ ನ ದಾಸ್ಯಾಮಿ ಪರಮಂ ಪದಂ ॥೬॥

ಎಲೈ ಪಾರ್ವತಿಯೇ ನಾನು ತಪಸ್ಸಿಗೆ ದಾನ ಯಜ್ಞಾದಿಗಳಿಗೆ ಪ್ರಸನ್ನನಾಗೆನು ನನ್ನಲ್ಲಿಯ ಭಕ್ತಿಮಾತ್ರಕ್ಕೆ ನಿಮಿಷದಲ್ಲಿ ವರವನೀವೆನು.

ನ ಕರ್ಮಣಾ ನ ತಪಸಾ ನ ಜಪೈರ್ನ ಸಮಾಧಿಭಿಃ ।
ನ ಜ್ಞಾನೇನ ನ ದಾನೇನ ವಶ್ಯೋಽಹಂ ಶ್ರದ್ಧಯಾ ವಿನಾ ॥೭॥

ಆವ ಪೂಜೆಯ ಮಾಡಿದಡೆಯೂ ಆವ ಜಪ-ತಪ ಸಮಾಧಿಗಳಿಂದಲೂ ಆವ ಜ್ಞಾನವನರಿದಡೆಯೂ ಆವ ದಾನವ ಮಾಡಿದಡೆಯೂ ನಿಷ್ಫಲವಲ್ಲದೆ ಶ್ರದ್ಧೆಯ ಹೊರತಾಗಿ ಶಿವನೊಲಿಯನೆಂಬುದು ಶಿವನ ವಾಕ್ಯವು.

ಉಪಮನ್ಯು ಉವಾಚ—

ನ ಕೃತ್ವಾಪಿ ಸುಮಹತ್ಪುಣ್ಯಂ ಇಷ್ಟ್ವಾ ಯಜ್ಞಶತೈರಪಿ ।
ನ ತತ್ಫಲಮವಾಪ್ನೋತಿ ಭಕ್ತಿಹೀನೋ ಯದೀಶ್ವರೇ ॥೮॥

ಪುಣ್ಯವಂ ಮಾಡಿ ನೂರು ಯಜ್ಞಂಗಳಂ ಮಾಡಿದಡೆಯೂ ಶಿವಭಕ್ತಿ ಇಲ್ಲದಿರೆ ನಿಷ್ಫಲವು. ಇದು ಕಾರಣ ಆವನಿಗಾದರೆಯೂ ಶಿವಭಕ್ತಿಯೇ ಬೇಕು.

ಯಜ್ಞಕೋಟಿಸ್ತಪಃಕೋಟಿಸ್ತೀರ್ಥಕೋಟಿಶ್ಚ ನಿಷ್ಫಲಂ ।
ಪ್ರಾಣಲಿಂಗವಿಹೀನಾನಾಂ ಸತ್ಯಮೇವ ನ ಸಂಶಯಃ ॥೯॥

ಪ್ರಾಣಲಿಂಗ ವಿರಹಿತರಾದವರಿಗೆ ಕೋಟಿಯಜ್ಞಂಗಳು ಕೋಟಿ ತಪಂಗಳು ಕೋಟಿ ತೀರ್ಥಂಗಳು ಎಷ್ಟನು ಮಾಡಿದಡೆ ಅಷ್ಟೂ ನಿಷ್ಫಲವಹುದು ಸಂದೇಹವಿಲ್ಲ.

ವಿಷ್ಣುಪುರಾಣೇ—

ಶ್ರದ್ಧಾಮಯಂ ದೃಢಂ ಕೇಚಿನ್ಮೇನಕೇನಾಪಿ ಹೇತುನಾ ।
ವಶ್ಯಃ ಸ್ಪೃಷ್ಟೋದೃಶ್ಯಶ್ಚೈವ ಪೂಜ್ಯಃ ಸಂಭಾವ್ಯ ಏವ ಚ ॥
ಕ್ರಿಯೇತ ಚೇನ್ಮಯಿ ಶ್ರದ್ಧಾ ಶಿವಸ್ತದ್ವರದಾಯಕಃ ॥೧೦॥

ಆ ಪ್ರಕಾರದಿಂದಾದಡೆಯೂ ಶಿವನಲ್ಲಿ ವಿಶ್ವಾಸ ನೈಷ್ಠೆಯುಳ್ಳವಂಗೆ ವಶ್ಯನಹನು ಮುಟ್ಟಲು ಬಹನು ಕಾಣಲಿ ಬಹನು ಪೂಜಿಸಿ ಕೊಂಬನು ಒಡನೆ ನುಡಿವನು ಶಿವನಲ್ಲ ವಿಶ್ವಾಸವೇ ಕಾರಣವು ಶಿವನ ವರ ವಶನಹನು.

## ವಚನಗಳು

೧

ತಪವೆಂಬುದು ತಗಹು ನೇಮವೆಂಬುದು ಬಂಧನ
ಶೀಲವೆಂಬುದು ಸೂತಕ ಭಾಷೆಯೆಂಬುದು ಪ್ರಾಣಘಾತಕ
ಇಂತೀ ಚತುರ್ವಿಧದೊಳಗೆಲ್ಲ ಗುಹೇಶ್ವರಾ ನಿಮ್ಮ ಶರಣರಗ್ರಗಣ್ಯರು

೨

ಹಾಲನಿಯಮವ ಹಿಡಿದವರು ಬೆಕ್ಕಾಗಿ ಹುಟ್ಟುವರು
ಕಡಲೆಯ ನಿಯಮವ ಹಿಡಿದವರು ಕುದುರೆಯಾಗಿ ಹುಟ್ಟುವರು
ಪುಷ್ಪದ ನಿಯಮವ ಹಿಡಿದವರು ತುಂಬಿಯಾಗಿ ಹುಟ್ಟುವರು
ಅಗ್ಗವಣಿಯ ನಿಯಮವ ಹಿಡಿದವರು ಕಪ್ಪೆಯಾಗಿ ಹುಟ್ಟುವರು
ಇಂತೀ ಚತುರ್ವಿಧದೊಳಗೆಲ್ಲ ಗುಹೇಶ್ವರಾ ನಿಮ್ಮ ಶರಣರು

೩

ಸುತ್ತಿ ಸುತ್ತಿ ಬಂದದಿಲ್ಲ ಲಕ್ಷಗಂಗೆಯ ಮಿಂದದಿಲ್ಲ
ತುಟ್ಟ ತುದಿಯ ಮೇರುಗಿರಿಯ ಮೆಟ್ಟಿ ಕೂಗಿದದಿಲ್ಲ
ನಿತ್ಯ ನಿಯಮದಿಂದ ತನುಮುಟ್ಟಿಕೊಂಡದಿಲ್ಲ
ನಿಚ್ಚ ನಿಚ್ಚ ಮನವನಸಂದಂದಿಗೆ ಅತ್ತಿತ್ತ ಹರಿಯಲೀಯದೆ-
ಚಿತ್ತದಲ್ಲಿ ಧರಿಸಬಲ್ಲಡೆ ಬಚ್ಚ ಬರಿಯ ಬೆಳಗು ಗುಹೇಶ್ವರಲಿಂಗವು

೪

ನಿಯಮವ ಮಾಡಬಲ್ಲವರೆಲ್ಲರೂ ಬ್ರಹ್ಮಪಾಶಕ್ಕೊಳಗಾದರು
ನಿತ್ಯವ ಮಾಡುವರೆಲ್ಲರು ವಿಷ್ಣುಪಾಶಕ್ಕೊಳಗಾದರು
ತಪವ ಮಾಡುವರೆಲ್ಲರೂ ರತಿಪಾಶಕ್ಕೊಳಗಾದರು
ಇಂತಿವು ಮೊದಲಾದ ನಾನಾ ಕೃತ್ಯವ ಮಾಡುವ
ಸಂಕಲ್ಪ ಜೀವರೆಲ್ಲರೂ
ನಾನಾ ಯೋನಿಯಲ್ಲಿ ಬಪ್ಪುದಕ್ಕೆ ತಮ್ಮ ತಾವೇ
ಲಕ್ಷವಿಟ್ಟುಕೊಂಡರು
ಅಲಕ್ಷ ಅತೀತ ಅನಾಮಯ ಅಮಲ ಅದ್ವಯ
ಕಾಲಭೇದಚ್ಛೇದನ ಉತಾರ ನಾನಾ ಶಾಸ್ತ್ರ ನಿರ್ಲೇಪ
ಸಕಲ ಕೃತ್ಯದವನಾದವನಲ್ಲ ನಿಃಕಾರಣ ಮೂರ್ತಿ
ಸಹಜ ಭರಿತಂಗೆ ಹಿಡಿಯಲಿಲ್ಲವಾಗಿ ಬಿಡಲಿಲ್ಲ ಅರಿಯಲಿಲ್ಲ
ಅರಿದೆನೆಂಬ ತೆರಹಿಲ್ಲವಾಗಿ ಮತ್ತೇನು ಉರುಹಿನಿಂದ
ಕಂಡ ಅರಿಕೆ ಇನ್ನೇಕೆ ನಿಷ್ಠೆಯ ಕಳೆದು ಸುಭಿಕ್ಷೆಯ ಸೇವಿಸಿ
ಬಿತ್ತನಳಿದುದೇ ನಿತ್ಯ ಅನಿತ್ಯವ ಕಳೆದು-
ಮತ್ತೇನೆನ್ನದಿಪ್ಪುದೇ ಲಿಂಗೈಕ್ಯವು ನಿಃಕಳಂಕ ಮಲ್ಲಿಕಾರ್ಜುನಾ

೫

ಜಪವೇಕೋ ಅಪ್ರಮಾಣಂಗೆ
ತಪವೇಕೋ ಚತುರ್ವಿಧ ಪದಕ್ಕೆ ಹೊರಗಾದವಂಗೆ
ನಿಯಮವೇಕೋ ನಿತ್ಯ ತೃಪ್ತಂಗೆ

ನಿತ್ಯನೇಕೋ ಅಷ್ಟವಿಧಾರ್ಚನೆ ಷೋಡಶೋಪಚಾರ ಭರಿತಂಗೆ
ಜಪಕ್ಕೊಳಗಾದ ರುದ್ರ ತಪಕ್ಕೊಳಗಾದ ವಿಷ್ಣು
ನಿಯಮಕ್ಕೊಳಗಾದ ಬ್ರಹ್ಮ ನಿತ್ಯಕ್ಕೊಳಗಾದ ಈಶ್ವರ
ಉಪಚಾರಕ್ಕೊಳಗಾದ ಸದಾಶಿವ
ಇಂತಿವರೆಲ್ಲರು ಸೃಷ್ಟಿಯ ಮೇಲಣ ತಪ್ಪಲಲ್ಲಿದ್ದರೇಕೆ
ಎಲ್ಲರೂ ಬೆಟ್ಟವನೇರೆ ಇಂತಿವರ ಒಟ್ಟೆಯ ಮುಟ್ಟದೆ
ನಿಶ್ಚಯವಾದ ಶರಣನು
ಇಹದವನಲ್ಲ ಪರದವನಲ್ಲ ಆ ಶರಣ ಉಡುವಲ್ಲಿಯೂ ತಾನೆ
ತೊಡುವಲ್ಲಿಯೂ ತಾನೆ ಮುಟ್ಟುವಲ್ಲಿಯೂ ತಾನೆ
ತಟ್ಟುವಲ್ಲಿಯೂ ತಾನೆ ಉಂಬಲ್ಲಿಯೂ ತಾನೆ
ಬೇರೊಂದಿಲ್ಲವಾಗಿ ಕ್ಷೀರವ ಕೂಡಿದ ಜಲವ ಭೇದಿಸುವರೇ ಅಯ್ಯಾ
ವಾರಿಧಿಯ ಕೂಡಿದ ಉದಕದ ಸಾರವ ಬೇರೆ
ರುಚಿಸಲುಂಟೇ ಅಯ್ಯಾ
ಆರದಿಗೊಂಡ ಗಂಧವ ಬೇರೆ ಮುಡಿಯಲಿಲ್ಲ
ತೋರಲಿಲ್ಲದ ರೂಹಿಂಗೆ ಆರಾಧಿಸುವುದಕ್ಕೆ ಬೇರೆ ಒಡಲಿಲ್ಲ
ವಸ್ತುದ ಸಾಕಾರಕ್ಕೆ ಆರೈಕೆಯಿಲ್ಲದೆ ಸತ್ತ ರೂಪದಲ್ಲಿಯೇ
ಇಹದಲ್ಲಿ ಪರದಲ್ಲಿ ಪರಿಣಾಮಿಯಾಗಿ ಇಂತಿವಕೆ ದೂರವಾಗಿ
ಬಾಳುಗೆಟ್ಟು ಬೀಳಾದೆ ಹೇಳ ಹೆಸರಿಲ್ಲದಂತಾದೆನಯ್ಯಾ
ನಿಃಕಲಂಕ ಮಲ್ಲಿಕಾರ್ಜುನಾ

೬

ದೇವ ದಾನವ ಮಾನವ ಋಷಿಜನಂಗಳೆಲ್ಲರೂ
ಮಹಾಲಿಂಗವ ಕಂಡೇವೇ
ಎಂದು ಅನೇಕ ಕಾಲಂಗಳಲ್ಲಿ ಜಪತಪ ಧ್ಯಾನವ ಮಾಡಿ
ಸಮಾಧಿಯಲ್ಲಿದ್ದು ಕಾಣಲರಿಯದೆ ಬಳಲುತ್ತೈದಾರೆ
ಅವರಲ್ಲಿ ಸಾಮರ್ಥ್ಯ ಪುರುಷರಾಗಿ ಕಂಡೇನು ಫಲ
ಘನಲಿಂಗಕ್ಕೆ ಒಲಿಯರು ಲಿಂಗವನೊಲಿಸಿಕೊಳಲರಿಯರು
ಕೂಡಲರಿಯರು

ಅಲ್ಪ ಭೋಗಂಗಳ ಸಿತ್ಸಯಿಸಿ ಭೋಗಪದವ ಪಡೆದು
ಪುಣ್ಯ ಪಾಪಂಗಳ ಬಲೆಯಲ್ಲಿ ಬೀಳುತ್ತಿಹರು
ಅವರುಗಳ ಪರಿಯಂತಲ್ಲ ಶಿವ ಶಿವಾ ಮಹಾದೇವ
ಮಹಾಲಿಂಗದ ಕರುಣೆಯನೇನೆಂದುಪಮಿಸಬಹುದು
ಶ್ರೀ ಗುರುವಾಗಿ ಕರುಣಿಸಿ ತಮ್ಮ ಪ್ರಸನ್ನ ಹಸ್ತದಿಂದೆನಗೆ
ಜನನವ ಮಾಡಿದ ಮಾತಾಪಿತನು ತಾನೇಯಾದನು
ಮಹಾದೀಕ್ಷೆಯಂ ಮಾಡಿ ಶ್ರೀಗುರುವಾದನು
ಮಂತ್ರೋಪದೇಶವಂ ಮಾಡಿ ಮಂತ್ರರೂಪಾಗಿ
ಕರ್ಣದಲ್ಲಿ ಭರಿತನಾದನು
ಪ್ರಸಾದ ರೂಪಾಗಿ ಜಿಹ್ವೆಯಲ್ಲಿ ಭರಿತನಾದನು
ಮಹಾ ವಿಭೂತಿಯಾಗಿ ಭಾಳದಲ್ಲಿ ಭರಿತನಾದನು
ಇಂತು ಸರ್ವಾಂಗದಲ್ಲಿ ಭರಿತನಾದನು
ಮತ್ತೆ ಮತ್ತೆ ಮಹಾಚೋದ್ಯ ಶ್ರೀಗುರು ಲಿಂಗಮೂರ್ತಿಯನು-
ಮಹಾಲಿಂಗ ಮೂರ್ತಿಯನು ಪ್ರಾಣವನು ಏಕೀಕರಿಸಿ
ಪ್ರಾಣಲಿಂಗವಾದಾತನಾಗಿ ಅಂಗದ ಮೇಲೆ ಬಿಜಯಂಗೈದು
ಅಂಗಲಿಂಗವಾದನು
ಮಹಾ ಲಿಂಗವಾಗಿ ಕರಸ್ಥಲದಲ್ಲಿ ನಿರಂತರ ಪೂಜೆಗೊಳುತಿದ್ದನು
ಇಂಥಾ ವಿಪಿತವಹ ಸುಜ್ಞಾನವ ಕರುಣಿಸಲೆಂದು
ಶರಣ ಭರಿತನಾಗಿ ಬಂದು ಕರುಣಿಸಿದನು
ಇಂತು ಶ್ರೀಗುರುಲಿಂಗಜಂಗಮ ರೂಪಾಗಿ ಕರುಣಿಸಿ
ಪ್ರಸನ್ನವಾಗಿ ಪ್ರಸಾದವ ಕರುಣಿಸಿ ಪ್ರಸಾದ ರೂಪಾಗಿ ಸಲಹಿದನು
ಸಾಲೋಕ್ಯ ಸಾಮಿಪ್ಯ ಸಾಯುಜ್ಯವೆನಿಪ
ಚತುರ್ವಿಧ ಪದಕ್ಕೆ ಘನತರ ಪದ ದಾಸೋಹ ಪದದಲ್ಲಿ ನಿಲಿಸಿದನು
ಶಿವ ಶಿವಾ ಮಹಾಪದವನೇನೆಂದುಪಮಿಸಲರಿಯೆ
ಸದ್ಗುರುವಿನ ಕೃಪೆ ವಾಙ್ಮನಕ್ಕಾತೀತ ಮಹಾಘನ
ಪರಿಣಾಮ ಸುಖವು
ಇಂತೀ ಸುಖವನು ಊರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರ ತಾನೇಬಲ್ಲ

## ಕರ್ಮಯೋಗ ನಿರಸನ ಸ್ಥಲ: ೩೧

ಈ ಪ್ರಕಾರದಿಂ ನಾನಾ ಕರ್ಮಂಗಳಂ ಮಾಡುವಾತನು ಶಿವಭಕ್ತಂಗೆ ಸಮವಲ್ಲವೆಂಬುದಂ ಪ್ರತಿಷ್ಠೆಯಿಂ ಮಾಡಿ ನುಡಿದರ್ಮಹಾ ಪುರಾತನರು. ಇಂತಹ ಕರ್ಮವಾದಮಂ ಬಿಟ್ಟು ಲಿಂಗಭಕ್ತನಾದೆನೆಂಬುವಂಗೆ ಅಷ್ಟಾಂಗ ಯೋಗ ಸಲ್ಲದೆಂದು ನುಡಿದ ವಚನಂಗಳು.

ತತ್ತ್ವಸಾರೇ—

ತ್ಯಜೇದ್ಭಾವಮಭಾವಂ ಚ ಅಂತರಾಲಂ ಪರಿತ್ಯಜೇತ್ ।
ತ್ಯಜೇತ್ತತ್ರವಿಚಾರಾಣಿ ಚೋಹಾಪೋಹಂ ಪರಿತ್ಯಜೇತ್ ॥೧॥

ಎಲೆ ಮಗನೆ ಶಿವಸಂಸ್ಕಾರವಿಲ್ಲದ ಬರಿಯ ಕರ್ಮಯೋಗದಲ್ಲಿ ಭಾವನೆಯನ್ನು ಅಭಾವನೆಯನ್ನು ಬಿಡಬೇಕು. ಆ ಕರ್ಮಯೋಗದ ಅನ್ಯ ತರದ ಕ್ರಿಯೆಗಳನ್ನು ಬಿಡಬೇಕು. ಅದರಲ್ಲಿಯ ಪರಾಂಬರಿಕೆಗಳನ್ನು ಬಿಡಬೇಕು. ಅಲ್ಲಿಯ ಊಹೆಗಳನ್ನು ವಿಸರ್ಜಿಸಬೇಕು.

ತ್ಯಜೇದ್ಭಾವಮಭಾವಂ ಚ ತ್ಯಜೇದ್ಬುದ್ಧೇಸ್ತು ಗೋಚರಮ್ ।
ತ್ಯಜೇದತ್ರ ಮನೋತ್ಪತ್ತಿಮಂತರಾಲಂ ಪರಿತ್ಯಜೇತ್ ॥೨॥

ಮತ್ತೆಯೂ ಕರ್ಮಯೋಗದ ಭಾವ ಭಾವನೆಗಳು ಬುದ್ಧಿಗೋಚರ ಗಳಾದಡೆಯೂ ಬಿಡಬೇಕು. ಆವುದಾನೊಂದು ಕರ್ಮಯೋಗದಿಂ ಹುಟ್ಟುವ ಮನಸ್ಸನ್ನು ಬಿಡಬೇಕು. ಅದರ ದೊಡ್ಡಸ್ತಿಕೆಯನ್ನು ಬಿಡಬೇಕು.

ತ್ಯಜೇತ್ತತ್ರ ಗುದಾಧಾರಂ ಸ್ವಾಧಿಷ್ಠಾನಂ ಪರಿತ್ಯಜೇತ್ ।
ಮಣಿಪೂರಂ ಪರಿತ್ಯಾಜ್ಯಂ ತ್ಯಜೇಚ್ಚಕ್ರಮನಾಹತಮ್ ॥೩॥

ವಿಶುದ್ಧಾಖ್ಯಂ ಪರಿತ್ಯಾಜ್ಯಂ ಆಜ್ಞಾಚಕ್ರಂ ಪರಿತ್ಯಜೇತ್ ।
ಬ್ರಹ್ಮದ್ವಾರಂ ಪರಿತ್ಯಾಜ್ಯಂ ತ್ಯಜೇತ್ಸೂರ್ಯಶಿಖಾಂ ತಥಾ ॥೪॥

ಸೋಮಚಕ್ರಂ ಪರಿತ್ಯಾಜ್ಯಂ ತ್ಯಜೇತ್ತತ್ರ ನಿರಾಮಯಮ್ ।

ಎಲೆ ಮಗನೆ ಆ ಕರ್ಮಯೋಗದಲ್ಲಿ ಹೇಳುವ ಗುದಸ್ಥಾನವಾದ ಆಧಾರ ಚಕ್ರವನ್ನು ಬಿಡಬೇಕು. ಸ್ವಾಧಿಷ್ಠಾನವಾದ ಲಿಂಗಸ್ಥಾನವನ್ನು

ಬಿಡಬೇಕು. ಮಣಿಪೂರಕವೆಂಬ ಹೊಕ್ಕುಳಸ್ಥಾನವನು ಬಿಡುವುದು. ಅನಾಹತವೆಂಬ ಹೃದಯ ಸ್ಥಾನವನು ಬಿಡಬೇಕು. ಕಂಠಸ್ಥಾನದ ವಿಶುದ್ಧಿ ಚಕ್ರವನು ಹುಬ್ಬುಗಳ ನಡುವಣ ಆಜ್ಞಾಚಕ್ರವನ್ನು ನೆತ್ತಿಯ ಬ್ರಹ್ಮ ಸ್ಥಾನವನ್ನು ತೂರ್ಯಸ್ಥಾನವಾದ ಪಶ್ಚಿಮಚಕ್ರವನ್ನು ಚಂದ್ರಮಂಡಲ ವೆನಿಸುವ ಸೋಮ ಚಕ್ರವನ್ನು ಅಲ್ಲಿಂದತ್ತ ನಿರಾಳಮಯವಾದ ಶೂನ್ಯ ಸ್ಥಾನವನ್ನು ಸಾಧಿಸಬೇಕೆಂಬ ದುರಾಶೆಯನು ಬಿಡಬೇಕು.

ತ್ಯಜೇದ್ಬಂಧಾನ್ಯ ಶೇಷಾಣಿ ಚಾಸನಾನಿ ಪರಿತ್ಯಜೇತ್ ।
ವಾಯುಭೇದಾನ್ ಶೇಷಾಣಿ ಯಾನಿ ತೇ ಕಥಿತಾನಿ ಚ ॥೫॥

ಕರಣಾನಿ ಚ ದಿವ್ಯಾನಿ ವಿಜ್ಞಾನಾನಿ ಪರಾಣಿ ಚ ।
ನಾಸಿಸೀ ಬಿಂದುಭೇದಾನಿ ಯೋ ತತ್ಸರ್ವಂ ಪರಿತ್ಯಜೇತ್ ॥೬॥

ಎಲೆ ಮಗನೆ ಆ ಕರ್ಮಯೋಗಕ್ಕೆ ಸಲ್ಲುವ ಅನೇಕ ಬಂಧನಂಗಳನು ಆವಪರ ಆಸನಂಗಳನು ಅಲ್ಲಿ ಚಲಿಸುವ ಪವನ ಪ್ರಕಾರಂಗಳನು ಮೊದಲು ನಿನಗೆ ಹೇಳಿದ ಕರಣಂಗಳನೂ ಪರತರಗಳಾದ ವಿಜ್ಞಾನಂಗಳನೂ ಮಾನಿನಿಯ ಬಿಂದುಭೇದಂಗಳನೂ ಇಂತೀ ಸಮಸ್ತವನು ಬಿಡುವುದು.

ನ ಹೃದಿ ನ ಶಿರಸ್ಥಾನೇ ಭ್ರೂನಾಭ್ಯೋಶ್ಚ ಮಂಡಲೇ ।
ಸ್ಮೃತಿಃ ಪ್ರಾಣಗತೋ ಯತ್ರ ತತ್ರ ಧ್ಯಾನಂ ಪರಿತ್ಯಜೇತ್ ॥೭॥

ಹೃದಯ ಸ್ಥಾನದಲ್ಲಿ ಶಿರಮಧ್ಯದಲ್ಲಿ ಹುಬ್ಬುಗಳ ಮಧ್ಯದಲ್ಲಿ ನಾಭಿ ಮಂಡಲದಲ್ಲಿ ವಿಷಯ ವ್ಯಾಪ್ತಿಯಿಂದ ಮೂರ್ಛಿತನಾದ ಜೀವನು ಚರಿಸುತ್ತಿಹನಾಗಿ ಅವನ್ನು ಶಿವಧ್ಯಾನವೆಂದು ಶಿವಶರಣರು ಮಾಡಲಾಗದು.

## ವಚನಗಳು

**ಪದ್ಮದೊಳಗಣ ಪತ್ರದೊಳಗಣ ದ್ವಿದಳದೊಳಗಣ-**
**ಸರದ ಬಲಿಕೆಯೊಳಗಣ ಕರ್ನಿಕೆ ಕುಹರದೊಳಗಣ**
**ಅಜಸ್ಥಾನದೊಳಗಣ ಅಹಿಮಧ್ಯದೊಳಗಣ**

ಹಲವು ಕೋಟಿಪತ್ರದ ಕುಮುದ ಕುಹರದ ಪದ್ಮ ಮಧ್ಯದೊಳಗೆ
ಪ್ರಾಣವಿಪ್ಪುದೆಂದು ಆತ್ಮನ ನಿಶ್ಚಯಿಸುವೆನೆಂದು
ಅನಂತಯೋಗಿಗಳು ಸಂಸಾರ ಧರ್ಮವ ಕೆಡಿಸಿಹೆವೆಂದು
ಅನಂತನಾಳದಲ್ಲಿ ನಿರ್ಬಂಧವ ಮಾಡಿ ಅಮೃತರಾಗಿಹೆವೆಂದು
ಅಮೃತವನು ದಣಿಯಲುಂಡೆವೆಂದು
ನಾನಾ ಕುಟಿಲ ಭಾವಂಗಳಲ್ಲಿ ಸಂಸಾರ ಧರ್ಮವ ಕೆಡಿಸಿಹೆವೆಂದು
ಯೋಗಿಗಳೆಂಬರು ಭವದ ಬಾಗಿಲಲ್ಲಿ ಐದಾರೆ ನೋಡಾ ಅಯ್ಯಾ
ಶಿವಾಚಾರದ ಕುಳವನರಿಯದೆ-
ನಾನಾ ಯೋನಿಗಳಲ್ಲಿ ಜನಿಸಿದರು ಕಾಣಾ ಅಯ್ಯಾ
ಶಿವಾಚಾರದ ಕುಳವನರಿಯದೆ-
ಅನೇಕ ಬಂಧನಂಗಳಲ್ಲಿ ಸಿಲುಕಿದರು ಕಾಣಾ ಎಲೆ ಅಯ್ಯಾ
ನೀವು ಚತುರ್ವಿಧ ಸ್ಥಲವ ಮಂಟಪವ ಮಾಡಿ
ಚತುರಾತ್ರಯ ಸಿಂಹಾಸನದ ಮೇಲೆ ಕುಳ್ಳಿರ್ದು
ನಿತ್ಯರಿಗೆ ಭಕ್ತಿಯನೀವುದ ಕಂಡು
ಭಕ್ತರು ನಿತ್ಯರು ನಿಮಗೆ ಶರಣುವೊಕ್ಕು
ಮಹಾ ಪ್ರಸಾದ ದೇವಾ ! ಆತ್ಮನು ಪರಿಭವಕ್ಕೆ ಬಪ್ಪನೇ ?
ಎಂದು ಕೇಳಲು ಅದು ಹುಸಿ ಕಾಣಿರೇ
ಆತ್ಮನಿಪ್ಪ ನೆಲೆಯ ಹೇಳುವೆ ಕೇಳಿರೇ
ಗುರುಭಕ್ತಿಯಲ್ಲಿಪ್ಪ ಲಿಂಗಭಕ್ತಿಯಲ್ಲಿಪ್ಪ ಜಂಗಮಭಕ್ತಿಯಲ್ಲಿಪ್ಪ
ಅರ್ಪಿತ ಪ್ರಸಾದದಲ್ಲಿಪ್ಪ ಜಂಗಮಕ್ಕೆ ಮಾಡುವಲ್ಲಿಪ್ಪ
ಮಾಡಿಸಿಕೊಂಬಲ್ಲಿಪ್ಪ ತನು-ಮನ-ಧನವೊಂದಾಗಿ ನಿವೇದಿಸುವಲ್ಲಿಪ್ಪ
ಪರಿಪೂರ್ಣಾತ್ಮನೆಂದು ನಿತ್ಯಂಗೆ ನೀವು ಕಾರುಣ್ಯವ ಮಾಡಿದಿರಿ
ನಿಮ್ಮ ಕಾರಣ್ಯ ಕಟಾಕ್ಷದಲ್ಲಿ ಬಸವಂಣನಲ್ಲದೆ ಮಾಡುವರಿಲ್ಲ
ಆ ಬಸವಣ್ಣ ಹೇಳಿತ್ತ ಮಿಾರೆ ಕಾಣಾ ಕಲಿದೇವರದೇವಾ



**ಈಡೆ ಪಿಂಗಳೆ ಸುಷುಮ್ನನಾಡಿಗಳಲ್ಲಿ ಆತ್ಮನು ಸಂಚರಿಸಬಾರದೆಂಬ**
**ಯೋಗಾಂಗದ ಅಂಣಗಳು ನೀವು ಕೇಳಿರಯ್ಯಾ**

ವಾಯುವನಧೋಮುಖಕ್ಕೆ ತರಬಾರದೆಂದು
ಊರ್ಧ್ವಮುಖಕ್ಕೆ ತಂದು ಅಮೃತವನುಂಡಿಹೆವೆಂಬ
ಅಷ್ಟಾಂಗಯೋಗದ ಕರ್ಮಿಗಳು ನೀವು ಕೇಳಿರೇ
ಶರೀರದಲ್ಲಿ ಶುಕ್ಲ ಶೋಣಿತ ಮಜ್ಜೆ ಮಾಂಸ ಇದರೊಳಗಾದ-
ಸಾಕಾರದ ತಲೆಯಲ್ಲಿ ನಿರಾಕಾರದ ಅಮೃತವನುಂಡಿಹೆವೆಂಬುದು
ಹುಸಿಯಲ್ಲವೇ
ಬಂಜೆಯಾವಿನಲ್ಲಿ ಕ್ಷೀರದ ಕೆಚ್ಚಲುಂಟೇ
ಕಲ್ಲರೆಯಲ್ಲಿ ಚಿಲುಮೆಯ ಸಾರ ಉಂಟೇ
ಹೊಲ್ಲೆಹ ದೇಹದಲ್ಲಿ ನಲ್ಲಕ್ಷೀರವುಂಟೇ
ಇವೆಲ್ಲವನರಿಯದೆ ಬಲ್ಲತನವ ತೋರೆಯುಪೊಟ್ಟ-
ಗೆಲ್ಲಗೂಳಿಗೆಲ್ಲಿಯದೋ ಲಿಂಗಾಂಗಯೋಗ
ಹರಿವ ವಾರಿಧಿಗೆ ನೊರೆಪಾವಸೆ ಮುಸುಕುವುದೇ
ಸುಡುವನಲನು ತೃಣದಿ ಕಟ್ಟುವಡೆವುದೇ
ಅರಿದ ಶರಣನು ತನುವ ದಂಡಿಸಿಕೊಂಡಿಹೆನೆಂಬ
ಭ್ರಾಂತೆಲ್ಲಿಯದೋ ಅಯ್ಯಾ
ಆತ್ಮನ ಇರುವು ಘಟಪಟದೊಳಗೆ ಗ್ರಹಿಸಿಪ್ಪ ಬಯಲಿನ ಇರುವಿನಂತೆ-
ರವಿಯೊಳಗೆ ತೋರುವ ಕಿರಣದಂತೆ
ವಾಯುವಿನ ಜೆಂಬಳಿಯ ಗಂಧದಂತೆ
ಬಿತ್ತಳಿದ ರಜ್ಜುವಿನಂತೆ ತೈಲದೊಡನೆ ಬೆಳಗುವ ಕಳೆಯಂತೆ
ಕಾಯದ ಮಧ್ಯದಲ್ಲಿ ನಿಂದು
ಓಂಕಾರ ಸ್ವರೂಪವನರಿಯದೆ ಕೆಟ್ಟರಲ್ಲಾ ಕರ್ಮಕಾಂಡಿಗಳು
ಸ್ಫಟಿಕದ ಶಿಲೆಯಲ್ಲಿ ನಿಂದ ವಾರಣದಂತೆ ನಿನ್ನ ನೀನೇ ತಿಳಿಯಾ
~~[illegible]~~ ಚೆನ್ನಮಲ್ಲಿಕಾರ್ಜುನಲಿಂಗದಲ್ಲಿ
ಸರ್ವಾಂಗಲಿಂಗ ಭರಿತವಾದವರಿಗಲ್ಲದೆ ಇಲ್ಲ ಲಿಂಗಾಂಗಯೋಗ

೩

ಹಠಯೋಗ ಲಂಬಿಕೆಯೆಂದು ಅಕುಂಚನವೆಂದು
ವಜ್ರಿ ಅಮರಿಯ ಕಲ್ಪವೆಂದು ಮಲಮೂತ್ರಂಗಳಂ ಸೇವಿಸುತ

ಇದು ಪೂರ್ವ ನವನಾಥಸಿದ್ಧರ ಮತೋಕ್ತವೆಂದು
ಕಾಪಾಲಿಕಾಚರಣೆಯನಾಚರಿಸುವರಲ್ಲಿ ಶರಣರು
ಮೇಣು ತಲೆಯೊಳಗಣ ವಾತ-ಪಿತ್ತ-ಶ್ಲೇಷ್ಮವ ತೆಗೆದು
ಅಮೃತವೆಂದು ಬಿನಗು ದೃಷ್ಟವ ತೋರುವರಲ್ಲ ಶರಣರು
ಪ್ರವಿಸುವ ದೇಹದಲ್ಲಿ ಅಪ್ಪುವಿನ ಫಲ ರಸಕ್ಷೀರ
ಘೃತವೊದಲಾದವ ಸೇವಿಸುತ್ತ
ಅನ್ನವ ಬಿಟ್ಟೆವೆಂಬ ಭೂತಚೇಷ್ಟಕರಲ್ಲ ಶರಣರು
ಇವೆಲ್ಲವು ಕಾಕು ಸಟೆ ಭ್ರಾಂತೆಂದು ತಿಳಿದು
ನಿರ್ಧರ ನಿಜದಿ ನಿಂದರು ಗುಹೇಶ್ವರಾ ನಿಮ್ಮ ಶರಣರು ಅಗ್ರಗಣ್ಯರು

೬

ಕಾಯಾನುಭಾವಿಗಳೆಲ್ಲರು ಕಾಯದಲ್ಲಿಯೇ ಮುಕ್ತರು
ಜೀವಾನುಭಾವಿಗಳೆಲ್ಲ ಜೀವದಲ್ಲಿಯೇ ಮುಕ್ತರು
ಪವನಾನುಭಾವಿಗಳೆಲ್ಲ ಪವನದಲ್ಲಿಯೇ ಮುಕ್ತರು
ಯೋಗಾನುಭಾವಿಗಳೆಲ್ಲ ಯೋಗದಲ್ಲಿಯೇ ಮುಕ್ತರು
ಇವರನೆಂತು ಸರಿಯೆಂಬೆನಯ್ಯಾ ಲಿಂಗಾನುಭಾವಿಗಳಿಗೆ
ಶಿವಲಿಂಗ ಪ್ರಕಾಶದಲ್ಲಿ ಸದಾಸನ್ನಿಹಿತರು
ನಮ್ಮ ಶರಣರು ಕೂಡಲ ಚೆನ್ನಸಂಗಮದೇವಾ

## ಊರ್ಧ್ವಪುಂಡ್ರ ನಿರಸನ ಸ್ಥಲ: ೩೨

ಈ ಪ್ರಕಾರದಿಂ ಅಷ್ಟಾಂಗ ಯೋಗ ಕರ್ಮಫಲ ಭೋಗಿಗಳು ಶಿವ ಭಕ್ತರಿಗೆ ಸರಿಯಿಲ್ಲವೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಇಂತಹ ಕರ್ಮಯೋಗವಂ ಬಿಟ್ಟು ಲಿಂಗಭಕ್ತನಾದೆನೆಂಬವಂಗೆ ಶಂಖ ಚಕ್ರಾದಿಗಳಾದ ಆಯುಧಗಳಿಂದ ಒಡಲು ಮುಡುಹಂ ಸುಡಿಸಿಕೊಂಬುದು ಕ್ರಮವಲ್ಲೆಂದು ನುಡಿದ ವಚನಗಳು:

ಸೂತಸಂಹಿತಾಯಾಮ್—

ಸ್ವದೇಹೇ ಪರದೇಹೇ ವಾ ನ ಕುರ್ಯಾದಂಕನಂ ನರಃ ।
ಯದಿ ಕುರ್ಯಾಚ್ಚ ಚಕ್ರಾದ್ಯೈಃ ಪತತ್ಯೇವ ನ ಸಂಶಯಃ ॥ ೧ ॥

ಮನುಷ್ಯನು ತನ್ನ ದೇಹದಲ್ಲಿಯಾದರೂ ಪರದೇಹದಲ್ಲಿಯಾದರೂ ಕುರುಹನು ಮಾಡಲಾಗದು. ಚಕ್ರಾದಿಗಳಿಂದ ಕುರುಹಂ ಮಾಡಿದವನಾದರೆ ಪತಿತನಾಗುವನು ತಪ್ಪದು.

ಮಾನವ ಪುರಾಣೇ—

ಆಯುಧೈಃ ಶಂಖಚಕ್ರಾದ್ಯೈರ್ನ ದಹೇಚ್ಚ ಕದಾಚನ ।
ಮನುಷ್ಯಾಣಾಂ ಚ ನಾಮ್ನಾ ತು ನ ಲಿಖೇಚ್ಚೋರಸಿ ಭ್ರುವಾತ್ ॥ ೨ ॥

ಶಂಖ ಚಕ್ರಮೊದಲಾದ ಆಯುಧಗಳಿಂದ ಒಂದಾನೊಂದು ವೇಳೆಯೂ ಸುಡಬಾರದು. ಭ್ರುಮೆಯ ದೆಸೆಯಿಂದ ಉರಸ್ಸಿನಲ್ಲಿ ಮನುಷ್ಯರುಗಳ ಹೆಸರಿನಿಂದ ಒಂದಾನೊಂದು ವೇಳೆಯೂ ಬರೆಯಬಾರದು.

ಪರಾತರ ಪುರಾಣೇ—

ನ ದಾಹಯೇದ್ದ್ವಿಜಶ್ರೇಷ್ಠಃ ಸ್ವದೇಹಂ ಚಕ್ರಪೂರ್ವಕೈಃ ।
ಅಂಕಿತೋ ಯಃ ಸ್ವದೇಶಾತ್ತಂ ರಾಜಾ ಶೀಘ್ರಂ ಪ್ರವಾಸಯೇತ್ ॥ ೩ ॥

ಬ್ರಾಹ್ಮಣೋತ್ತಮನು ಚಕ್ರಾದಿಗಳಿಂದ ಸುಡಿಸಿಕೊಳ್ಳಬಾರದು ಹಾಗೆ ಸುಡಲ್ಪಟ್ಟವನಾದರೆ ಅರಸನು ತನ್ನ ದೇಶದ ದೆಶೆಯಿಂದ ಶೀಘ್ರವೇ ಆತನನ್ನು ಹೊರದೂಡಿಸುವದು.

ಯಜ್ಞವೈಭವ ಖಂಡೇ—

ಕೇನಚಿಲ್ಲಾಂಛಿತೋ ಮರ್ತ್ಯೋ ನ ಸಾಕ್ಷೀ ಸರ್ವಥಾಭವೇತ್ ।
ಶ್ರೌತಸ್ಮಾರ್ತ ಸದಾಚಾರೇ ನಾಧಿಕಾರೀ ಚ ಲಾಂಛಿಶಃ ॥ ೪ ॥

ಯಾವುದೊಂದರಿಂದ ಚಿಸ್ಹ್ನಿಸಲ್ಪಟ್ಟ ನರನು ಎಲ್ಲಾಗಳು ಸಾಕ್ಷಿಯಲ್ಲಿ ಮುದ್ರಿತನು. ವೇದಶಾಸ್ತ್ರಸಮ್ಮತವಾದ ಶಿವಾಚಾರದಲ್ಲಿಯೂ ಯೋಗ್ಯನಲ್ಲ.

ಸೂತಸಂಹಿತಾಯಾಮ್—

ಅಶ್ರೌತಂ ಚೋರ್ಧ್ವ ಪುಂಡ್ರಾದಿ ಲಲಾಟೇ ಶ್ರದ್ಧಯಾ ಸಹ ।
ಧಾರಯಿಷ್ಯಂತಿ ಮೋಹೇನ ಪಾಷಂಡೋಪಹತಾ ಜನಾಃ ॥ ೫ ॥

ನೊಸಲಲ್ಲಿ ವಿಶ್ವಾಸದೊಡನೆ ಕೂಡಿ ವೇದ ವಿರುದ್ಧವಾದ ಊರ್ಧ್ವ ಪುಂಡ್ರಗಳನ್ನು ಅಜ್ಞಾನದೊಡನೆ ಪಾಷಂಡ ದರ್ಶನದಿಂದ ಕೆಟ್ಟವರಾದ ಮನುಷ್ಯರು ಧರಿಸಿಕೊಳ್ಳುವರು.

ಮಾನವ ಪುರಾಣೇ—

ಊರ್ಧ್ವಪುಂಡ್ರಂ ಚ ಶೂಲಂ ಚ ವರ್ತುಲಂ ಚಾರ್ಧ ಚಂದ್ರಕಂ ।
ತತ್ರನಿಷ್ಠೈರ್ನ ಧಾರ್ಯಂ ಚ ನ ಧಾರ್ಯಂ ವೈದಿಕೈರ್ಜನೈಃ ॥ ೬ ॥

ಊರ್ಧ್ವಪುಂಡ್ರವು ಶೂಲವು ಬಟುವು ಅರ್ಧಚಂದ್ರಾಕಾರವು ಆಗಮ ಶ್ರದ್ಧೆಯು ಧರಿಸಬೇಕಾದುದಲ್ಲ. ವೈದಿಕರಿಂದಲೂ ಧರಿಸಬೇಕಾದುದಲ್ಲ.

## ವಚನಗಳು

೧

ಅರ್ಹತ ಚಾರ್ವಾಕ ಬೌದ್ಧ ಮೀಮಾಂಸಕ ನೀಲ ಪಟವೆರೆಂಬಿವರು
ಕಾಯದ ದರ್ಶನಂಗಳಲ್ಲಿ ದೀಕ್ಷಿತರಾಗಿ
ಸೌರ ಶಾಕ್ತೇಯ ವೈಷ್ಣವ ಗಾಣಾಪತ್ಯ ಕಾಪಾಲಿ
ದರ್ಶನಂಗಳಂ ಪೊಕ್ಕು
ಒಡಲು ಮುಡುಹಂ ಸುಟ್ಟು ಮಟ್ಟಿಯನಿಟ್ಟು ಉಭಯಂಗೆಟ್ಟು

ಶಿವಪೂಜೆ ಶಿವಧ್ಯಾನವಿಲ್ಲದೆ ನರಕಕ್ಕಿಳಿದು
ಅಧಮರಾಗಿ ಹೋಗಿ ಎಂದು ಹೇಳಿತ್ತೇ ವೇದ

ಶಿವಾರ್ಚನಾವಿಹೀನೋಽಪಿ ಜನ್ಮಮೃತ್ಯೋರ್ನ ಮುಚ್ಯತೇ ।

ಎಂದುದಾಗಿ ಮರಳಿ ಮರಳಿ ಜನ್ಮಕ್ಕೆ ಬಂದು
ಮಾಡಿದ ಕರ್ಮದಿಂದ ಮಗ್ನರಾಗ ಹೇಳಿತ್ತೇ ವೇದ

ಓಂ ಅಪ್ರಶಿಖಾಯಾಂ ತ್ವಮಯಾ ಜೀವಾಗಮಾತ್ ।

ಇಂತೆಂಬ ತ್ರ್ಯಾಯರ್ಥವು ಹೋತನ ಕೊಂದು
ಹೋಮವ ಬೇಳಿ ಚಾಂಡಾಲರಾಗ ಹೇಳಿತ್ತೇ ವೇದ

ಶಿವಾರ್ಚಕ ಪದದ್ವಂದ್ವಮರ್ಚನಾದ್ಧಾರಣಾದಪಿ ।
ಶಿವನಾಮ ಸದಾ ಕಾಲಂ ಜಪೇದ್ವಿಪ್ರಸ್ಯ ಲಕ್ಷಣಮ್ ॥

ಎಂಬರ್ಥವನರಿಯದೆ ನರಕಕ್ಕಿಳಿಯ ಹೇಳಿತ್ತೇ ವೇದ

ಏವಂ ರುದ್ರಾಣಾಂ ವಿಶ್ವದೇವತಾನಾಂ ರುದ್ರಪಾದೇ ದತ್ತಮಸ್ತು

ಎಂದುದಲ್ಲದೇ ವಿಷ್ಣುಪಾದೇ ದತ್ತಮಸ್ತು ಎಂದುಳ್ಳರೆ ಹೇಳಿರೇ
ಕಾಶೀಖಂಡದಲ್ಲಿ ಹೇಳಿದ ಪುರಾಣಾರ್ಥದ ಹಾಗೆ
ವ್ಯಾಧನ ಕೈಯಿಂದ ವಿಷ್ಣು ಹತನಾದನೆಂದರೆ ಪರಿಣಾಮಿಸುವರು
ವೀರಭದ್ರ ದೇವರ ಕೈಯಿಂದ ವಿಷ್ಣುವಳಿದನೆಂದರೆ ಅದು
ಮಿಥ್ಯವೆಂಬರು
ಮಹಾಭಾರತದಲ್ಲಿ ವಿಷ್ಣು ಈಶ್ವರಂಗೆ ಬಿನ್ನಹವಂ ಮಾಡಿದುದ
ಕೇಳಿರೇ

ಮನ್ಮಾಥಂ ಲೋಕನಾಥಂ ಚ ಆದ್ಯಕ್ಷರ ಸಮಾಯುತಮ್ ।
ಏಕಮೇವ ಮಹಾದೇವಂ ಮಹೇಶಾನಂ ಪರಂ ಸ್ಥಿತಮ್ ॥
ಈಶ್ವರಸ್ಯ ಸಮೋ ನಾಸ್ತಿ ಬ್ರಹ್ಮವಿಷ್ಣ್ವಸ್ಯ ಕಿಂಕರೌ ।
ಶಿವವಾಕ್ಯ ಸಮೋ ನಾಸ್ತಿ ವೇದಶಾಸ್ತ್ರಾಗಮೇಷು ಚ ॥

ಇಂತೆಂಬ ಮಹಾ ವಿಷ್ಣುವಿನ ಮಹಾಭಾರತವ ಕೇಳಿಯರಿಯಿರೇ;
ಓದಿದ ಮಾತು ತಥ್ಯವೇ ಅಲ್ಲ.

ತಮ್ಮ ಅಭದೇವತೆಯಾದ ವಿಷ್ಣುವಿನ ಮಾತು ಮಿಥ್ಯವೆಂಬ
ಚಾಂಡಾಲರ ಮುಖವ ನೋಡಲಾಗದು
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೨

ದ್ವಿಜರೊಮ್ಮೆ ಮರೆದು ನೀಳಬೊಟ್ಟನಿಟ್ಟರಾದಡೆ
ಶೂಲಾಕಾರ ಬಟುವು ಬೊಟ್ಟು ಅರ್ಧಚಂದ್ರರೇಖೆ ಅಂಕುಶರೇಖೆ
ಇವನು ಹಣೆಯಲ್ಲಿಟ್ಟುಕೊಂಡರಾದಡೆ
ಅವರ ಪರಿಯಲ್ಲಿಯೇ ಅಸಿಯ ಗರಗಸವ ಮಾಡಿ
ಯಮನ ಕಿಂಕರರು ಸೀಳುವರೆಂದುದು ನೋಡಾ

ಸ್ಕಾಂದೇ—

> ಊರ್ಧ್ವಪುಂಡ್ರ ದ್ವಿಜಃ ಕುರ್ಯಾಲ್ಲೀಲಯಾ ನ ಕದಾಚನ ।
> ತದಾ ಕಾರೇಣ ಶಸ್ತ್ರೇಣ ಬಾಧ್ಯತೇ ಯಮಕಿಂಕರೈಃ ॥
> ಊರ್ಧ್ವಪುಂಡ್ರಂ ಚ ಶೂಲಂ ಚ ವರ್ತುಲಂ ಚಾರ್ಧಚಂದ್ರಕಮ್ ।
> ಲಲಾಟೇ ಧಾರಯಿಷ್ಯಂತಿ ಮನುಷ್ಯಾಃ ಪಾಪಕರ್ಮಿಣಃ ॥

ಇಂತೆಂಬ ಪುರಾಣ ವಾಕ್ಯಂಗಳ ಕೇಳಿ ಇನ್ನಾವರೂ ಬೇಗ
ವಿಭೂತಿಯಂ ಧರಿಸಿ ಭೋ
ಕೆಡಬೇಡ ಕೆಡಬೇಡ ವಿಭೂತಿಯನಿಡಿರೆಂದು ಹೇಳುವ
ವೇದವನೊಲ್ಲದೆ ಮಟ್ಟಿಯನಿಡುವರು ದ್ವಿಜರು ನೋಡಾ
ತಪ್ತಪಾತ ತ್ರಿಶೂಲ ಲಿಂಗಮುದ್ರೆಯನೊತ್ತಿದ ಕಾರಣ
ಉತ್ತಮ ವೃಷಭನೆನಿಸಿಕೊಂಡಿತ್ತು
ತಪ್ತವಿಲ್ಲದ ಅತಪ್ತ ತನುವನು ಅಸ್ಪೃಶ್ಯವೆಂದು ಅಜಹರಿಗಳೊಲ್ಲರು

ಅದೆಂತೆಂದಡೆ ಋಗ್ವೇದೇ—

> ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ
> ವಿಶ್ವತಃ ।
> ಅತಪ್ತತನುರ್ನತದಾಮೋಽಶ್ನುತೇ ಶ್ರಿತಾಸ ಇದ್ವಹಂ ತಸ್ತತ್ಸಮಾಶತ ॥

ಎಂದುದಾಗಿ ಮತ್ತಂ ಯಜುರ್ವೇದೇ—

> ಏತೇ ಗಾತ್ರಾಗ್ನಿ ನಾಹಜೇವಾನಾಭಿ ಶೂಲಂ ನ ಸಹಿತಸ್ಯ ವತೇದಾವತೇತಿ ।
> ಮಾತದ್ಭೂಸ್ಯಾ ಶ್ರೀಸ್ತಂ ಮಾತೃಕೇಷು ದೇವೇಭ್ಯಸ್ತ ಮಸೇಭ್ಯೋ
> ರಾತಮಸ್ತು ॥

ಇಂತೆಂದು ಯಜುರ್ವೇದವು ಸಾರುತ್ತಿದೆ
ಶ್ರೀವಿಭೂತಿ ರುದ್ರಾಕ್ಷಿ ಅಂಗದ ಮೇಲೆ ಲಿಂಗಧಾರಣೆ
ಉಳ್ಳಾತನೇ ಸದ್ಬ್ರಾಹ್ಮಣನೆಂದುದು ವೇದ
ಮಟ್ಟಿಯಸಿದಿ ಎಂದು ಹೇಳಿದ ವೇದ ಉಳ್ಳರೆ ತೋರಿರೋ
ರುದ್ರನನರ್ಚಿಸುವ ರುದ್ರಂಗೆ ಡಿಂಗರಿಗ ನಾನಪ್ಪೆನಯ್ಯಾ
ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ

೩

ಶಿವಶಿವಾ ಆವನಾನೊಬ್ಬನು ಶ್ರೀಮಹಾದೇವನ
ದಿವ್ಯಕಾಂತಿಯಿಂದೊದಗಿದ ಶ್ರೀಮಹಾಭಸಿತವಂ ಬಿಟ್ಟು
ಹಣೆಯಲ್ಲಿ ಗೋಪಿ ಮಲಿನ ಸಾದು ಕಸ್ತೂರಿ ಚಂದನಂಗಳೆಂಬ
ಮಣ್ಣು ಮಸಿಗಳಿಂದ ನೀಳಬೊಟ್ಟು ಕಾಗೆಬರೆ ಬಟುಹುಬೊಟ್ಟು
ಅರ್ಧಚಂದ್ರರೇಖೆ ಅಂಕುಶರೇಖೆ ಇವು ಮೊದಲಾದ ಕಾಕುವರೆಗಳ
ವಿಶ್ವಾಸದಿಂದಿಡುತಿಪ್ಪ ಪಾತಕರ ಮುಸುಡಿ ನೋಡಲಾಗದು
ಅದು ಅಶುದ್ಧ ಅದು ಪಾಪದ ರಾಶಿ ಅದಂ ನೋಡಿದಡೆ
ಮಹಾದೋಷವು

ಅದೆಂತೆಂದಡೆ ಪರಾಶರೇ—

> ಊರ್ಧ್ವಪುಂಡ್ರಂ ಚ ಶೂಲಂ ಚ ವರ್ತುಲಂ ತ್ವರ್ಧಚಂದ್ರಕಮ್ ।
> ಲಲಾಟೇ ಧಾರಯಿಷ್ಯಂತಿ ಮನುಷ್ಯಾಃ ಪಾಪಕರ್ಮಿಣಃ ॥

ಮತ್ತಂ ಶಾಂಭವ ಪುರಾಣೇ—

> ಅಶುದ್ಧಂ ಚ ತಥಾ ಪ್ರೋಕ್ತಂ ವರ್ತುಲಂ ಚೋರ್ಧ್ವಪುಂಡ್ರಕಂ ।
> ಅಶುದ್ಧಂ ಚಾರ್ಧಚಂದ್ರಂ ಚ ಕೀರ್ತಿತಂ ಚಾಂಕುಶಾದಿಭಿಃ ॥

ಮತ್ತಂ ಸೂತಸಂಹಿತಾಯಾಮ್—

> ಅಶ್ರೌತಂ ಚೋರ್ಧ್ವಪುಂಡ್ರಾದಿ ಲಲಾಟೇ ಶ್ರದ್ಧಯಾ ಸಹ ।
> ಧಾರಯಿಷ್ಯಂತಿ ಮೋಹೇನ ಪಾಷಂಡೋಪಹತಾ ಜನಾಃ ॥

ಮತ್ತಂ ಮಾನವ ಪುರಾಣೇ—

ಊರ್ಧ್ವಪುಂಡ್ರಂ ಚ ಶೂಲಂ ಚ ವರ್ತುಲಂ ಚಾರ್ಧಚಂದ್ರಕಮ್ ।
ತತ್ರನಿಷ್ಠೈರ್ನಧಾರ್ಯಂ ಚ ನ ಧಾರ್ಯಂ ವೈದಿಕೈರ್ಜನೈಃ ॥
ಊರ್ಧ್ವಪುಂಡ್ರಮುಖಂ ದೃಷ್ಟ್ವಾ ವ್ರತಂ ಚಾಂದ್ರಾಯಣಂ ಚರೇತ್ ।

ಮತ್ತೆಯೂ ಸ್ಕಾಂದ ಪುರಾಣೇ—

ಊರ್ಧ್ವಪುಂಡ್ರಂ ದ್ವಿಜಃ ಕುರ್ಯಾಲ್ಲೀಲಯಾ ನ ಕದಾಚನ ।
ತದಾಕಾರೇಣ ಶಸ್ತ್ರೇಣ ಬಾಧ್ಯತೇ ಯಮಕಿಂಕರೈಃ ॥

ಎಂದುದಾಗಿ ಶ್ರೀಮಹಾವಿಭೂತಿಯುಂ ಬಿಟ್ಟು ವೇದವಿರುದ್ಧವಾದ
ಮಟ್ಟಿಮಸಿಗಳ ಹಣೆಯಲ್ಲಿಡುತಿರ್ಪ
ಪಂಚಮಹಾಪಾತಕರ ಅಧಮರ ಮುಸುಡಿ ನೋಡಲಾಗದು ಕಾಣಾ
ಕೂಡಲ ಚೆನ್ನಸಂಗಮದೇವಾ

೬

ವೇದಶಾಸ್ತ್ರಾಗಮಪುರಾಣಂಗಳಲ್ಲಿ ತಾತೇಗ್ರಸಿದ್ಧವಾಗಿ
ಕೊಂಡಾಡಿಸಿಕೊಳ್ಳಲ್ಪಟ್ಟ ಶ್ರೀ ಭಸಿತವ
ಧರಿಸುವಾತನೇ ಸದ್ಬ್ರಾಹ್ಮಣ
ಇಂತಪ್ಪ ಮಹಾಭಸಿತವ ಬಿಟ್ಟು ಅಜ್ಞಾನವಿಂದ
ವೇದಶಾಸ್ತ್ರಾಗಮ ಪುರಾಣಂಗಳಲ್ಲಿ ವಿರುದ್ಧವಾದ
ಮಟ್ಟಿಮಸಿಗಳ ಹಣೆಯಲಿಟ್ಟುಕೊಂಡನಾದಡೆ
ಅವ ಬ್ರಾಹ್ಮಣನಲ್ಲ ಅವ ಪಂಚಮಹಾಪಾತಕನು
ಆತ ಶ್ವಪಚನೆಂಬುದು ಪುರಾಣ ಪ್ರಸಿದ್ಧ

ಅದೆಂತೆಂದಡೆ ಗಾರುಡ ಪುರಾಣೇ—

ಶ್ರುತಯಃ ಸ್ಮೃತಯಃ ಸರ್ವೇ ಪುರಾಣಾನ್ಯಖಿಲಾನಿ ಚ ।
ವದಂತಿ ಭಸ್ಮಮಾಹಾತ್ಮ್ಯಂ ತತಸ್ತದ್ಧಾರಯೇದ್ದ್ವಿಜಃ ॥
ಅಭಾವೇನ ತಥಾ ವಿಪ್ರ ಲೌಕಿಕಾಗ್ನೇಸ್ತಥಾ ಹರೇತ್ ।
ಭಸ್ಮನೈವ ಪ್ರಕುರ್ವೀತ ನ ಕುರ್ಯಾನ್ಮೃತ್ತಿಕಾದಿಭಿಃ ॥
ಗೋಪೀ ಮಲಿನಧಾರೀ ಚ ಶಿವಂ ಸ್ಪೃಶತಿ ಯೋ ದ್ವಿಜಃ
ಶತೈಕವಿಂಶತಿಕುಲಂ ಸೋಽಕ್ಷಯಂ ನರಕಂ ವ್ರಜೇತ್ ॥

ಮತ್ತಂ ಕೂರ್ಮ ಪುರಾಣೇ —

ತ್ರಿಪುಂಡ್ರಂ ಬ್ರಾಹ್ಮಣೋ ವಿದ್ವಾನ್ಮನಸಾಪಿ ನ ಲಂಘಯೇತ್ ।
ಶ್ರುತ್ಯಾ ವಿಧೀಯತೇ ತಸ್ಮಾತ್ತತ್ತ್ಯಾಗೀ ಪತಿತೋ ಭವೇತ್ ॥

ಎಂದುದಾಗಿ ನಮ್ಮ ಕೂಡಲ ಚೆನ್ನಸಂಗಮದೇವರಲ್ಲಿ
ಶ್ರುತಿ ಸ್ಮೃತಿ ಪ್ರಸಿದ್ಧವಾದ ಶ್ರೀ ವಿಭೂತಿಯನಿಟ್ಟಾತನೇ ಸದ್ಬ್ರಾಹ್ಮಣ
ಈ ಮಹಾ ದಿವ್ಯ ಭಸಿತವ ಬಿಟ್ಟು ಮಣ್ಣು ಮಸಿ ಮರದ ರಸಂಗಳ
ಹಣೆಯಲ್ಲಿ ಬರೆದುಕೊಂಡನಾದಡೆ
ಅವ ವಿಪ್ರನಲ್ಲ ಆ ಪಾಪಿ ಶ್ವಪಚ ಕಾಣಿ ಭೋ

೫೫

ಕೇಳೀಭೋ ಕೇಳಿಭೋ ವಿಪ್ರರೆಲ್ಲರು
ಬ್ರಹ್ಮಾಂಡ ಪುರಾಣದಲ್ಲಿ ನಿಮ್ಮ ಬ್ರಹ್ಮ ನುಡಿದ ವಾಕ್ಯವ—

ವಿಪ್ರಾಣಾಂ ವೇದವಿದುಷಾಂ ವೇದಾಂತಜ್ಞಾನವೇದಿನಾಮ್ ।
ಸಿತೇನ ಭಸ್ಮನಾ ಕಾರ್ಯಂ ತ್ರಿಪುಂಡ್ರಮಿತಿ ಪದ್ಮಭೂಃ ॥

ಎಂದುದಾಗಿ ನಂಬಿ ಧರಿಸಿ ಭೋ ವಿಪ್ರರೆಲ್ಲರು ಶ್ರೀಮಹಾ ಭಸಿತವ
ಇದ ನಂಬಿಯೂ ನಂಬದೆ ಅಜ್ಞಾನದಿಂದ ಶ್ರೀಮಹಾ ಭಸಿತವ ಬಿಟ್ಟು
ಮಣ್ಣು ಮಸಿ ಮರದ ರಸಂಗಳ
ಮೋಹದಿಂದ ನಿಮ್ಮ ಹಣೆಯಲ್ಲಿ ಬರೆದು ಕೊಂಡಿರಾದಡೆ
ನಮ್ಮ ಕೂಡಲ ಸಂಗಮ ದೇವರಲ್ಲಿ ನಿಮ್ಮ ಅಧಿದೈವವೇ
ನಿಮ್ಮ ಕಿವಿಮೂಗ ಕೊಯ್ದು ಇಟ್ಟಿಗೆಯಲೊರಸಿ ಕನ್ನಡಿಯ ತೋರಿ
ನಡೆಸಿ ನರಕದಲ್ಲಿ ಕೆಡಹದೆ ಬಿಡ ಕಾಣಿ ಭೋ
ಇದನರಿದು ಮರೆಯದೇ ಧರಿಸಿ ಭೋ
ಕೆಡಬೇಡ ಕೆಡಬೇಡ ಮಹತ್ತಪ್ಪ ಶ್ರೀಮಹಾ ಭಸಿತವ ಧರಿಸಿ
ಮುಕ್ತರಾಗಿರೋ

೬

ಶಿವಶಿವಾ ತಟ್ಟು ಮಟ್ಟಿಯನಿಟ್ಟ ವಿಪ್ರನ ಬಟ್ಟೆಯಲಿ ಕಂಡು
ಸೆಟ್ಟನೆ ಶಿವಭಕ್ತ ಜೋಹಾರ ಎಂದಡೆ
ಸುರಾಪಾನದಲ್ಲಿ ಮಜ್ಜನವ ಮಾಡಿದಂತಾಯಿತ್ತವನ ಶಿವಪೂಜೆ

ಕಟ್ಟಿದ ಕೆರೆಯನೊಡೆದಂತಾಯಿತ್ತವನ ಶಿವಪೂಜೆ
ಅಮೇಧ್ಯವ ಭುಂಜಿಸಿದಂತಾಯಿತ್ತವನ ಶಿವಪೂಜೆ
ಹೇಲೊಳಗಣ ಹುಳುವ ಕೋಳಿ ಕೆದರಿದಂತಾಯಿತ್ತವನ ಶಿವಪೂಜೆ
ಒಣಗಿದೆಲುವ ಸೊಣಗ ಕಡಿದು-
ತನ್ನ ರಕ್ತವ ತಾನೆ ಭುಂಜಿಸಿದಂತಾಯಿತ್ತವನ ಶಿವಪೂಜೆ
ಅವನ ಸರ್ವಾಂಗವೂ ಪಾಕುಳದ ಕುಳಿಯಂತಾಯಿತ್ತು
ಕನ್ನಡಿಯ ಮೇಲೆ ಉದ್ದುರುಳಿದಂತಾಯಿತ್ತವನ ಶಿವಪೂಜೆ
ಅರೆಯ ಮೇಲೆ ಆಡು ಹಿಕ್ಕೆಯನಿಟ್ಟಂತಾಯಿತ್ತವನ ಶಿವಪೂಜೆ
ಲೋಳಿಸರದ ಮೇಲೆ ಬಂಡಿ ಹರಿದಂತಾಯಿತ್ತವನ ಶಿವಪೂಜೆ

ಅದೆಂತೆಂದಡೆ ವಿಷ್ಣುಪುರಾಣೇ—

> ಬ್ರಹ್ಮಬೀಜತ್ವಣಂ ನಾಸ್ತಿ ಕೇಶವೋ ಹ್ಯಧಿದೇವತಾ ।
> ಗುರುಭ್ರಷ್ಟಶ್ಚ ಚಾಂಡಾಲೋ ವಿಪ್ರಃ ಶ್ವಾನೋಽಪಿ ಜಾಯತೇ ॥
> ಬ್ರಾಹ್ಮಣಂ ದರ್ಶನಂ ಚೈವ ಪಾಪಪಂಜರಮೇವ ಚ ।
> ಬ್ರಾಹ್ಮಣಂ ವದನಂ ಚೈವ ಕೋಟಿ ಜನ್ಮಸು ಸೂಕರಃ ॥

ಎಂದುದಾಗಿ ರೇಣುಕಾದೇವಿಯ ಮಗನೇ ಬ್ರಾಹ್ಮಣನು
ಮಾತಂಗಿಯ ಮಗನೇ ಹೊಲೆಯನು
ಇವರಿಬ್ಬರು ಜಮದಗ್ನಿಗೆ ಹುಟ್ಟಿದರಾಗಿ
ಇದಕ್ಕೆ ಸಾಕ್ಷಿ ಭಾರದ್ವಾಜ ವಿಶ್ವಾಮಿತ್ರ ಅಗಸ್ತ್ಯ ನಾರದ ಕೌಂಡಿಲ್ಯ
ಈ ಐವರು ಸಾಕ್ಷಿಯಲ್ಲಿ ನಿಮ್ಮೊಳಗೆ ನೀವು ಸಂವಾದವು ಬೇಡೆಂದು
ವಿಭಾಗವಂ ಮಾಡಿಕೊಟ್ಟ ವಿವರವಂ ಕೇಳಿರಣ್ಣಾ
ಗ್ರಾಮದೊಳಗಣ ಸೀಮೆಯ ಗೃಹವನೆ ಬ್ರಾಹ್ಮಣರಿಗೆ ಕೊಟ್ಟರು
ಗ್ರಾಮದ ಹೊರಗಣ ಸೀಮೆಯ ಗೃಹವನೆ ಹೊಲೆಯರಿಗೆ ಕೊಟ್ಟರು
ಸತ್ತು ಹಸುವನೆಳೆದುಕೊಂಡು ಹೋಹವರನೇ ಹೊಲೆಯರ ಮಾಡಿದರು
ಜೀವದ ಹಸುವ ಹದಿನೆಂಟು ಜಾತಿಯ ಮಂಚದಡಿಯಲ್ಲಿ ನುಸಿದು
ಗೋದಾನಮುಖದಲ್ಲಿ ಕೊಂಡು ಹೋಹವರನೆ ಬ್ರಾಹ್ಮಣರ ಮಾಡಿದರು

ಇನ್ನು ನಿಮಗೂ ತಮಗೂ ಸೊಮ್ಮು ಸಂಬಂಧವಿಲ್ಲೆಂದು ಕಂಡಾಗ
ತೊಲಗುವಂತೆ ಸಂಚೋಳಿಯೆಂಬ ನಾಮಾಂಕಿತವಂ ಕೊಟ್ಟು
ತೊರೆಪತ್ರಮಂ ಬರೆದರಾಗಿ ಇದನರಿಯದಿದ್ದರೆ ಇನ್ನೂ ಕೇಳಿರಂಣಾ
ನಳಚಕ್ರವರ್ತಿರಾಯನು ಪಿಂಡ ಪಿತ್ರುಕಾರ್ಯವ ಮಾಡುವಲ್ಲಿ
ಹೊನ್ನ ಗೋವಂ ತಂದು ಬಿನ್ನಾಣದಲ್ಲಿ ದಾನವ ಕೊಟ್ಟಲ್ಲಿ
ಹೊಲೆಯರು ನಾಡಕೂಟವ ಕೂಡಿ ಆಸ್ಥಲ ತಾರ್ಕಣೆಯಲ್ಲಿ
ಪೂರ್ವಸಾಧನ ಸಂಬಂಧದಿಂದ ನ್ಯಾಯವ ಮಾಡಿ
ಇತ್ತಂಡವು ಹಂಚಿಕೊಂಡ ವಿವರವ ಕೇಳಿರಂಣಾ
ಕೊಂಬು ಕೊಳಗವನೆ ತೆಗೆದು
ಏಳುನೂರೆಪ್ಪತ್ತು ತೂಕ ಚಿನ್ನವ ಹಂಚಿಕೊಂಡು
ಉಳಿದ ಕೊಂಬು ಕೊಳಗವ ವಿಪ್ರರು ಎತ್ತಿಕೊಂಡರಾಗಿ,
ಆ ಹೊನ್ನ ಗೋವನಳಿದು ತಿಂಬ ಕುನ್ನಿಗಳ ಕಂಡು ಕೇಳಿಯೂ
ಅರಿದು ಮರೆದು ಉತ್ತಮ ಕುಲದ್ವಿಜರೆಂದು
ಅಲ್ಲಿ ಉಪದೇಶವಂ ಕೊಂಡು ನಮಸ್ಕರಿಸುವ ಅಜ್ಞಾನಿ ಹೊಲೆಯರ
ನಾನೇಂನೆಬೆನಯ್ಯಾ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ

ಈ ಪ್ರಕಾರದಿಂ ಊರ್ಧ್ವಪುಂಡ್ರಾಂಕಿತರು ಶಿವಭಕ್ತಂಗೆ ಸಮವಲ್ಲ ವೆಂಬುದಂ ಪ್ರತಿಷ್ಠೆಯಿಂ ಮಾಡಿ ನುಡಿದರ್ಮಹಾಪುರಾತರು. ಇಂತಹ ಊರ್ಧ್ವಪುಂಡ್ರಮಂ ಬಿಟ್ಟು ಶಿವಭಕ್ತನಾದೆನೆಂಬಾತಂಗೆ ಗುರುವಿಲ್ಲದೇ ಲಿಂಗವನರ್ಚಿಸಲಾಗದೆಂದು ನುಡಿದ ವಚನಂಗಳು.

ಭೀಮಾಗಮೇ—

ಯಥಾ ಮೃಗಪತಿಂ ದೃಷ್ಟ್ವಾ ವನೇ ಭೀತೋ ಗಜೋತ್ತಮಃ ।
ಅದೀಕ್ಷಸ್ತ್ವರ್ಚಯೇಲ್ಲಿಂಗಂ ತಥಾ ಭೀತೋ ಮಹೇಶ್ವರಃ ॥ ೧ ॥

ಆವನೊಬ್ಬನು ಗುರೂಪದೇಶವಿಲ್ಲದೆ ಲಿಂಗವನರ್ಚಿಸಿದಡೆ ಸಿಂಹವ ಕಂಡ ಆನೆಯು ಹೇಗೆ ಓಡುವದೋ ಹಾಗೆ ಶಿವನು ಓಡುವನೆಂಬುದಂ ಶಿವನೇ ನಿರೂಪಕೊಟ್ಟ ವಾಕ್ಯವು.

ತ್ರಿಪುಂಡ್ರಂ ಚೈವ ರುದ್ರಾಕ್ಷಂ ನಿತ್ಯಾರ್ಚನಜಪಂ ತಥಾ ।
ಜಪೇದ್ಧ್ಯಾನಾದಿಕಂ ಸರ್ವಂ ದೀಕ್ಷಾಹೀನಸ್ಯ ನಿಷ್ಫಲಂ ॥ ೨ ॥

ಗುರುಕಾರುಣ್ಯವಿಲ್ಲದೆ ವಿಭೂತಿ ರುದ್ರಾಕ್ಷಿಗಳಂ ಧರಿಸಿದಡೆ ಜಪಧ್ಯಾನ ಲಿಂಗಾರ್ಚನೆಯಂ ಮಾಡಿದಡೆ ಫಲವಿಲ್ಲ.

ಅದೀಕ್ಷಿತಶ್ಚ ಯೋ ವಿಪ್ರಶ್ಚತುರ್ವೇದಧರೋऽಪಿ ವಾ
ಸಂಸ್ಪೃಶೇದ್ಯದಿ ವಾ ಲಿಂಗಂ ಶ್ವಾನಯೋನೌ ಪುನರ್ಭವೇತ್ ॥ ೩ ॥

ಶಿವಸಂಸ್ಕಾರವಿಲ್ಲದವ ನಾಲ್ಕು ವೇದವ ಬಲ್ಲವನಾದರೂ ಲಿಂಗವ ಮುಟ್ಟಲಾಗದು. ಅಲ್ಲಿ ಮುಟ್ಟಿ ಪೂಜಿಸಿದರೆ ನಾಯ ಜನ್ಮದಲ್ಲಿ ಹುಟ್ಟಿ ನರಕವನನುಭವಿಸುವನು.

ಸೋಮ ತಂಬುವಿನಲ್ಲಿ—

ಶಿವಸಂಸ್ಕಾರಹೀನಸ್ತು ಸ್ಪೃಶೇಲ್ಲಿಂಗೇ ದ್ವಿಜಾದಿಭಿಃ ।
ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಮ್ ॥ ೪ ॥

ಶಿವಸಂಸ್ಕಾರವಿಲ್ಲದ ವಿಪ್ರನಾವನಾದಡಾಗಲಿ ಲಿಂಗವ ಮುಟ್ಟಿದಡೆ ಅಕ್ಷಯಕಾಲ ನರಕದಲ್ಲಿ ಬೀಳುವನು.

ಶಿವಧರ್ಮೇ—

ಶ್ವಾನಾಸದವ್ಯಗಾಶ್ಚಾಪಿ ಸರ್ಪಸೂಕರಗಾರ್ದಭಾಃ ।
ಪಿಶಾಚಪ್ರೇತಭೂತಾಶ್ಚ ಶಾರ್ದೂಲೋ ರಾಕ್ಷಸಸ್ತಥಾ ॥ ೫ ॥

ಚರ್ಮೀ ಚ ಸಚ ಚಾಂಡಾಲೋ ಲುಬ್ಧಮಾಂಸೋಪಜೀವಿನಃ ।
ದುಃಕರ್ಮಾಣಿ ದುರಾಚಾರೇ ಜಾಯತೇ ಕ್ರೂರ ಜಂತುಷು ॥ ೬ ॥

ಇತ್ಯೇವಂ ಗುರುಹೀನಸ್ತು ಶಿವಪೂಜಾಂ ವಿವರ್ಜಯೇತ್।
ಪೂಜಯೇದ್ಗುರುಕಾರುಣ್ಯಾಚ್ಛಿವಂ ಪ್ರೀತಿಕರಂ ಶುಭಮ್ ॥ ೭ ॥

ಗುರೂಪದೇಶವಿಲ್ಲದಾತನು ಶಿವಲಿಂಗ ಪೂಜಿಸಲಾಗದು. ಹಾಗೆ ಪೂಜಿಸಿದರೆ ನಾಯಿ, ಮೃಗಂಗಳು, ಮರ್ಕಟೆ, ಹಂದಿ, ಕತ್ತೆ, ಪಿಶಾಚಿಗಳು ಪ್ರೇತ ಭೂತ ಹುಲಿ ರಾಕ್ಷಸ ಸಮ್ಮಗಾರ ಹೊಲೆಯ ಬೇಡ ಇಂತೀ ಕಷ್ಟ ಜನ್ಮಂಗಳಲ್ಲಿ ದುಷ್ಕರ್ಮಿಯಾಗಿ ಹುಟ್ಟಿ ನಗಕವನ್ನು ಅನುಭವಿಸುವನು. ಅದು ಕಾರಣ ಗುರು ಕರುಣವಿಡಿದು ಮಾಡುವ ಪೂಜೆಯೇ ಶಿವಂಗೆ ಪ್ರಿಯವು.

## ವಚನಗಳು

೧

ವೇದವನೋದಿದರೇನು ಶಾಸ್ತ್ರಪುರಾಣಾಗಮಂಗಳ ಕೇಳಿದಡೇನು
ಗುರುಕಾರುಣ್ಯವಿಲ್ಲದವನು ಲಿಂಗವ ಮುಟ್ಟಿ ಪೂಜಿಸಲಾಗದು
ಜಪಧ್ಯಾನ ವಿಭೂತಿ ರುದ್ರಾಕ್ಷಿಯ ಧರಿಸಿದಡೇನು
ಗುರೂಪದೇಶವಿಲ್ಲದೆ ಲಿಂಗವ ಪೂಜಿಸದಡೆ
ಅವನು ಪಂಚಮಹಾಪಾತಕನು ಅವನ ಮುಖವ ನೋಡಲಾಗದು
ಇದನರಿದು ಗುರುಕರುಣವಿಡಿದು ಮಾಡುವ ಪೂಜೆಯೇ
ಶಿವಂಗೆ ಪ್ರೀತಿ
ಇದನರಿಯದೆ ಗುರುಕರುಣವಿಲ್ಲದೆ ಶಿವಲಿಂಗ ಪೂಜೆಯ
ಮಾಡಿದಡೆ
ಅಘೋರ ನರಕ ತಪ್ಪದು ಮಹಾಲಿಂಗ ಕಲ್ಲೇಶ್ವರಾ

೨

ಗುರುವಾಕ್ಯದಿಂದಲ್ಲದೆ ಗುರುವನರಿಯಬಾರದು
ಗುರುವಾಕ್ಯದಿಂದಲ್ಲದೆ ಲಿಂಗವನರಿಯಬಾರದು
ಗುರುವಾಕ್ಯದಿಂದಲ್ಲದೆ ಜಂಗಮವನರಿಯಬಾರದು
ಗುರುವಾಕ್ಯದಿಂದಲ್ಲದೆ ಪ್ರಸಾದವನರಿಯಬಾರದು
ಗುರುವಾಕ್ಯದಿಂದಲ್ಲದೆ ತನ್ನನರಿಯಬಾರದು
ಹಿಂದಣ ಜನ್ಮದಲ್ಲಿ ಗುರುವಾಕ್ಯವಿಡಿದು ಗುರುವ ಪೂಜಿಸಿ
ಇಂದು ಜ್ಞಾನೋದಯವಾದರೆ ಜ್ಞಾನವಾಯಿತ್ತೆಂದು
ಗುರುವಾಕ್ಯವ ಮೀರಿ ಆಯಿತ್ತೆನ್ನಬಹುದೇ
ತನ್ನಲ್ಲಿ ತಾನು ಸನ್ನಿಹಿತನಾದೆನೆಂದರೆ ಗುರುವಿಲ್ಲದೆ ಆಗದು ಕೇಳಾ
ಎನ್ನ ಅಜಗಣ್ಣನೆಂಬ ಗುರುವಿಂದಲ್ಲದೆ
ಆರೂಢಿಂತು ಕೂಟವು ಸ್ವಯವಾಗದು ಕೇಳಾ

ಇಂತೀ ಪ್ರಕಾರದಿಂ ಗುರುಕಾರುಣ್ಯವಿಡಿದು ಲಿಂಗಾರ್ಚನೆಯಂ ಮಾಡಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಪುರಾತನರು. ಆ ಗುರುಕಾರುಣ್ಯವಿಡಿದು ಭಕ್ತನಾಗಿ ಲಿಂಗಾರ್ಚನೆಯಂ ಮಾಡುವೆನೆಂಬಾತನು ಅನ್ಯದರ್ಶನಂಗಳಲ್ಲಿ ದೀಕ್ಷೆಯಾಗಲಾಗದೆಂದು ನುಡಿದ ವಚನಂಗಳು.

ವೀರಾಗಮೇ—

ವೀರಮಾಹೇಶ್ವರಃ ಪ್ರೋಕ್ತೋ ವೀರತಂತ್ರೇಣ ದೀಕ್ಷಿತಃ ।
ಅನ್ಯಾಶ್ರಮಪರಿಗ್ರಾಹೀ ವೀರಶೈವಃ ಕಥಂ ಭವೇತ್ ॥ ೧ ॥

ವೀರಶೈವ ದೀಕ್ಷಿತನಾದವನು ವೀರಮಾಹೇಶ್ವರನೆಂದು ಹೇಳಲ್ಪಡುವನು. ಅನ್ಯಾಶ್ರಮಂಗಳಲ್ಲಿ ದೀಕ್ಷಿಸಲ್ಪಟ್ಟಾತನು ವೀರಶೈವನು ಹೇಗಾಗುವನು.

ವೇದಾಗಮಪ್ರಮಾಣೇನ ಚರಿತಂ ವೀರಶೈವಾನಾಮ್ ।
ಅನ್ಯಮಾರ್ಗೈಸ್ತು ಸರ್ವೋರ್ಹಿ ಪಾಷಂಡೀ ಭವತಿ ಧ್ರುವಮ್ ॥ ೨ ॥

ವೀರಶೈವರಾದ ಪುರುಷರ ಚಾರಿತ್ರವು ವೇದಾಗಮ ಪ್ರಮಾಣವುಳ್ಳುದು ಅಂತಲ್ಲದೆ ಅನ್ಯಮಾರ್ಗವನುಳ್ಳವರು ಪಾಷಂಡಿಗಳಾಗುತ್ತಿಹರೆಂಬುದು ಸತ್ಯವು.

ವ್ರತೀ ಪಾಶುಪತಶ್ಚೈವ ಕಾಲಾಮುಖಿ ಕಪಾಲಿಕಃ ।
ಲಿಂಗಾಂಗಸಂಗಹೀನಸ್ಸ್ಯಾತ್ತಚ್ಛಿಷ್ಯೋ ನರಕಂ ವ್ರಜೇತ್ ॥ ೩ ॥

ಲಿಂಗಾಂಗ ಹೀನರಾದ ವ್ರತಿಕರೆಂಬುವರು ಪಾಶುಪತರು ಕಾಳಾಮುಖರು ಕಾಪಾಲಿಕರು ಇವರುಗಳು ಗುರುವೆಂದು ದೀಕ್ಷೆಯಂ ಕೊಂಡ ಶಿಷ್ಯರುಗಳಿಗೆ ನರಕ ತಪ್ಪದು.

ಏಕಲಿಂಗಾರ್ಚನಂ ದೀಕ್ಷಾ ಸಾಕ್ಷಾಲ್ಲಿಂಗಂ ನಿರಂಜನಂ ।
ಬಹುಲಿಂಗಾರ್ಚನಂ ದೀಕ್ಷಾ ವೇಶ್ಯಾಗರ್ಭೋದ್ಭವೋ ಭವೇತ್ ॥ ೪ ॥

ಲಿಂಗವೊಂದರಲ್ಲಿಯೇ ತತ್ಪರನಾದ ಗುರುವಿನಲ್ಲಿ ದೀಕ್ಷೆಯಂ ಕೊಂಡಾತನು ಪ್ರತ್ಯಕ್ಷವಾದ ನಿರಂಜನ ಲಿಂಗಾಂಗಿ ಎನಿಸಿಕೊಳ್ಳುವನು. ಹಲವು ದೈವಂಗಳುಳ್ಳ ಗುರುವಿನಲ್ಲಿ ದೀಕ್ಷಿತನಾದವನು ವೇಶ್ಯಾಪುತ್ರನಾಗುವನು.

ವೀರಶೈವಸ್ತು ದೀಕ್ಷಾಯಾಂ ಭುಕ್ತಿಂ ಮುಕ್ತಿಂಚ ವಿಂದತಿ ।
ತತ್ಸರ್ವಂ ಶೃಣು ದೇವೇಶ ದೇವಮಾನುಷ ದುರ್ಲಭಮ್ ॥೫॥

ವೀರಶೈವ ದೀಕ್ಷೆಯಂ ಪಡೆದಾತನು ಭುಕ್ತಿಯನ್ನು ಮುಕ್ತಿಯನ್ನು ಪಡೆವನು. ಆ ವೀರಶೈವ ದೀಕ್ಷೆಯೆಂಬುದು ದೇವತೆಗಳಿಗೂ ಮನುಷ್ಯರಿಗೂ ಪಡೆಯಲು ಅಶಕ್ಯವು.

## ವಚನಗಳು

### ೧

ಗುರುಭಕ್ತಿ ಗುರುಭಜನೆಯಿಲ್ಲದವನ ಕೈಯಲ್ಲಿ
ಕರಣವ ಪಡೆದ ನರಕಿಯ ನೆರೆಯಲಿರಲಾಗದಯ್ಯಾ
ಶಿವಭಕ್ತಿ ಶಿವಭಜನೆಯಿಲ್ಲದವನ ಕೈಯಲ್ಲಿ
ಕರುಣವ ಪಡೆದ ಪಾಪಿಯ ಸಂಗದಲ್ಲಿರಲಾಗದಯ್ಯಾ
ಶೈವಸನ್ಯಾಸಿಕಾಳಾಮುಖಿಯು
ಗುರುವೆಂಬ ಅನಾಮಿಕನ ಮಾತು ಬೇಡಯ್ಯಾ
ತಟ್ಟುಮುಟ್ಟಿಯನಿಟ್ಟ ಕೆಟ್ಟ ಭ್ರಷ್ಟರಿಗೆ ಶಿಶುವಾದ
ಕಷ್ಟ ಭ್ರಷ್ಟರನವರ ಮುಟ್ಟಲಾಗದಯ್ಯಾ
ವಿಭೂತಿ ರುದ್ರಾಕ್ಷಿ ಪಂಚಾಕ್ಷರಿಯಲ್ಲಿ ಪ್ರೇಮವಿಲ್ಲದ
ನರಕಿಯ ಗುರುವೆಂಬ ಪಾತಕರ ಮಾತ ಕೇಳಲಾಗದಯ್ಯಾ
ಶಿವಾಚಾರ ಸಂಪನ್ನರಲ್ಲದವರಲ್ಲಿ ಸದಾಚಾರವ ಪಡೆದಿಹೆವೆಂಬ
ಪಾತಕರ ಮುಖವ ನೋಡಲಾಗದಯ್ಯಾ
ಇಂತೀ ಶಿವಾಚಾರ ಸನ್ಮಾರ್ಗವನರಿಯದವರಲ್ಲಿ
ಬಲುಹಿಂದ ದೀಕ್ಷೆಯ ಮಾಡಿಸಿಕೊಂಡಾತಂಗೆ
ಕುಂಭಿಪಾತಕ-ನಾಯಕನರಕ ತಪ್ಪದು ಕೂಡಲಚೆನ್ನಸಂಗಮದೇವಾ

೨

ಅಂಧಕನು ಓಡಪಿಡಿದು ತನ್ನ ಸ್ವರೂಪವ ತಾ ನೋಡುವಂತೆ
ಶೈವಗುರುವಿನ ಕೈಯಲ್ಲಿ ಸಾಹಿತ್ಯವಾದ ಶಿಷ್ಯನ ವಿಧಿಯ ನೋಡಿರೇ
ಗುರುವಿಂಗೆ ಪೀಠಾರ್ಚನೆ ಶಿಷ್ಯಂಗೆ ಲಿಂಗಾರ್ಚನೆ
ಗುರುವೇ ವಾಯುಪ್ರಾಣಿ ಶಿಷ್ಯನೇ ಲಿಂಗಪ್ರಾಣಿ
ಗುರುವೇ ಭೂತದೇಹಿ ಶಿಷ್ಯನೇ ಲಿಂಗದೇಹಿ
ಗುರುವಿಗೆ ಅನರ್ಪಿತಭುಂಜನೆ ಶಿಷ್ಯರಿಗೆ ಲಿಂಗಾರ್ಪಿತಭುಂಜನೆ
ಗುರುವಿಗೆ ಅಗ್ನಿದಹನ ಸಂಪತ್ತು ಶಿಷ್ಯಂಗೆ ಸಿದ್ಧಸಮಾಧಿ ಸಂಪತ್ತು
ಎಂತುಂಟು ಹೇಳಿರಣ್ಣಾ ಇವರಿಬ್ಬರ ಗುರುಶಿಷ್ಯ ಸಂಬಂಧಕ್ಕೆ
ನರಕ ತಪ್ಪದು

ಅದೆಂತೆಂದಡೆ—

ಜ್ಞಾನಹೀನಗುರೂಪಾಸ್ತಿಃ ಶಿಷ್ಯಜ್ಞಾನೇನ ಸಿದ್ಧ್ಯತಿ ।
ಮೂಲಚ್ಛಿನ್ನೋ ಯಥಾ ವೃಕ್ಷಃ ಕಥಂ ಪುಷ್ಪಫಲೈರ್ಯುತಃ ॥

ಎಂದುದಾಗಿ ಇವರಿಬ್ಬರ ಗುರುಶಿಷ್ಯ ಸಂಬಂಧಕ್ಕೆ
ಅಘೋರ ನರಕ ತಪ್ಪದು ಕೂಡಲಸಂಗಮದೇವಾ

೩

ಮುಂಡೆಯ ಕೈಯಲ್ಲಿ ಬಾಗಿನವ ಕೊಂಡರೇನಯ್ಯಾ
ಗಂಡನುಳ್ಳ ಗರತಿಯರು ಮೆಚ್ಚರು
ಶೈವ ಗುರುವಿನ ಕೈಯಲಿ ಲಿಂಗಸಾಹಿತ್ಯವಾದಡೇನಯ್ಯಾ
ವೀರತರಣರು ಮೆಚ್ಚರು
ಇದು ಕಾರಣ ಕೂಡಲಚೆನ್ನಸಂಗಮದೇವಯ್ಯಾ
ಶೈವ ಗುರುವಿನ ಕೈಯಲ್ಲಿ ಲಿಂಗಸಾಹಿತ್ಯವಹುದರಿಂದ ಸಾವುದೇ
ಲೇಸಯ್ಯಾ

೪

ಪಿತನಾಚಾರವನುದ್ಧರಿಸುವಾತ ಪುತ್ರನಲ್ಲದೆ ಗತಿಗೆಡಿಸುವಾತ ಪುತ್ರನಲ್ಲ
ಅದೆಂತೆಂದಡೆ ತಂದೆಯಂಗದಮೇಲಣ ಲಿಂಗವ ಹಿಂಗಿಸಿ

ತಾನು ಕಟ್ಟಿಕೊಂಡು ಆತನ ಸುಡುವ ಪ್ರಾಣಿಗಳು ನೀವು ಕೇಳಿರೇ
ಹೋದಾತ ಭೂತಪ್ರಾಣಿ ಕಟ್ಟಿಕೊಂಡಾತ ಪ್ರೇತಲಿಂಗ ಸಂಸ್ಕಾರಿ

ಇದಕ್ಕೆ ಆಗಮ ಸಾಕ್ಷಿ—

ಪ್ರೇತ ಲಿಂಗಸ್ಯ ಸಂಸ್ಕಾರೀ ಭೂತಪ್ರಾಣಿಷು ಜಾಯತೇ ।
ಸುಪ್ರಭಾತೇ ಮುಖಂ ದೃಷ್ಟ್ವಾ ಕೋಟಿ ಜನ್ಮನಿ ಸೂಕರಃ ॥

ಎಂದುದಾಗಿ ಗುರುವಾಗಿ ಲಿಂಗಸಾಹಿತ್ಯವ ಮಾಡಿದಾತಂಗೆಯೂ
ಮಾಡಿಸಿಕೊಂಡಾತಂಗೆಯೂ
ಇವರಿಬ್ಬರ ಸಾಕ್ಷಿಯಾಗಿ ಕುಳ್ಳಿರ್ದು ಮಾಡಿಸಿದವರಿಗೆಯೂ
ಇಂತೀ ತ್ರಿವಿಧಕ್ಕೆ ಕೋಟಿ ಜನ್ಮ ನರಕತಪ್ಪದು ಕೂಡಲ
ಸಂಗಮದೇವಾ

೫

ಕುಲಹೀನ ಶಿಷ್ಯಂಗೆ ಅನುಗ್ರಹವ ಕೊಟ್ಟು
ತನ್ನ ಪ್ರಾಣಲಿಂಗವ ನಿಕ್ಷೇಪಿಸಿ ಕರ್ಣ ಮಂತ್ರವ ಹೇಳಿ
ಆ ಶ್ರೀಗುರು ಬಂದು ಆ ಶಿಷ್ಯನ ಮನೆಯ ಹೊಗಲೊಲ್ಲದೆ
ಅಕ್ಕಿ ತುಪ್ಪವನಿಸಕೊಂಡುಂಬ ಭವಗೇಡಿಗಿನ್ನೇವೆಸಯ್ಯಾ
ತನ್ನ ಪ್ರಾಣಲಿಂಗವನವರಿಗೆ ಕೊಟ್ಟು
ತಾ ಹೋಗಲೊಲ್ಲೆನೆಂಬ ವ್ರತಗೇಡಿಗಿನ್ನೇವೆನಯ್ಯಾ
ಅವನ ಧನಕ್ಕೆ ತಂದೆಯಾದನಲ್ಲದೆ ಅವನ ಕುಲಕ್ಕೆ ತಂದೆಯಲ್ಲ
ಇದು ಕಾರಣ ಮಹಾಲಿಂಗ ಕಲ್ಲೇಶ್ವರಲಿಂಗವ
ಮಾರಿಕೊಂಡುಂಬ ಭಂಗಗಾರರು ಕೆಟ್ಟಕೇಡನೇನೆಂಬೆನಯ್ಯಾ

## ಪುನರ್ದೀಕ್ಷಾ ಪ್ರತಿಷ್ಠಾ ಸ್ಥಲ ೩೫

ಈ ಪ್ರಕಾರದಿಂ ಶೈವಗುರುವಿನ ಕೈಯ್ಯಲ್ಲಿ ಲಿಂಗಸಾಹಿತ್ಯವಾಗಲಾಗ ದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿವರ್ಪುರಾತನರು. ಇಂತಹ ಶೈವಗುರುವಿನ ಕೈಯ್ಯಲ್ಲಿ ಸಾಹಿತ್ಯವಾದ ಲಿಂಗವನು ವೀರಶೈವ ಗುರುವಿನ ಕೈಯಲ್ಲಿ ಕೊಟ್ಟು ಕೊಳಬೇಕೆಂದು ನುಡಿವ ವಚನಂಗಳು.

ವೀರಾಗಮೇ–

ಶೈವದೀಕ್ಷಾಂಥಕಾದಂ ತು ಪುನರ್ದೀಕ್ಷಾ ಪ್ರಕಾಶತೇ ।
ವಿಶೇಷ ವೀರಶೈವಾನಾಂ ಸತ್ಯಂ ಸತ್ಯಂ ಷಡಾನನ ॥ ೧ ॥

ಅಂತಹ ಶೈವದೀಕ್ಷೆಯೆಂಬುದು ಕತ್ತಲೆಯೊಳಗಿರ್ದೊರ್ವಾದಿ ಅವರು ಗಳಿಗೆ ಮರಳಿ ವೀರಶೈವ ದೀಕ್ಷೆಯಾಗಬೇಕು. ವೀರಶೈವದೀಕ್ಷೆಯೇ ವಿಶೇಷ ಕಾರಣ ಇದು ತಪ್ಪದು ಎಂದು ಸ್ವಾಮಿ ಕುಮಾರಂಗೆ ನಿರೂಪಿಸಿದ್ದು.

ಲಿಂಗಹೀನಜಟಾಧಾರಿ ಕಾಳಾಮುಖಿ ಕಪಾಲಿಭಿಃ ।
ಪ್ರಮಾದಾದ್ಗ್ರಹ್ಯತೇ ಲಿಂಗಂ ಪುನರ್ದೀಕ್ಷಾಂ ಲಭೇನ್ನರಃ ॥೨॥

ಅಂಗದ ಮೇಲೆ ಲಿಂಗವಿಲ್ಲದ ಜಟಾಧಾರಿಯಾದಡೆಯೂ ಕಾಳಾ ಮುಖಿಯಾದರೂ ಕಪಾಲಿಯಾದರೆಯೂ ಅವರ ಕೈಯ್ಯಲ್ಲಿ ದೀಕ್ಷೆಯ ಕೊಳಲಾಗದು ಪ್ರಮಾದವಶದಿಂದ ಪ್ರಾಣಲಿಂಗ ದೀಕ್ಷೆಯ ಮಾಡಿಸಿ ಕೊಂಡಾತಂಗೆ ಮರಳಿ ವೀರಶೈವ ದೀಕ್ಷೆಯಾಗಬೇಕು.

ಶೈವವೈಷ್ಣವಚಾರ್ವಾಕ ಬೌದ್ಧಕ್ಷಪಣ ಕಾಳಕೈಃ ।
ಪ್ರಮಾದಾದ್ಗ್ರಹ್ಯತೇ ಲಿಂಗಂ ಪುನರ್ದೀಕ್ಷಾ ಭವಿಷ್ಯತಿ ॥೩॥

ಬರಿಯ ಶೈವನಲ್ಲಿ ವೈಷ್ಣವನಲ್ಲಿ ಚಾರ್ವಾಕನಲ್ಲಿ ಬೌದ್ಧನಲ್ಲಿ ಕ್ಷಪ ಣಕನಲ್ಲಿ ಕಾಳನಲ್ಲಿ ಮರೆದಾದರೂ ದೀಕ್ಷೆಯಂ ಕೊಂಡಾತಂಗೆ ಮರಳಿ ದೀಕ್ಷೆಯಾಗಬೇಕು.

ಕಾರುಕೈರರ್ಚಕೈಶ್ಚೈವ ವೈಲಾರೈ ಶಾಕ್ತಿಕೈಸ್ತಥಾ ।
ದ್ವಿಜದೀಕ್ಷಾವತಃ ಪುಂಸಃ ಪುನರ್ದೀಕ್ಷಾ ತು ಪಾರ್ವತಿ ॥೪॥

ಕಪಸ್ಮಾರ ಅರ್ಚಕ ಮೈಲಾರ ಗೊರವ ಶಾಕ್ತೇಯರುಗಳ ಕೈಯಲ್ಲಿ ಶೀವದೀಕ್ಷೆಯಿಲ್ಲದ ತಂತು ಮಾತ್ರದ ಹಾರುವನ ಕೈಯಲ್ಲಿ ಕೊಂಡ ದೀಕ್ಷೆಗಳಿಗೆ ಮರಳಿ ವೀರಶೈವ ದೀಕ್ಷೆಯಾಗಬೇಕೆಂದು ದೇವನು ದೇವಿಗೆ ಹೇಳಿದನು.

ಶಕ್ತಿದೀಕ್ಷಾ ಸ್ವದೀಕ್ಷಾ ಚ ಪ್ರೇತ ದೀಕ್ಷಾ ಚ ಪಾರ್ವತಿ ।
ದೀಕ್ಷಾತ್ರಯಯುತಃ ಪುಂಸಃ ಪುನರ್ದೀಕ್ಷಾ ವಿಧೀಯತೇ ॥೫॥

ಹೆಂಗಸಿನಲ್ಲಿ ದೀಕ್ಷೆಪಡೆದವಂಗೆ ತಾನೇ ಲಿಂಗವಧರಿಸಿಕೊಂಡವಂಗೆ ಸತ್ತ ತಂದೆತಾಯಿ ಲಿಂಗವ ಕಟ್ಟಿಕೊಂಡವಂಗೆ ಈ ಮೂವರಿಗೆ ಉಪದೇಶವಿಲ್ಲ ಅವರಿಗೆ ಮರಳಿ ವೀರಶೈವ ದೀಕ್ಷೆಯಾಗಬೇಕೆಂದು ಪರಮೇಶ್ವರನು ಪಾರ್ವತಿಗೆ ಹೇಳಿದನು.

## ವಚನಗಳು

೧

ಕಳ್ಳನ ಕೈಯಲ್ಲಿ ಒಂದು ಒಳ್ಳೆಯ ರತ್ನವ ಕಂಡಡೆ
ಎಲ್ಲರೂ ಬಂದು ತಲೆವಿಡಿವರಯ್ಯಾ
ಆ ರತ್ನವ ರತ್ನದ ವ್ಯವಹಾರಿ ಕೊಂಡೊಡೆ ಆರೂ ಬಾರಯಿತ್ತಲಮ್ಮರು

ಅದೆಂತೆಂದಡೆ— ಚೋರಹಸ್ತಿ ಕೃತ ರತ್ನಾನಾಂ ಪುನಃ ಕ್ರಯ ವರಂ ಯಥಾ ।
ಶೈವದೀಕ್ಷಿತಲಿಂಗಾನಾಂ ಪುನರ್ದೀಕ್ಷಾ ವಿಧೀಯತೇ ॥

ಎಂದುದಾಗಿ ಶೈವಗುರುವಿನ ಕೈಯಲ್ಲಿ ಸಾಹಿತ್ಯವಾದ ಲಿಂಗವನು
ವೀರಶೈವ ಗುರುವಿನ ಕೈಯಲ್ಲಿ ಕೊಟ್ಟು ಮರಳಿ ಕೊಂಡಡೆ
ಆತ ಇಹ ಲೋಕ ಪೂಜ್ಯನು ಪರಲೋಕ ಪೂಜ್ಯನು
ನಿಮ್ಮಾಣೆ ನಿಮ್ಮ ಪ್ರಮಥರಾಣೆ ತಪ್ಪದು
ರೇಕಣ್ಣ ಪ್ರಿಯ ನಾಗಿನಾಥಾ

೨

ವಿಷದಷ್ಟವಾಗಿದ್ದ ನರನ ಗಾರುಡ ಮಂತ್ರೌಷದಿಂದ
ಆರೋಗ್ಯ ಕಾಯನ ಮಾಡುವಂತೆ
ಶೈವಗುರುವಿನ ಕೈಯಲ್ಲಿ ಮಂತ್ರೋಪದಿಷ್ಟವಾದ ಶಿಷ್ಯಂಗೆ
ವೀರಶೈವ ಮಂತ್ರೋಪದೇಶದಿಂದ ಆತನ ಕಾಯಶುದ್ಧಾತ್ಮನಂ ಮಾಡಿ
ಆತನ ಲಿಂಗಕ್ಕೆ ಪ್ರಾಣಪ್ರತಿಷ್ಠೆಯಂ ತುಂಬಿ
ಆತನ ಅಂಗದ ಮೇಲೆ ಲಿಂಗವಂ ಬಿಜಯಂಗೈಸಿ
ಕೃತ ಕೃತ್ಯನಂ ಮಾಡಿದ ನಮ್ಮ ವೀರಶೈವ ಗುರು
ಕೂಡಲಚೆನ್ನ ಸಂಗಮದೇವಾ

## ಭವಿಸಂಗ ನಿರಸನ ಸ್ಥಲ ೩೬

ಈ ಪ್ರಕಾರದಿಂ ಶೈವಗುರುವಿನ ಕೈಯಲ್ಲಿ ಸಾಹಿತ್ಯವಾದ ಲಿಂಗವನು ವೀರಶೈವ ಗುರುವಿನ ಕೈಯಲ್ಲಿ ಕೊಟ್ಟು ಪುನರ್ದೀಕ್ಷೆಯಂ ಮಾಡಿಸಿಕೊಳ್ಳಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಆ ಶೈವದೀಕ್ಷೆಯಂ ಬಿಟ್ಟು ಪುನರ್ದೀಕ್ಷೆಯಾದೆನೆಂಬಾತಂಗೆ ಇತರ ಭವಿಗಳೊಡತಣ ಸಂಗವು ಪ್ರಯೋಜನವಲ್ಲೆಂದು ನುಡಿದ ವಚನಂಗಳು.

ವೀರಾಗಮೇ—

ಲಿಂಗಧಾರಕಭಕ್ತಾಸ್ತು ಲಿಂಗಹೀನನ್ನೃಪಂ ದ್ವಿಜಮ್ ।
ನ ಸೇವೇನ್ನ ನಮಸ್ಕುರ್ಯಾತ್ ಯದಿ ಕುರ್ಯಾನ್ನರಕಂ ವ್ರಜೇತ್ ॥೧॥

ಶಿವಭಕ್ತನು ಭವಿಯಾಗಿದ್ದ ಅರಸಂಗೆಯು ಹಾರುವಂಗೆಯು ಸೇವೆಯ ನಮಸ್ಕಾರವ ಮಾಡಬಾರದು ಇಂತಿವ ಮಾಡಿದರೆ ಕೌರವ ನರಕವನ್ನೈದುವನು.

ಶಿವಧರ್ಮೇ—

ಭವಿನಾ ಶಯನೇ ಯಾನೇ ಸಂಪರ್ಕೇ ಸಹಭೋಜನೇ ।
ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಮ್ ॥೨॥

ಶಿವಭಕ್ತನು ಭವಿಯೊಡನೆ ಮಲಗಿದದೆಸೆಯಿಂದ ವಾಹನವೇರಿದ ದೆಸೆಯಿಂದ್ಸಂಸರ್ಗದ ದೆಸೆಯಿಂದ ಸಂಗಡ ಊಟಮಾಡಿದದೆಸೆಯಿಂದ ಅತಿ ಘೋರವಾದ ನರಕದಲ್ಲಿ ಹಿರಿದುಕಾಲವಿರುತ್ತಿಹನು.

ಯಥಾ ಮುನಿವರಂ ತ್ಯಕ್ತ್ವಾ ಭಕ್ತಿಹೀನಂ ಪತಿವ್ರತಾ ।
ಕೃತ ಕೃತ್ಯಾಭವತ್ಪೂರ್ವಂ ತಪಸಾರಾಧ್ಯ ಶಂಕರಮ್ ॥೩॥

ಪೂರ್ವದಲ್ಲಿ ಪತಿವ್ರತೆಯಾದ ಶಿವಭಕ್ತೆಯು ಶಿವಭಕ್ತಿಯಿಲ್ಲದಿದ್ದ ಮುನಿಯಾದ ಗಂಡನಂ ಬಿಟ್ಟು ಶಿವಪೂಜೆಯ ಮಾಡಿ ಕೃತ ಕೃತ್ಯಳಾದಳು.

ಲಿಂಗಧಾರಕ ಭಕ್ತಾಸ್ತು ಲಿಂಗಬಾಹ್ಯ ಸತೀಸುತಾನ್ ।
ಆಲಿಂಗ್ಯ ಚುಂಬನಂ ಕೃತ್ವಾ ರೌರವಂ ನರಕಂ ವ್ರಜೇತ್ ॥೪॥

ಶಿವಭಕ್ತನು ಅಂಗದಮೇಲೆ ಲಿಂಗವಿಲ್ಲದ ಹೆಂಡತಿ ಮಕ್ಕಳನ್ನು ತಪ್ಪಿ ಕೊಂಡರೆ ಮುಕ್ತ ಕೊಟ್ಟರೆ ರೌರವ ನರಕವನ್ನೈದುವನು.

## ವಚನಗಳು

ತಾನು ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ
ಮರಳಿ ತಾಯಿತಂದೆ ಒಡಹುಟ್ಟಿದ ಬಂಧುಬಳಗವೆಂದು ಬೆರಸಿದರೆ
ಕೊಂಡ ಮಾರಿಗೆ ಹೋಹತಪ್ಪದು
ಹಸಿಯ ಮಣ್ಣಿನಲ್ಲಿ ಮಾಡಿದ ಮಡಕೆಯಗ್ನಿಮುಖದಲ್ಲಿ
ಶುದ್ಧವಾದ ಬಳಿಕ
ಅದು ತನ್ನ ಪೂರ್ವದ ಕುಲವ ಕೂಡದು ನೋಡಾ ಅದೆಂತೆಂದಡೆ

> ಅಗ್ನಿದಗ್ಧಘಟಂ ಪ್ರಾಹುರ್ನ ಭೂಯೋ ಮೃತ್ತಿಕಾಯತೇ ।
> ತಚ್ಛಿವಾಚಾರಸಂಗೇನ ನ ಪುನರ್ಮಾನುಷೋ ಭವೇತ್ ॥

ಎಂದುದಾಗಿ ಭಕ್ತನಾಗಿ ಭವಿಯ ನಂಟನೆಂದು
ಪಂತಿಯಲ್ಲಿ ಕುಳ್ಳಿರಿಸಿಕೊಂಡು ಉಂಡನಾದರೆ
ಉಂಡಾತಂಗೆ ಹೇಗಯ್ಯಾ ಎಂದಡೆ
ಸತ್ತನಾಯ ತಂದು ಅಟ್ಟದ ಮೇಲಿರಿಸಿ
ನಿತ್ಯ ಒಪ್ಪಲವ ಕೊಯ್ದು ತಿಂದಂತೆ ಕಾಣಾ ಕೂಡಲ
ಚೆನ್ನಸಂಗಮದೇವಾ

೨

ಸಕಲ ಜನಂಗಳು ಹೇಸಿದ ಉದಾನವನು
ಶ್ವಾನ ಭುಂಜಿಸಿ ತನ್ನೊಡಲ ಹೊರೆವುದು
ಅದು ತಾನು ಹೇಸಿದ ಉದಾನವನು ತಾ ಮುಟ್ಟದು ನೋಡಾ
ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ ಮರಳಿ ಭವಿಯ ಬೆರಸಿದನಾದಡೆ
ಆ ಶ್ವಾನನಿಂದ ಕರಕಷ್ಟ ನೋಡಾ
ನೀನೊಲಿದವರಿಗಲ್ಲದೆ ಎಲ್ಲರಿಗಳವಡುವವೇ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

೩

ಲಿಂಗವಂತನು ಲಿಂಗವಂತರಲ್ಲಿಯೇ ಸಂಗವ ಮಾಡುವುದು
ಲಿಂಗಬಾಹ್ಯರ ಸಂಗವ ಮಾಡಲಾಗದು
ಸ್ತ್ರೀಪುತ್ರರು ಮೊದಲಾದವರ ಕೂಡ
ಲಿಂಗವಿಲ್ಲದವರೊಡನೆ ಸಂಗವ ಮಾಡಲಾಗದು ಅದೆಂತೆಂದಡೆ

ಶಿವಲಿಂಗಾಂಗಸಂಪನ್ನೋ ಲಿಂಗಬಾಹ್ಯಸತೀಸುತಾನ್ ।
ಅಲಿಂಗ್ಯ ಭುಂಜನಂ ಕೃತ್ವಾ ರೌರವಂ ನರಕಂ ವ್ರಜೇತ್ ॥

ಎಂದುದಾಗಿ ಮತ್ತೆಯೂ—

ಲಿಂಗೀ ಲಿಂಗಿ ಸಹಾವಾಸೀ ಲಿಂಗಿನಾ ಸಹ ವರ್ತಯೇತ್ ।
ಲಿಂಗಿನಾ ಸಹ ಭುಂಜೀತ ಲಿಂಗಯೋಗೋ ನ ಸಂಶಯಃ ॥

ಎಂದುದಾಗಿ ಲಿಂಗವಂತನು ಲಿಂಗವಂತರಲ್ಲಿಯೇ
ಸಂಗವ ಮಾಡುವುದು ಶಿವಪಥವಯ್ಯಾ
ಲಿಂಗವಿಲ್ಲದವರೊಡನೆ ಸಂಗವ ಮಾಡುವುದು ಮಹಾಪಾತಕವಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೪

ಭವಿವಿರಹಿತ ಮಜ್ಜನಕ್ಕೆರೆದೆವೆಂಬರು ಶಿವಭಕ್ತರು ನೋಡಾ
ಶ್ವಾನ ಮುಟ್ಟಿದೆಂಜಲ ಮನಮುಟ್ಟಿ ಉಣ್ಣೆವೆಂಬರು ನೋಡಾ
ಭವಿಗಿಂದ ಕಷ್ಟವಲ್ಲವೇ ಅನ್ಯದೈವವ ಪೂಜಿಸುವ ಹೆಂಡತಿ
ಮನೆಯೊಳಗಿರಲು
ಶ್ವಾನಗಿಂದ ಕಷ್ಟವಲ್ಲವೇ ಭವಿಮಿತ್ರವಾದ ಜನಗಳು
ಮನೆಯೊಳಗಿರಲು
ಅದೆಂತೆಂದಡೆ—

ಯದ್ಗೃಹೇಷ್ವನ್ಯದೇವೋಽಸ್ತಿ ತದ್ಗೃಹಾಣಿ ಪರಿತ್ಯಜೇತ್ ।

ಎಂದುದಾಗಿ ಇಂತಪ್ಪ ಶ್ವಾನಭವಿಗಳನೊಳಗಿಟ್ಟುಕೊಂಡು
ತಾನು ಶಿವಭಕ್ತನೆನಿಸಿಕೊಂಬ ದುರಾಚಾರಿಯ ಮಾತ ಕೇಳಲಾಗದು
ಇಂತಪ್ಪ ಶ್ವಾನಭವಿಗಳ ಕಳೆದುಳಿದಲ್ಲದೆ
ಕೂಡಲ ಚೆನ್ನಸಂಗಯ್ಯನ ಹೊದ್ದಬಾರದು

೫

ಅಂಗದ ಮೇಲೆ ಲಿಂಗವ ಬಿಜಯಂಗೈಸಿಕೊಂಡು
ಲಿಂಗವಿಲ್ಲದ ಅಂಗನೆಯನಪ್ಪಿದರೆ ಸುರಾಭಾಂಡವನಪ್ಪಿದಂತೆ
ಕೇಳಿರಂಣಾ
ಲಿಂಗಸಾಹಿತ್ಯವಾಗಿರ್ದು ಲಿಂಗವಿಲ್ಲದ ಸತಿಯರ ಕೂಡಿಕೊಂಡಿಹ
ಪರಿಯಂತೋ
ಲಿಂಗವುಳ್ಳಾತನು ಲಿಂಗವಿಲ್ಲದ ತನುವಿನೊಡನೆ
ಸಂಯೋಗವ ಮಾಡಿದಡೆ ಎಂತಕ್ಕು
ಹಾಲಗಡಿಗೆಯ ಹಂದಿ ಮುಟ್ಟಿದಂತಕ್ಕು ಅದೆಂತೆಂದಡೆ—

ಲಿಂಗೇನ ಸಹಿತೋ ದೇಹೀ ಲಿಂಗಹೀನಾಂ ತು ಯಃ ಸತೀಮ್ ।
ಸಹವಾಸೇ ಸಹತೇ ನಿತ್ಯಂ ಕಿಂ ಫಲಂ ಕಿಂ ಕೃತಂ ಭವೇತ್ ॥
ಕಿಂ ತೇನ ಕ್ಷೀರಭಾಂಡೇನ ಸೂಕರ್ಯೈಃ ಸಹ ವರ್ತಿನಾ ।

ಎಂದುದಾಗಿ ಲಿಂಗವುಳ್ಳ ಲಿಂಗಾರ್ಚಕರು
ಲಿಂಗಾರ್ಚನೆಯ ಮಾಡುವ ಲಿಂಗೈಕ್ಯರು
ಲಿಂಗವಿಲ್ಲದೆ ಭವಿಯಾಗಿರ್ದ ಸತಿಯರ ಆಲಿಂಗನ ಚುಂಬನಂಗಳ
ಮಾಡಿದಡೆ
ಗುರುಕಾರುಣ್ಯವುಂಟೆಂದು ಸಾಧಾರಣ ಪಕ್ಷದಲ್ಲಿ ಮಾಡಿಕೊಂಡಿದ್ದರೆ
ಮಾಡಿದ ಲಿಂಗರ್ಚನೆ ನಿಷ್ಫಲ
ತತಜನ್ಮಪರ್ಯಂತರ ಹೊಲೆಯರ ಬಸುರಲ್ಲಿಕ್ಕದೆ ಮಾಂಬನೆ
ನಮ್ಮ ದೇವರಾಯ ಸೊಡ್ಡಳಾ

೬

ಲಿಂಗವಂತನು ಕೇವಲ ಲಿಂಗಮೂರ್ತಿಯ ಲಿಂಗಾರ್ಚನೆಯಂ ಮಾಡಿ
ಲಿಂಗಪ್ರಸಾದವ ಧರಿಸಿ ಸರ್ವವು ಲಿಂಗಕ್ರಿಯೆಯಾಗಿರ್ದು
ಲಿಂಗವಿಲ್ಲದವರಲ್ಲಿ ತನುವಿನ ಕೊಳು ಕೊಡೆ ಮನದ ಕೊಳು ಕೊಡೆ
ಧನದ ಕೊಳು ಕೊಡೆಯನು ಮಾಡಿದಡೆ
ಮಾಡುವೆನೆಂಬಾಶೆಯಿಂದಿದ್ದರೆ

ನಾಚದೆ ಶಿವಾಚಾರ ನಾಚದೆ ಗುರುವು ನಾಚದೆ ಲಿಂಗವು
ನಾಚದೇ ಜಂಗಮುವು ನಾಚದೇ ಪ್ರಸಾದವು ಸುಡು ಸುಡು
ಕಷ್ಮಮನವನು
ಬಿಡು ಬಿಡು ಕೆಟ್ಟತನುವನು ಲಿಂಗವಂತರಲ್ಲಿಯೇ ಸದ್ಭಕ್ತಿಯ
ವರ್ತಿಸುವದು
ತನಗಿಚ್ಛೈಸಿದುದ ಬೇಡುವುದು
ಲಿಂಗವಂತರಿಚ್ಛೈಸಿದುದ ಕೊಡುವುದು
ಇಂತಲ್ಲದೆ ಅನ್ಯವನಾಶ್ರಯಿಸಿದಡೆ ಅನ್ಯಾಯವಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ಭವಿಪಾದ ನಿರಸನ ಸ್ಥಲ ೩೭

ಈ ಪ್ರಕಾರದಿಂ ಅಂಗದ ಮೇಲೆ ಲಿಂಗವಿಲ್ಲದವರುಗಳ ಸಂಗವನು ಲಿಂಗಾಂಗ ಸಂಗಿಗಳು ಮಾಡಲಾಗದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು. ಇಂತಹ ಭವಿಗಳು ತಮ್ಮ ಉದರಾರ್ಥಕ್ಕಾಗಿ ಮಾಡುವ ಅಪವಿತ್ರ ಪಾಕಂಗಳನು ಸದಾಚಾರ ಸನ್ನಿಹಿತರು ತಮ್ಮ ಲಿಂಗಕ್ಕೆ ಕೊಡುವುದು ಅಕ್ರಮವೆಂಬುದಂ ತೋರಿಸಲೋಸುಗ ನುಡಿದ ವಚನಂಗಳು—

ಶಿವಧರ್ಮೇ—

> ಅಸಂಸ್ಕಾರಿಕೃತಂ ಪಾಕಂ ನ ತು ಸಂಭೋಜಯೇದ್ಯದಿ ।
> ನಿವೇದ್ಯ ಭುಂಜತೇ ಯೇ ತೇ ನರಕೇ ಕಾಲಮಕ್ಷಯಮ್ ॥ ೧ ॥

ಶಿವಸಂಸ್ಕಾರ ಹೀನರಾದ ಭವಿಗಳ ಮನೆಯ ಪಾಕವನು ಶಿವಂಗೆ ನಿವೇದಿಸಲಾಗದು ಅದಂ ಭೋಗಿಸಲಾಗದು ಯತ್ತಲಾನುಂ ಭುಂಜಿಸಿದನಾದಡೆ ಅಕ್ಷಯಕಾಲವು ನರಕದಲ್ಲಿರುತ್ತಿಹನು.

> ಭವಿಪಾಕೇನ ಕರ್ತವ್ಯಂ ನ ಲಿಂಗಸ್ಯ ನಿವೇದನಮ್ ।
> ಸ್ವಯಂ ಪಾಕಪವಿತ್ರಾನ್ನಂ ಲಿಂಗನೈವೇದ್ಯಮುತ್ತಮಮ್ ॥ ೨ ॥

ಭವಿಗಳ ಮನೆಯ ಪಾಕವನ್ನು ಲಿಂಗಕ್ಕೆ ನಿವೇದಿಸಲಾಗದು. ಪವಿತ್ರವಾದ ಸ್ವಯಂ ಪಾಕಪದಾರ್ಥವನ್ನು ಲಿಂಗಕ್ಕೆ ಸಮರ್ಪಿಸುವುದೀಗಳೇ ಉತ್ತಮವಾದ ಆಚಾರವು.

> ಶಿವಭಕ್ತಗೃಹಂ ಗತ್ವಾ ಭುಂಜೀಯಾದ್ಭಕ್ತಿಸಂಯುತಃ ।
> ವರ್ಣಾನಾಮಷ್ಟದಶಕಂ ಚಾಂಡಾಲ ಇತಿ ವರ್ಜಯೇತ್ ॥ ೩ ॥

ಶಿವಭಕ್ತಿಸಂಸ್ಕಾರವುಳ್ಳಡೆ ಅವನ ಮನೆಯೇ ತನ್ನ ಮನೆಯೆಂದು ಅಲ್ಲಿ ಶಿವಪ್ರಸಾದವ ಕೊಂಬುವದು ಇಂತಹ ಸಂಸ್ಕಾರವಿಲ್ಲದ ಹದಿನೆಂಟು ಜಾತಿಯನ್ನು ಹೊಲೆಯರೆಂದೇ ಬಿಡವುದು.

## ವಚನಗಳು.

೧

ಶಿವಭಕ್ತನು ಹೋಗಿ ತನ್ನೊಡಲಿಚ್ಛೆಗೆ ಭವಿಯ
ಮನೆಯಲುಂಡನಾದಡೆ
ಮಡಕೆಯ ಕೂಳತಿಂದ ತುಡುಗುಣಿ ನಾಯಂತೆ ಆ ಭಕ್ತ
ನ್ಪೃಡನೆ! ಸೀಸಿಲ್ಲದ ಮನೆಯ ಕೂಳು
ಹೊಲೆಯರ ಮನೆಯ ಅಡಗಿನಿಂದ ಕರಕಷ್ಟ ಕಾಣಾ ರಾಮನಾಥಾ

೨

ಭವಿಯ ಮನೆಯ ಭೋಜನವು ಸಸಿಯಾಗಿತ್ತೆಂದು
ಉಂಡ ಭಕ್ತಂಗೆ ಅಘೋರ ನರಕ ತಪ್ಪದು
ಆಗಳಂತೆ ಆ ಭವಿಗೆ ಮಾಡಿದ ಹುಳುಗೊಂಡವು ಆ ಭಕ್ತಂಗಹುದು
ಆ ಭವಿಗೆ ಭವಂ ನಾಸ್ತಿಯಹುದು ತಪ್ಪದು ಕಾಣಾ ರಾಮನಾಥಾ

೩

ಭಕ್ತನಾಗಿ ಭವಿಯ ಮನೆಯಲುಂಬ ಅನಾಚಾರಿಯ
ತೋರದಿರಯ್ಯಾ ಎನಗೆ
ನೊಸಲಲ್ಲಿ ಒಂದು ಕಣ್ಣುಳ್ಳವನಾದಡೆಯೂ ಆಗಲಿ
ಅಂಗದ ಮೇಲೆ ಲಿಂಗ ಸಂಬಂಧವಿಲ್ಲದಿರ್ದಡೆ ಅವನ ಮನೆಯಲ್ಲಿ
ಮಾಡಿದ ಪಾಕ
ಶ್ವಾನ ಮಾಂಸಕ್ಕೆ ಸರಿಯೆಂದುದಾಗಿ ಒಲ್ಲವರೊಲ್ಲರು
ಶಿವ ಭಕ್ತರಲ್ಲದವರ ಮನೆಯಲುಂಡರೆ
ಜನ್ಮ ಜನ್ಮಾಂತರದಲ್ಲಿ ಶ್ವಾನಯೋನಿಯಲ್ಲಿ ಬಪ್ಪುದು ತಪ್ಪದು
ಎಲೆ ಲಿಂಗವೇ! ಸೇಸಿಲ್ಲದವನ ಮನೆಯಲ್ಲಿ ತಿಂಬವನಿಗೆ
ಹುಳುಗೊಂಡವೇ ಪ್ರಾಪ್ತಿಯಯ್ಯಾ ಕೂಡಲಸಂಗಮದೇವಾ

೪

ಅಂಗದ ಮೇಲೆ ಲಿಂಗಸಾಹಿತ್ಯವಿಲ್ಲದವರು
ಲಿಂಗಕ್ಕೆ ಬೋನವ ಮಾಡಲಾಗದು

ಮಾಡಿದ ಬೋನವು ಲಿಂಗಕ್ಕೆ ಸಲ್ಲದು
ಅವರು ಮಾಡಿದ ಬೋನವ ಲಿಂಗಕ್ಕೆ ಪ್ರಸಾದವೆಂದು ಕೊಂಡನಾದಡೆ
ಕುಂಭಿಪಾತಕ ನಾಯಕ ನರಕ ಕೂಡಲಸಂಗಮದೇವಾ

೫

ಭವಿ ಬೆರೆಸಿದ ಭಕ್ತ ಹವಿ ಬೆರಸಿದ ಬೀಜ
ಉದಕ ಬೆರೆಸಿದ ಎಣ್ಣೆ ಪ್ರಜ್ವಲಿಸದು
ಭವಿಯಲ್ಲ ಭಕ್ತನಲ್ಲ ಹವಿಯಲ್ಲ ಬೀಜವಲ್ಲ ಉದಕವಲ್ಲ ಎಣ್ಣೆಯಲ್ಲ
ತನ್ನೊಡಲಿಚ್ಛೆಗೆ ಹೋಗಿ ಭವಿಯ ಮನೆಯಲ್ಲಿ ಹೊಕ್ಕು
ತುತ್ತಿಡುವ ನರಕಿ ಜೀವಿಗಳಿಗೊಲಿವನೇ ನಮ್ಮ ಶಂಭುಜಕ್ಕೇಶ್ವರಾ

೬

ಭವಿ ವಿರಹಿತ ಭಕ್ತನಾದಬಳಿಕ
ತನ್ನ ಮನೆಯಲ್ಲಿ ಮಾಡಿದ ಪಾಕವ ಭವಿಗಿಕ್ಕಲಹುದೇ
ಇಂತಹ ಯುಕ್ತಿಶೂನ್ಯನಿಗೆ ಪ್ರಸಾದವಿಲ್ಲ ಮುಕ್ತಿಯೆಂತಪ್ಪುದೊ ?
ನಾಯ ಬಸುರಲ್ಲಿ ಬಪ್ಪುದು ತಪ್ಪದು ಕೂಡಲಸಂಗಮದೇವಯ್ಯಾ
ನಿಮ್ಮ ಘನವನರಿಯದ ಅನಾಚಾರಿಗಳಿಗಿನ್ನೆಂತಯ್ಯಾ

ಇಂತೀ ಪ್ರಕಾರದಿಂ ಅಂಗದ ಮೇಲೆ ಲಿಂಗಸಂಬಂಧಿಗಳಾಗಿದ್ದವರು ಭವಿಪಾಕವಂ ತಮ್ಮ ಲಿಂಗಕ್ಕೆ ಕೊಡಬಾರದೆಂಬುದುಂ ಪ್ರತಿಷ್ಠೆಯಂ ಮಾಡಿ ನುಡಿದರ್ಹಾ ಪುರಾತನರು.

ಇಂತಹ ಭವಿಗಳು ವರ್ತಿಸುವ ಪಂಚಮಹಾಪಾತಕಂಗಳಂ ಬಿಟ್ಟಲ್ಲದೆ ಶಿವಾಚಾರ ನೆಲೆಗೊಳ್ಳದು. ಅವಾವೆಂದಡೆ ಪರದಾರ ಕಳವು ಹುಸಿ ಹಿಂಸೆ ತಾಮಸಭಕ್ತಸಂಗ ಎಂಬಿವರಿಂದ ಮನವು ಮಹಾಪಾಪಕ್ಕೊಳಗಾಗಿ ಕೆಡುವುದೆಂಬುದನರಿದು ಅನ್ಯ ಸ್ತ್ರೀಯರುಗಳಲ್ಲಿ ವರ್ತಿಸುವುದು ಶಿವಭಕ್ತರುಗಳಿಗೆ ಕಷ್ಟಗುಣವೆಂದು ನುಡಿದ ವಚನಂಗಳು

ಶಿವಧರ್ಮೇ—

> ಕನ್ಯಾಸಂಯೋಗಸಂಯುಕ್ತಃ ಪ್ರೌಢಾಸಂಗಂ ವಿವರ್ಜಯೇತ್ ।
> ಏಕಪತ್ನೀವ್ರತಶ್ಚೈವ ಶಿವಾಚಾರಪರಸ್ತಥಾ ॥೧॥

ಕನ್ಯೆಯಂ ಮದುವೆಯಾಗಿ ಸಂಯೋಗವ ಮಾಡುವುದು ಪ್ರೌಢೆಯ ಸಂಯೋಗವಂ ಮಾಡಲಾಗದು ಓರ್ವಳನ್ನೇ ಆಳುವನು ಆತನೇ ಸದಾಚಾರಿ ಆತನೇ ಶಿವಭಕ್ತನು.

ಶೈವ ಪುರಾಣೇ—

> ಧರ್ಮಪತ್ನ್ಯಾಶ್ಚ ಗಮನಂ ವಿಧಿನಾತ್ರ ವಿಧೀಯತೇ ।
> ಸ್ತ್ರೀಣಾಂ ವೈ ಭರ್ತೃಶುಶ್ರೂಷಾ ನೋಪಹೇದನ್ಯದೈವತಾವನ್ ॥
> ವಹೇಚ್ಚೇನ್ನರಕಂ ಯಾತಿ ನಾತ್ರ ಕಾರ್ಯಾ ವಿಚಾರಣಾ ॥೨॥

ಕುಲಸ್ತ್ರೀಯೊಡನೆ ಸಂಯೋಗ ಮಾಡುವುದು ಶಿವಭಕ್ತಂಗೆ ಲಕ್ಷಣವು ಆ ಸ್ತ್ರೀಗೆ ಲಕ್ಷಣವಾವುದೆಂದಡೆ ಆ ಪುರುಷನ ಶುಶ್ರೂಷೆಯಂ ಮಾಡುವುದು ಅನ್ಯದೈವಂಗಳನೋಡದೇ ಇರುವುದು ನೋಡಿತರೆ ನರಕ ತಪ್ಪದು.

ಶಿವಧರ್ಮೇ—

ಸ್ವಸ್ವಭಾರ್ಯಾರತೋ ಯಸ್ತು ಪರದಾರವಿವರ್ಜಿತಃ ।
ಬ್ರಹ್ಮಚಾರಿಸಮಃ ಸೋಽಪಿ ಜ್ಞೇಯಃ ಶಿವ ಗೃಹಾಶ್ರಮಿ ।೩।

ತನ್ನ ಸ್ತ್ರೀಯಂ ಭೋಗಿಸಿ ಪರಸ್ತ್ರೀಯಂ ಬಿಟ್ಟಾತನು ಬ್ರಹ್ಮಚಾರಿಗೆ ಸಮವೆಂದು ತಿಳಿವುದು.

ಪರನಾರೀಕುಚಗ್ರಾಹಂ ಚುಂಬನಾಲಿಂಗನೇ ರತಿಮ್ ।
ಯಃ ಸ್ಮರೇನ್ಮನಸಾ ವಾಚಾ ರೌರವಂ ನರಕಂ ವ್ರಜೇತ್ ॥೪॥

ಶಿವಭಕ್ತನಾದವನು ಪರಸ್ತ್ರೀಯರ ಕುಚವಂ ಪಿಡಿವುದು ಚುಂಬಿಸುವುದು ಆಲಿಂಗನವಂ ಮಾಡುವುದು ಸಂಗದಲ್ಲಿಹುದು ಇಷ್ಟನ್ನು ಮನದಲ್ಲಿ ನೆನೆದರೆ ಮಾತಿನಲ್ಲಿ ನುಡಿದರೆ ಕಾರ್ಯದಲ್ಲಿ ಮಾಡಿದರೆ ಆವನಾದರೂ ರೌರವನರಕವನೈದುವನು.

ಸ್ತ್ರೀಣಾಂ ಹೀನಜಾತೀನಾಮುಚ್ಛಿಷ್ಟಂ ಪಾಪಕರ್ಮಿಣಃ
ತಾಭಿಃ ಸಹೈವ ಭುಂಜಂತೀ ನ ದೋಷ ಇತಿ ಮಾನವಾಃ ॥೫॥

ಕಾಮಶಾಸ್ತ್ರದಲ್ಲಿ ಸಂಭೋಗಕ್ಕೆ ಜಾತಿದೋಷ ಉಚ್ಛಿಷ್ಟದೋಷ ವಿಲ್ಲೆಂದು ಪಾಪಕರ್ಮಿಗಳು ಅಧರೋಷ್ಠಪಾನವಂ ಮಾಡುತ್ತಿಹರು ಆ ಮಾನವರು ದುರ್ಜಾತಿದೋಷವಿಲ್ಲೆಂದು ಆ ಸ್ತ್ರೀಯರುಗಳೊಡನೆ ಭುಂಜಿಸುತ್ತಿಹರು ಇಂತಪ್ಪ ಭವಿಕರ್ಮಿಗಳ ಬಿಟ್ಟಲ್ಲದೆ ಲಿಂಗವಂತನಾಗಬಾರದು.

## ವಚನಗಳು

೧

ಅಡಗ ತಿಂಬರು ಕಣಕದಡಿಗೆಯಿರಲ್ಕೆ
ಸುರೆಯ ಕುಡಿವರು ಹಾಲಿರಲ್ಕೆ
ಮುಕ್ಕುವರು ಭಂಗಿಯ ಸಕ್ಕರೆಯಿರಲ್ಕೆ
ಸ್ವಸ್ತ್ರೀಯಿದ್ದಂತೆ ಪರಸ್ತ್ರೀಯರಿಗೆ ಅಳುಪುವರು
ಸತ್ತನಾಯ ಭಕ್ಷಿಸುವ ಹಡಕಿಗರ ನೇನೆಂಬೆನಯ್ಯಾ ರಾಮನಾಥಾ

೨

ಗಂಡನುಳ್ಳ ಹೆಂಡಿರ ಕಂಡು ಅಳುಪದಿರಾ ಮನವೆ
ಬಂದ ಬಸುರನು ಉಂಡಮೊಲೆಯನು ಕಂಡು ಮರುಗದಿರಾ ಮನವೆ
ಉದ್ದಂಡತನದಲಿ ನಡೆದ ಭಂಡರನು
ಹುಳುಗೊಂಡದಲಿಕ್ಕದೆ ಬಿಡುವನೇ ನಮ್ಮ ದೇವರಾಯ ಸೊಡ್ಡಳಾ

೩

ಹೋಗಬಿಟ್ಟು ಹಿಂದೆ ಮರಳಿ ನೋಡಿ ಆಗಬೇಕೆಂಬ ಸಂದೇಹವುಳ್ಳಡೆ
ಅದೇ ಪರದಾರ ಪಂಚಮಹಾಪಾತಕ ನಾಯಕನರಕ
ಅನ್ಯ ಸ್ತ್ರೀಯೆಂಬುದು ನಿಮ್ಮ ರಾಣಿವಾಸ
ಎನಗಿದೇ ದಿವ್ಯವಯ್ಯಾ ಕೂಡಲಸಂಗಮದೇವಾ

೪

ಶ್ರೋತ್ರಿನ ಸಂಗವ ಮಾಡಿದಡೆ ಸುರಾಪಾನವ ಕೊಂಡ ಸಮಾನ
ಸೂಳೆಯ ಸಂಗವ ಮಾಡಿದಡೆ ಮಾಂಸವ ತಿಂದ ಸಮಾನ
ಕನ್ಯೆಯ ಸಂಗವ ಮಾಡಿದಡೆ ಬಂಗಿಯ ತಿಂದ ಸಮಾನ
ಗಂಡ ಬಿಟ್ಟವಳ ಸಂಗವಮಾಡಿದಡೆ ಉದಾನವ ಕೊಂಡ ಸಮಾನ
ಮುಂಡೆಯ ಸಂಗವ ಮಾಡಿದಡೆ ಅಮೇಧ್ಯವ ತಿಂದ ಸಮಾನ
ಗಂಡನುಳ್ಳವಳ ಸಂಗವ ಮಾಡಿದಡೆ
ಪಂಚ ಮಹಾಪಾತಕವ ಮಾಡಿದ ಸಮಾನ ಅದೆಂತೆಂದಡೆ

**ವಿಧವಾಯುಃ ಶ್ರಿಯಂ ಹಂತಿ ದಾಸೀ ಶೀಲಂ ಕುಲಂ ತಥಾ ।**
**ವೇಶ್ಯಾ ಮಾನಂ ಧನಂ ಹಂತಿ ಸರ್ವಂ ಹಂತಿ ಪರಾಂಗನಾ ॥**
**ದಾಸೀ ಕನ್ಯಾಂ ತ್ಯಜಸ್ತ್ರೀಣಾಂ ವೇಶ್ಯಾವಿಧ ಪರಸ್ತ್ರಿಯಃ ।**
**ಸತತಂ ಸೂಕರಶ್ಚೈವ ಬ್ರಹ್ಮಹತ್ಯಂ ದಿನೇ ದಿನೇ ॥**

ಎಂದುದಾಗಿ ಇಂತೀ ಆರುಪ್ರಕಾರದ ಸ್ತ್ರೀಯರನ್ನು
ಮನ ವಚನ ಕಾಯದಲ್ಲಿ ಬಿಟ್ಟವಂಗೆ
ಗುರುವುಂಟು ಲಿಂಗವುಂಟು ಜಂಗಮವುಂಟು
ಪಾದೋದಕವುಂಟು ಪ್ರಸಾದವುಂಟು

ಇಂತೀ ಆರು ಪ್ರಕಾರದ ಸ್ತ್ರೀಯರು ಮೊದಲಾದ
ರಾಶಿಕೂಟದ ಸ್ತ್ರೀಯರುಗಳಿಗೆ ಮನಹೇಸದೆ-
ಅಂಗವಿಸುವ ಭಕ್ತ ಭವಿಗಿಂದ ಕಷ್ಟನೋಡಾ
ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ

೫

ಅಸುರ ನೈಶ್ವರ್ಯವ ನೆಣಿಸುವರೆ
ಸೀತೆಗೆ ಸರಿಮಿಗಿಲೆನಿಸುವ ಸತಿಯರೆಂಟುಕೋಟಿ
ಮತಿವಂತ ಶಿರಃ ಪ್ರಧಾನರೆಂಟುಕೋಟಿ
ಲೆಕ್ಕವಿಲ್ಲದ ದಳವು ಲಕ್ಷಕುಮಾರರು
ದಿಕ್ಪಾಲಕರವನ ಮನೆಯ ಬಂಧನದಲ್ಲಿಪ್ಪರು
ಸುರಸತಿಯರ ನೆಲ್ಲರ ಸಾತ ಸೆರೆಮಾಡಿಯಾಳಿದ
ಶಿವನೇ! ನೀ ಕರುಣಿಸಿದಂತಿರಲೆ
ಪರವಧುವಿನ ಬೇಟವವನ ಪ್ರಾಣವ ಕೊಂಡಿತ್ತು
ಇವದರಿದು ಪರವಧುವಿಗೆಳಸುವವರ ಕಂಡು
ಗರುಡಕಂಡ ಸರ್ಪಧರೆಗಿಳಿವಂತೆ
ಅಡಗಿರ್ಪೆನಯ್ಯಾ ಕೂಡಲ ಸಂಗಮದೇವಾ

## ಕಳವು ನಿರಸನ ಸ್ಥಲ ೩೯

ಇಂತೀ ಪ್ರಕಾರದಿಂ ಶಿವಭಕ್ತರು ತಮ್ಮ ಸ್ವಸ್ತ್ರೀಯರ ಸಂಗವಲ್ಲದೆ ಅನ್ಯಸ್ತ್ರೀಯರ ಸಂಗವ ಮಾಡಲಾಗದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಪರದಾರಮಂ ಬಿಟ್ಟು ಲಿಂಗಸಾಹಿತ್ಯವಾದೆನೆಂಬವಂಗೆ ಕಳವು ಶೌಚಮಂ ಕೆಡಿಸುವದೆಂಬುದನರಿದು ಇನ್ನು ಕಳವ ಶಿವಭಕ್ತರು ಬಿಡಬೇಕೆಂಬುದಂ ನುಡಿದ ವಚನಂಗಳು—

ಶಿವಧರ್ಮೇ—

ತೃಣಂ ವಾ ಯದಿ ವಾ ಕಾಷ್ಠಂ ಮೃದಂ ವಾ ಜಲಮೇವ ಚ ।
ಪರಸ್ಯಾಪಹರೇದ್ಯಸ್ತು ನರಕಂ ಪ್ರತಿಪದ್ಯತೇ ॥ ೧ ॥

ಹುಲ್ಲುಕಡ್ಡಿಯಪ್ಪಾದೊಡಂ ಆಕಾಶವಪ್ಪಾದೊಡಂ ಒಪ್ಪಿಡಿ ಮಂಣಾದೊಡಂ ಒಕ್ಕುಡಿತೆಯುದಕವಾದೊಡಂ ಲೋಗರಸೊಮ್ಮ ಕಾಣಲೀಯದೆ ಬಲು ಹಿಂಪ ಕೊಂಡವಂಗೆ ಎಂದೂ ಕೇಡಿಲ್ಲದ ನರಕವಹುದು.

ತೃಣಂ ಕಾಷ್ಠ ಫಲಂ ಪುಷ್ಪಂ ಪ್ರಕಾಶಂ ವೈ ಹರೇದಿದಮ್ ।
ಧರ್ಮಾರ್ಥಂ ಕೇವಲಂ ಚೈವ ಅನ್ಯಥಾ ಪತಿತೋ ಭವೇತ್ ॥ ೨ ॥

ಹುಲ್ಲು ಕಟ್ಟಿಗೆ ಹಂಣು ಹೂ ಮೊದಲಾದ ಪರದ್ರವ್ಯಮಂ ಧರ್ಮಾರ್ಥಕ್ಕಲ್ಲದೆ ಸ್ವಾರ್ಥಕ್ಕಾಗಿ ಅಪಹರಿಸಿಕೊಂಡವನು ವ್ರತಗೇಡಿಯಹನು

ಶಿವಧರ್ಮೋತ್ತರೇ—

ಸ್ವಷು ಸ ರಾಜ್ಯವಾಸೌ ನಾಮ ಸ್ಪೃಷ್ಟ್ವಾನಾಂ ಚ ಸಂಭವೇ
ಪರಸ್ವಾನಾದಾನಮೇತತ್ತು ಸ್ತೇಯಲಕ್ಷಣಮ್ ॥ ೩ ॥

ಆರೊಬ್ಬರು ಆದಾವ ವಸ್ತುವಿಂಗೆ ಒಡೆಯರೋ ಅವರನುಮತದಿಂ ಪಡೆಯದೆ ಅನುಭವಿಸುವುದೆಲ್ಲವು ಪರಧನ ಕಳವೆನಿಸುವುದು.

ಅನೀಹಸ್ತು ಪರಸ್ವೇಷು ಯೋ ಮನಾದ್ಯದಿ ವರ್ತತೇ ।
ಕರ್ಮಣಾ ಮನಸಾ ವಾಚಾ ಸದ್ವೃತ್ತಃ ಶಿವತಾಂ ವ್ರಜೇತ್ ॥ ೪ ॥

ಮನಸ್ಸಿನಲ್ಲಿ ಕಾಯದಲ್ಲಿ ಮಾತಿನಲ್ಲಿ ಪರಧನಕ್ಕಿಚ್ಛೆಯಿಸದೆ ಶಿವ ಪೂಜೆಯಂ ಮಾಡುವವನು ಶಿವಲೋಕವ ಸೈದುವನು.

## ವಚನಗಳು

೧

ಕುಳ್ಳಿರ್ದು ಲಿಂಗವ ಪೂಜಿಸಿ ಅಲ್ಲದಾಟವ ನಾಡುವರಯ್ಯಾ
ಬೆಳ್ಳಿತ್ತಿನ ಮರೆಯಲ್ಲಿ ಹುಲ್ಲಿಗಂಬ ತೊಡಚುವಂತೆ
ಲೋಗರರ್ಥಕಳುಕುವ ಕಳ್ಳರ ಕೈಯ್ಯ ಪೂಜೆಯನೊಲ್ಲ ನೋಡಾ
ನಮ್ಮ ಕೂಡಲಸಂಗಮದೇವ

೨

ತೊರೆಯ ಮೀವಣ್ಣಗಳಿರಾ ತೊರೆಯಿರೇ ಪರಧನವ
ಪರದ್ರವ್ಯವ ಬಿಡದೆ ಹೋಗಿ ತೊರೆಯಲ್ಲಿ ಮಿಂದರೆ
ಆ ತೊರೆಯಲ್ಲಾ ಬರುದೊರೆ ಕಂಡಯ್ಯಾ
ಕಳವ ತೊರೆದು ತೊರೆಯ ಮಿಂದರೆ ಒಲಿದು ಕೂಡಿಕೊಂಬ
ನಮ್ಮ ಕೂಡಲ ಸಂಗಮದೇವರು

೩

ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದರೆ
ನಾನು ಕೈಮುಟ್ಟಿ ಎತ್ತಿದೆನಾದರೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಅದೇನು ಕಾರಣವೆಂದರೆ ನೀವಿಕ್ಕಿದ ಭಿಕ್ಷೆದಲ್ಲಿಪ್ಪೆನಾಗಿ
ಇಂತಲ್ಲದೆ ನಾನು ಅಳಿಮನವ ಮಾಡಿ
ಪರದ್ರವ್ಯಕ್ಕೆ ಆಶೆಮಾಡಿದೆನಾದರೆ
ನೀನಾಗಲೇ ಎನ್ನ ನರಕದಲ್ಲಿ ಎದ್ದಿ
ನೀನೆದ್ದು ಹೋಗಾ ತಂಬುಜಕ್ಕೇಶ್ವರಾ

ಈ ಪ್ರಕಾರದಿಂ ಶಿವಭಕ್ತರು ಆವತ್ತಿ ಕ್ರಿಯಂಗಳ ಮಾಡುತಿರ್ದೊಡಂ ಅನ್ಯದ್ರವ್ಯವ ತಸ್ಕರಿಸಿಕೊಳ್ಳಲಾಗದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಕಳವ ಬಿಟ್ಟು ಶಿವಭಕ್ತನಾದೆನೆಂಬವಂಗೆ ಹುಸಿಯು ವಾಕ್ಚಿತ್ತಮಂ ಕೆಡಿಸುವುದೆಂಬುದನರಿದು ಹುಸಿಯಂ ಬಿಡಬೇಕೆಂದು ನುಡಿದ ವಚನಂಗಳು.

ಸತ್ಯಾದುತ್ಪದ್ಯತೇ ಸರ್ವಂ ಅಸತ್ಯಂ ಚ ಪರಿತ್ಯಜೇತ್ ।
ಯತ್ಸತ್ಯಂ ಬ್ರಹ್ಮ ಇತ್ಯಾಹುರಸತ್ಯಂ ಬ್ರಹ್ಮದೂಷಣಮ್ ॥೧॥

ಸತ್ಯದಿಂದಲೇ ಸಕಲ ಜಗತ್ತು ಹುಟ್ಟಿತ್ತು. ಆದು ಕಾರಣ ಅಸತ್ಯವ ಬಿಡಲೇಬೇಕು ಆವುದಾನೊಂದು ಸತ್ಯವೇ ಪರಬ್ರಹ್ಮವೆಂದು ಹೇಳುವುದು ಅಸತ್ಯವೇ ಬ್ರಹ್ಮದೂಷಣವೆನಿಸುವುದು.

ಶಿವಧರ್ಮೇ—

ಸತ್ಯೇನ ಲೋಕಂ ಜಯತೇ ಸತ್ಯಂ ತತ್ಪರಮಂ ಪದಮ್ ।
ಯಥಾ ಭೂತಂ ತು ವಚನಂ ಸತ್ಯಮಾಹುರ್ಮನೀಷಿಣಃ ॥೨॥

ಸತ್ಯದಿಂದಲೇ ಲೋಕಕ್ಕೆ ಜಯವಾಯಿತ್ತು. ಸತ್ಯವೆಂಬುದು ಪರಮಪದವು ಹ್ಯಾಗೆ ವರ್ತಮಾನವಿದ್ದರೂ ತಾನು ಸತ್ಯವನೇ ನುಡಿವುದು.

ಪರಪೀಡಾ ವಿನಿರ್ಮುಕ್ತಂ ಯೋವದದ್ವಾಕ್ಯದ್ವಚನಂ ಶಿವಮ್ ।
ಅಶ್ವಮೇಧ ಶತಂ ಪೂರ್ಣಂ ಸತ್ಯತುಲ್ಯಂ ಭವೇನ್ನ ಹಿ ॥೩॥

ಅನ್ಯರ ಬಾಧಿಸದಂತಹ ವಚನವನೇ ನುಡಿವುದು. ಸಂಪೂರ್ಣವಾದ ಅಶ್ವಮೇಧ ಶತಯಜ್ಞಂಗಳ ಫಲವಾದರೂ ಅದಕ್ಕೆ ಸಮಾನವಲ್ಲ.

ಸತ್ಯೇ ಪ್ರತಿಷ್ಠಿತಂ ಜ್ಞಾನಂ ಧರ್ಮಃ ಸತ್ಯೇ ಪ್ರತಿಷ್ಠಿತಮ್ ।
ಸತ್ಯೇ ಪ್ರತಿಷ್ಠಿತಂ ಶೌಚಂ ಶೀಲಂ ಸತ್ಯೇ ಪ್ರತಿಷ್ಠಿತಮ್ ॥
ಸತ್ಯೇ ಪ್ರತಿಷ್ಠಿತೋ ಮೋಕ್ಷಃ ಮೋಕ್ಷೇ ಸತ್ಯಂ ಪ್ರತಿಷ್ಠಿತಮ್ ॥೪॥

ಸತ್ಯವೇ ಜ್ಞಾನಮಂ ನಿಲಿಸಿತ್ತು, ಸತ್ಯವೇ ಧರ್ಮಮಂ ನಿಲಿಸಿತ್ತು
ಸತ್ಯವೇ ಆಚಾರಮಂ ನಿಲಿಸಿತ್ತು, ಸತ್ಯವೇ ಶೀಲಮಂ ನಿಲಿಸಿತ್ತು, ಸತ್ಯವೇ
ಮೋಕ್ಷಮಂ ನಿಲಿಸಿತ್ತು, ಆ ಮೋಕ್ಷದಿಂದಲೇ ಸತ್ಯವು ಪುಟ್ಟಿತ್ತು.

## ವಚನಗಳು

೧

ದೇವಲೋಕ ಮರ್ತ್ಯಲೋಕವೆಂಬವು ಬೇರಿಲ್ಲ ಕಾಣಿರೋ
ಸತ್ಯವ ನುಡಿವುದೇ ದೇವಲೋಕ
ಅಸತ್ಯವ ನುಡಿವುದೇ ಮರ್ತ್ಯಲೋಕ
ಆಚಾರವೇ ಸ್ವರ್ಗ ಅನಾಚಾರವೇ ನರಕ
ಇದಕ್ಕೆ ನೀವೇ ಪ್ರಮಾಣ ಕೂಡಲ ಸಂಗಮದೇವಾ

೨

ಆಟಮುಟವೇ ಆಧಾರ ಕಪಟವೇ ಸದಾಚಾರ
ಕುಟಿಲವೇ ಘನವಾಯಿತ್ತು ಕೆಲವರಿಗೆ
ಹುಸಿಯ ಮುಸಕವೇ ವರ್ತಕವಾಯಿತ್ತು ಕೆಲವರಿಗೆ
ಯಂತ್ರ ತಂತ್ರದ ವ್ಯವಹಾರವಾಯಿತ್ತು ಕೆಲವರಿಗೆ
ಸಟೆಯ ಸಾಗರದೊಳಗೆ ತೇಕಾಡುತಿರ್ದರು ಕೆಲವರು
ಸಕಲೇಶ್ವರದೇವರ ನೆರೆನಂಬಲರಿಯದವರೆಲ್ಲರೂ

೩

ಹೊಲೆಯರ ಭಾವಿಯಲೊಂದು ಎಲು ನಟ್ಟಿದ್ದರೆ
ಹೊಲೆ ಹೊಲೆ ಎಂಬುದೀ ಲೋಕವೆಲ್ಲ
ಹಲವೆಲವಿದ್ದ ಬಾಯಲ್ಲಿ ಒಲವರವ ನುಡಿದರೆ
ಅದು ಹೊಲೆಯರ ಭಾವಿಯಿಂದ ಕರಕಷ್ಟ ಕಾಣಾ ರಾಮನಾಥಾ
ಸಟೆದಿಟವೆಂಬುವೆರಡುವಿಡಿದು ನಡೆವುದೀ ಲೋಕವೆಲ್ಲವು
ಸಟೆದಿಟವೆಂಬುವೆರಡುವಿಡಿದು ನಡೆವನೇ ಲೋಕದೊಡನೆ ಶರಣನು
ಗುರುಲಿಂಗ ಜಂಗಮದಲ್ಲಿ ಸಟೆಯ ಬಳಸಿದಡೆ
ಆತನು ತ್ರಿವಿಧಕ್ಕೆ ದ್ರೋಹಿ ಆ ಘೋರ ನರಕಿ

ಉಂಬುದೆಲ್ಲ ಕಿಲ್ಬಿಷ ತಿಂಬುದೆಲ್ಲ ಅಡಗು ಕುಡಿವುದೆಲ್ಲ ಸುರೆ
ಹುಸಿಯೆಂಬುದೇ ಹೊಲೆ ಶಿವಭಕ್ತಂಗೆ ಹುಸಿಯೆಂಬುದುಂಟೇ ಅಯ್ಯಾ
ಹುಸಿಯನಾಡಿ ಲಿಂಗವ ಪೂಜಿಸಿದಡೆ
ಹೊಳ್ಳ ಬಿತ್ತಿ ಫಲವನರಸುವಂತೆ ಕಾಣಾ ಚೆನ್ನಮಲ್ಲಿಕಾರ್ಜುನಾ

೫

ಹುಸಿಯುಂಕುರಿಸಿತ್ತು ಹೊಲೆಯನಲ್ಲಿ
ಹುಸಿ ಎರಡೆಲೆಯಾಯಿತ್ತು ಮಾದಿಗನಲ್ಲಿ
ಹುಸಿ ನಾಲ್ಕೆಲೆಯಾಯಿತ್ತು ಸಮ್ಮಗಾರನಲ್ಲಿ
ಹುಸಿ ಆರೆಲೆಯಾಯಿತ್ತು ಅಗಸನಲ್ಲಿ
ಹುಸಿ ಎಂಟೆಲೆಯಾಯಿತ್ತು ವ್ಯವಹಾರಿಯಲ್ಲಿ
ಹುಸಿ ಸಸಿಯಾಯಿತ್ತು ಹಾದರಿಗನಲ್ಲಿ
ಹುಸಿ ಗಿಡವಾಯಿತ್ತು ಮದ್ಯಪಾನಿಯಲ್ಲಿ
ಹುಸಿ ಮರವಾಯಿತ್ತು ಜೂಜುಗಾರನಲ್ಲಿ
ಹುಸಿ ಹೂವಾಯಿತ್ತು ಡೊಂಬರನಲ್ಲಿ
ಹುಸಿ ಕಾಯಾಯಿತ್ತು ಅಕ್ಕಸಾಲೆಯಲ್ಲಿ
ಹುಸಿ ಹಣ್ಣಾಯಿತ್ತು ಸೂಳೆಯಲ್ಲಿ
ಹುಸಿ ಹಣ್ಣಾಗಿ ತೊಟ್ಟು ಬಿಟ್ಟಿತ್ತು ಅರಸನಲ್ಲಿ
ಇಂತೀ ಹುಸಿಯ ನುಡಿವವರಿಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ
ಪಾದೋದಕ ಪ್ರಸಾದವಿಲ್ಲವಾಗಿ ಅವನಿಗೆ ಮೋಕ್ಷವಿಲ್ಲದ ಕಾರಣ
ನಮ್ಮ ಕೂಡಲಚೆನ್ನಸಂಗಯ್ಯನ ಶರಣರು
ಹುಸಿಯ ಬಿಟ್ಟು ಕಳೆದು ನಿಜಲಿಂಗೈಕ್ಯರಾದರು.

# ಹಿಂಸಾ ನಿರಸನ ಸ್ಥಲ ೪೧

ಇಂತಿ ಪ್ರಕಾರದಿಂ ಶಿವಭಕ್ತರು ಆವ ವ್ಯವಹಾರವನು ಮಾಡುತ್ತಿರ್ದೊಡಂ ಹುಸಯ ನುಡಿಯಲಾಗದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿವ ಮರ್ಹಾ ಪುರಾತನರು.

ಇಂತೀ ಹುಸಿಯಂ ಬಿಟ್ಟು ಶಿವಭಕ್ತನಾದೆನೆಂಬವಂಗೆ ಹಿಂಸೆಯು ಹೊಲ್ಲವೆಂಬುದನರಿದು ಆ ಹಿಂಸೆ ಭಕ್ತರ್ಗೆ ಯೋಗ್ಯವಲ್ಲವೆಂದು ನುಡಿವ ವಚನಗಳು.

ಶಿವಧರ್ಮೇ

ಸರ್ವಶಾಸ್ತ್ರಸ್ಯ ವೇದಸ್ಯಾಶೇಷಯಜ್ಞಸ್ಯ ಯತ್ಫಲಮ್ ।
ಅಹಿಂಸಾನಿರತೋ ಯಸ್ತು ತತ್ಪುಣ್ಯಂ ತು ತತೋಽಧಿಕಮ್ ॥ ೧ ॥
ತ್ರೈಲೊಕ್ಯಮಪಿ ಯೋದದ್ಯಾದಖಿಲಂ ರತ್ನಪೂರಿತಮ್ ।

ಎಲ್ಲಾ ವೇದಂಗಳನೋದಿದ ಫಲವು ಎಲ್ಲಾ ಶಾಸ್ತ್ರಗಳ ಕೇಳಿದ ಫಲವು ಎಲ್ಲಾ ಯಜ್ಞಗಳ ಮಾಡಿದ ಫಲವು ಸಮಸ್ತರತ್ನಗಳಿಂವ ಕೂಡಿದ ತ್ರಿಲೋಕದಾನದ ಫಲವು ಎಷ್ಟುಂಟೋ ಅವರಿಂದ ಕೋಟಿಫಲ ವಿಶೇಷ ಹಿಂಸೆಯ ಮಾಡದದೊಂದು ಮಹಾಫಲವು ಎಲ್ಲ ಪ್ರಾಣಿಗಳಿಗೆ ಕೃಪೆಯಾಗಿ ಹಿಂಸೆಯ ಮಾಡದಿಪ್ಪುದು ಸಕಲ ಧರ್ಮಂಗಳ ಮಾಡಿದ ಪುಣ್ಯಮೆಂಬರ್ಥ

## ವಚನಗಳು.

೧

ಬೆಟ್ಟದಮೇಲಣ ಗಿಡಗಳು ಬೆಟ್ಟವ ಮುಟ್ಟದಂತಿಪ್ಪುವೇ
ವಿವರಿಸಿ ನೋಡಲು ಸೃಷ್ಟಿಯೊಳಗಣ ಪ್ರಾಣಿಗಳು ಪರಮನ
ಮುಟ್ಟದಿಪ್ಪುವೇ
ಕಷ್ಟರು ಬೇಡರೆಂದು ಬಟ್ಟೊಡುತಿಪ್ಪ ಪ್ರಾಣಿಗಳನಟ್ಟಿ
ಹಿಡಿದು ಕೊಂದರೆ ಪ್ರತಿಷ್ಠಿಸಿದೀಶ್ವರನಿಕ್ಕದಿಪ್ಪನೇ ನರಕದಲ್ಲಿ

ಒಡೆಯರಿಲ್ಲೆಂದು ಹಲವು ಪ್ರಾಣಿಯ ಹರಿಹರಿದು ಕೊಂದರೆ
ಹರನಿಕ್ಕದಿಪ್ಪನೇ ಅಘೋರ ನರಕದಲ್ಲಿ
ಸಕಲ ಪ್ರಾಣಿಗಳಿಗೆ ಮೇಲಾರೈಕೆ
ನಮ್ಮ ಸಕಳೇಶ್ವರದೇವನಲ್ಲದೆ ಮತ್ತೊಬ್ಬರುಂಟೇ

೨

ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ
ಹಲವು ಪ್ರಾಣಿಯ ಕೊಂದು ನಲಿನಲಿದಾಡುವ
ತನ್ನ ಮನೆಯಲೊಂದು ಶಿಸು ಸತ್ತರೆ
ಅದಕ್ಕೆ ಮರುಗುವಂತೆ ಅದಕೇಕೆ ಮರುಗನು ಅದೆಂತೆಂವಡೆ

ಸ್ವಾತ್ಮಾನಮಿತರಾಂಶ್ಚೈವ ದೃಷ್ಟ್ವಾ ದೃಷ್ಟ್ವಾನಭಿದ್ಯತೇ ।
ಸರ್ವಂ ಚಿಜ್ಯೋತಿರೇವೇತಿ ಯಃ ಪಶ್ಯತಿ ಸ ಪಶ್ಯತಿ ॥

ಎಂದುದಾಗಿ ಜಾಲಗಾರನ ದುಃಖ ಜಗಕ್ಕೆಲ್ಲ ನಗೆಗೆಡೆ
ಇದು ಕಾರಣ ಚೆನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು
ಜೀವ ಹಿಂಸೆಯ ಮಾಡುವ ಮಾದಿಗರನೆಂಬೆನಯ್ಯಾ

೩

ದಯವಿಲ್ಲದ ಧರ್ಮವಾವುದಯ್ಯಾ
ದಯವೇ ಬೇಕು ಸಕಲ ಪ್ರಾಣಿಗಳಲ್ಲಿ
ದಯವಿಲ್ಲದವನ ಭಕ್ತಿ ಏತಕ್ಕೆ ಬಾಂತೆ
ಸಕಲ ಪ್ರಾಣಿಗಳಲ್ಲಿ ದಯವೇ ಬೇಕು
ದಯವೇ ಭಕ್ತಿಗೆ ಮೂಲವಯ್ಯಾ
ನಮ್ಮ ಕೂಡಲ ಸಂಗಮದೇವರು ಅಂತಲ್ಲದೊಲ್ಲನಯ್ಯಾ

## ತಾಮಸ ಭಕ್ತಸಂಗ ನಿರಸನ ಸ್ಥಲ ೪೨

ಈ ಪ್ರಕಾರದಿಂ ಅನ್ಯದೈವ ಭವಿಸಂಗ ಭವಿಪಾಕ ಪರದಾರ ಕಳವು ಹಿಂಸೆ ಹುಸಿಯೆಂಬೀ ಸಪ್ತ ಮಹಾ ಪಾತಕಂಗಳಂ ಬಿಟ್ಟಂತಹ ಸದಾಚಾರ ಸದ್ಭಕ್ತರು ಸದಾಚಾರ ಸಂಪನ್ನರಲ್ಲದ ಅನಾಚಾರ ಸಂಬಂಧಿಗಳೊಡನೆ ಸಂಗಮಂ ಮಾಡಲಾಗದೆಂದು ನುಡಿದ ವಚನಂಗಳು.

ಶಿವಧರ್ಮೇ—

ಉತ್ತಮಾಂವೃತ್ತಿ ಮಾಶ್ರಿತ್ಯ ನೀಚವೃತ್ತಿಂ ಸಮಾಶ್ರಿತಃ ।
ಆರೂಢಪತಿತೋ ಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥ ೧ ॥

ಅಧಿಕವಾದ ಪದವಿಯನಾಶ್ರಯಿಸಿ ಹೀನದೈವಂಗಳನು ಹೀನವಾದ ವ್ರತನಿಯಮಂಗಳನ್ನು ನಡೆಸಲಾಗದು ಅಥವಾ ನಡೆದಡೆ ವ್ರತಗೇಡಿ ಯಹನು ಅಂತಹನಂ ಬೆರಿಸಲಾಗದು.

ಯೋ ಲಿಂಗನಿಷ್ಠಸನ್ನೇಹಶ್ಚಾನ್ಯದೈವ ನಮಸ್ಕೃತಃ ।
ನರೋ ನರಕಗಾಮೀ ಸ್ಯಾತ್ತಸ್ಯ ಸಂಭಾಷಣಾದಪಿ ॥ ೨ ॥

ಆವನಾನೊಬ್ಬನು ಲಿಂಗಸನ್ನಿಹಿತನಾಗಿ ಅನ್ಯದೈವಕ್ಕೆ ನಮಸ್ಕಾರ ಮಂ ಮಾಡುವನೋ ಆತನೊಡನೆ ಪ್ರಿಯ ಸಂಭಾಷಣೆಯಂ ಮಾಡಿದಡೆ ಮಾಡಿದವರಿಗೆ ನರಕ ತಪ್ಪದು.

ವಾದೀ ವೈದ್ಯಶ್ಚ ಪಿಶುನಶ್ಚಾನ್ಯದೈವಜ್ಞ ಪಾತಕಃ ।
ತತ್ಸಂಗೀ ಚ ಮಹಾದ್ರೋಹೀ ಸ ಲಿಂಗೀ ಭವಿನಾಶಮಃ ॥ ೩ ॥

ವಾದಿಯೂ ವೈದ್ಯನೂ ಕೊಂಡೆಯನೂ ಅನ್ಯದೈವತತ್ಪರನೂ ಭ್ರಷ್ಟನೂ ಇಂತಪ್ಪ ಮಹಾನರಕಿಗಳಹ ಭವಿಗಳೊಡನೆ ಭಕ್ತನು ಸಂಗಮಂ ಮಾಡಿದಡೆ ಆ ಲಿಂಗವು ತೊಲಗುವುದು ಅವನು ಭವಿಯಾಗಿ ನರಕವನುಂಬುವನು.

ಶಿವರಹಸ್ಯೇ—

ಸಮಯ್ಯಬ್ರೈಃ ಸಹ ಸಂವಾಸಃ ಪತಿತೈರ್ನ ಕದಾಚನ ।
ಮಿಥ್ಯಾಸಿಂವಾಕರೈಶ್ಚೈವ ಪರಮೇಶ್ವರನಿಂದಕೈಃ ॥ ೪ ॥

ಕಷ್ಟರ ಶಿವನಿಂದಕರ ಶಿವಭಕ್ತನಿಂದಕರ ಗುರುನಿಂದಕರ ಜಂಗಮನಿಂದಕರ ಸಂಗವುಂ ಬಿಡುವದು.

ಆಜ್ಞಾಭಂಗಾರ್ಥಹರಣಂ ಗುರೋರಪ್ರಿಯವರ್ತನಮ್ ।
ಗುರುದ್ರೋಹಮಿತಿ ಪ್ರೋಕ್ತಂ ತತ್ಸಂಸರ್ಗಂ ಪರಿತ್ಯಜೇತ್ ॥ ೫ ॥

ಗುರುವಾಜ್ಞೆಯ ಮೀರುವುದುಂ ಗುರುಧನವ ಕೆಡಿಸುವುದುಂ ಗುರುವಿಗೆ ಅಸಹ್ಯವ ಮಾಡುವುದುಂ ಈ ಮೂರು ಗುರುದ್ರೋಹವೆನಿಸುವುದು. ಇಂತಹರ ಸಂಗವು ಸದಾಚಾರಸದ್ಭಕ್ತರು ಬಿಡುವುದು.

ಲೈಂಗೇ—

ಸದ್ಭಕ್ತೋಽಭಕ್ತಸಂಯೋಗೇ ನ ಭುಂಜೀಯಾತ್ಕದಾಚನ ।
ತಥಾಪಿ ಭುಂಜಿತೋ ದೇವಿ ಪ್ರಸಾದತ್ರಯನಾಶನಮ್ ॥ ೬ ॥

ಸದ್ಭಕ್ತನು ಅಸಭಕ್ತನ ಸಂಗವು ಮಾಡಲಾಗದು. ಅವನೊಡನೆ ಉಣಲಾಗದು. ಹಾಗೆ ಉಂಡವನಾದರೆ ಗುರುಲಿಂಗಜಂಗಮದ ಪ್ರಸಾದದಕ್ಕೆ ದೂರವಹನೆಂದು ದೇವಿಯರಿಗೆ ಶಿವನು ನಿರೂಪಿಸಿಹನು.

ಸೌರಸಂಹಿತಾಯಾಂ

ಯಸ್ತು ಸಂವತ್ಸರಂ ಪೂರ್ಣಂ ಪತಿತೈಃ ಸಹ ಸಂವಸೇತ್ ।
ಯೋನ ಶಯ್ಯಾಸನೋ ನಿತ್ಯಂ ಜ್ಞಾನಾದ್ವೈ ಪತಿತೋ ಭವೇತ್ ॥೭॥

ಅವನಾವನೊಬ್ಬನು ವ್ರತಗೇಡಿಯಿರುವನೋ ಅವನ ಸಂಗಡ ಒಂದು ವರ್ಷವಿದ್ದಡೆ ಅವನಂತೆಯಹನು.

## ವಚನಗಳು

೧

ಆಡಿದರೆ ಸದಾಚಾರಿಗಳೊಡನಾಡುವುದು.
ನುಡಿದರೆ ಸದಾಚಾರಿಗಳೊಡನೆ ನುಡಿವುದು
ಕೂಡಿದರೆ ಲಿಂಗ ಸಂಗಿಗಳೊಡನೆ ಕೂಡುವುದು
ಲಿಂಗನಿಷ್ಠೆಯಿಲ್ಲದವರಂಗಳವ ಮೆಟ್ಟಲಾಗದು.
ಜಂಗಮದಲ್ಲಿ ಪ್ರೀತಿಯಿಲ್ಲದವರೊಡನೆ ಮಾತಾಡಲಾಗದು
ಪ್ರಸಾದವ ಕೊಳ್ಳದವರ ಸಹಪಂಕ್ತಿಯಲ್ಲಿ ಕುಳಿತು

ಪ್ರಸಾದಭೋಗವ ಮಾಡಲಾಗದು.
ಇಂತಪ್ಪ ಭಕ್ತಿಹೀನರ ಕಂಡು ಮನಮುನಿಸ ಮಾಡಿಸಯ್ಯಾ
ರೇಕಣ್ಣ ಪ್ರಿಯನಾಗಿನಾಥಾ

೨

ಅರೆಭಕ್ತರಾದವರ ನೆರೆಬೇಡ ಹೊಡೆಬೇಡ ಹೊದ್ದಬೇಡ
ದಾರಿಸಂಗಡ ಬೇಡ ದೂರದಲ್ಲಿದ್ದು ನುಡಿಸಬೇಕು
ಕೂಡಲಸಂಗಮದೇವರಲ್ಲಿ ಸದಾಚಾರಸಂಪನ್ನರಾಗಿ
ನಚ್ಚಿ ಮೆಚ್ಚಿಪ್ಪ ಸದ್ಭಕ್ತರಿಗೆ ತೊತ್ತಾಗಿಪ್ಪೆನಯ್ಯಾ

೩

ಮನಮನವೇಕಾರ್ಥವಾಗದವರಲ್ಲಿ
ತನುಗುಣ ನಾಸ್ತಿಯಾಗದವರಲ್ಲಿ
ಬುದ್ಧಿಗೆ ಬುದ್ಧಿ ಓರಣವಾಗದವರಲ್ಲಿ
ಭಾವಕ್ಕೆ ಭಾವ ತಾರ್ಕಣೆಯಾಗದವರಲ್ಲಿ
ಶೀಲಕ್ಕೆ ಶೀಲ ಸಮಾನವಿಲ್ಲದವರಲ್ಲಿ
ಅವರೊಡನೆ ಕುಳ್ಳಿರಲಾಗದು
ಸಮಗಡಣದಲ್ಲಿ ಮಾತಾಡಲಾಗದು ಅದೆಂತೆಂದಡೆ—

ಸಂಸರ್ಗತೋ ದೋಷಗುಣಾ ಭವಂತಿ

ಎಂದುದಾಗಿ ಇದುಕಾರಣ ಮಹಾಲಿಂಗಕಲ್ಲೇಶ್ವರಾ
ನಿಮ್ಮ ಸದ್ಭಕ್ತಿಯನರಿಯದವರಿಗೆ ಸಂಗದಿಂದ
ಕೈಲಾಸಕ್ಕೆ ದೂರವಾಗಿಪ್ಪರಯ್ಯಾ

೪

ಪುಣ್ಯಾಂಗನೆಯ ಸುತಂಗೆ ಪಿತನುಂಟು
ಪಿತಾಮಹನುಂಟು ಪ್ರಪಿತಾಮಹನುಂಟು
ಪಣ್ಯಾಂಗನೆಯ ಸುತಂಗೆ ಪಿತನಿಲ್ಲ ಮೇಲೆ ಏನೂ ಇಲ್ಲ
ಅವನ ಬದುಕು ನಗೆಗೆಡೆ
ಭಕ್ತ್ಯಂಗನೆಯ ಸುತನಹ ಸದ್ಭಕ್ತಂಗೆ ಪಿತನಹ ಗುರುವುಂಟು.

ಪಿತಾಮಹನೆಂಬ ಜಂಗಮವುಂಟು
ಪ್ರಪಿತಾಮಹ ಲಿಂಗವುಂಟು
ಅಭಕ್ತ್ಯಂಗನೆಯ ಸುತನಹ ತಾಮಸ ಭಕ್ತಂಗೆ ಪಿತನಹಗುರುವಿಲ್ಲ
ಪಿತಾಮಹನಹ ಜಂಗಮವಿಲ್ಲ ಪ್ರಪಿತಾಮಹನಹ ಮಹಾಲಿಂಗವಿಲ್ಲ
ಅವನ ಸ್ಥಿತಿ ನಗೆಗೆಡೆ ಇದುದೃಷ್ಟನೋಡಿರೇ
ಇದು ಕಾರಣ ಸದ್ಭಕ್ತನಾದವನು ಭಕ್ತಿಹೀನರ ಸಂಗದ
ನಡೆನುಡಿಯುಳ್ಳೊಡೆ
ನಿಮ್ಮ ಕಾರುಣ್ಯಕ್ಕೆ ದೂರವಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

ಇಂತೀ ಪ್ರಕಾರದಿಂ ತಾಮಸ ಭಕ್ತಸಂಗವ ಸದಾಚಾರಿಗಳು ಮಾಡಲಾಗದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಸದ್ಭಕ್ತಿಸಂಪನ್ನರಾಗಿರ್ದವರುಗಳು ಶಿವಾಚಾರ ಪಥವನರಿಯದ ಗುರುವಿನಲ್ಲಿ ಕಾರುಣ್ಯವ ಪಡೆಯಲಾಗದು. ಅದು ಕಾರಣ ಹೀನರಾದ ಭವಭಾರಿಗಳಿಗೆ ಶಿವಪಥವ ಬಲ್ಲಂತಹ ಗುರುಸಾಹಿತ್ಯವ ಮಾಡಲಾಗದು. ಈ ಗುರುಶಿಷ್ಯಸ್ಥಲವಲ್ಲವೆಂಬುದಂ ತೋಂಟದಸ್ವರ ನುಡಿದ ವಚನಂಗಳು.

ದುರ್ಬುದ್ಧಿಶ್ಚ ದುರಾಚಾರೀ ಪಿಶುನೋ ಲೋಭಕಸ್ತಥಾ ।
ದುರ್ಗುಣಃ ಕ್ರೋಧಮೂರ್ತಿಶ್ಚ ಶಿವದೀಕ್ಷಾವಿವರ್ಜಿತಾಃ ॥೧॥

ಕೆಟ್ಟ ಬುದ್ಧಿಯುಳ್ಳವಂಗೆ ದುರಾಚಾರಿಗೆ ಕೂಟ ಸಾಕ್ಷಿಗೆ ಲೋಭಿಗೆ ದುರ್ಗುಣಿಗೆ ಕ್ರೋಧಿಗೆ ಇಂತಹರುಗಳಿಗೆ ಶಿವದೀಕ್ಷೆಯು ಮಾಡಲಾಗದು.

ಕುಹಕಂ ಕುಚರಿತ್ರಂ ಚ ಅಕುಲಂ ಚ ಕುಮಾಂತ್ರಿಕಮ್ ।
ಕುಭಾಷ್ಯಂ ಕುಜನಾಸ್ತಂ ಚ ದೀಕ್ಷಾಂ ತಾಂ ವರ್ಜಯೇದ್ಬುಧಃ ॥೨॥

ಕುಹಕಿಯನ್ನು ಕುಚರಿತ್ರನನ್ನು ಕುಲಹೀನನನ್ನು ಚಾಡಿಕಾರನನ್ನು ಕುಭಾಷಿತನನ್ನು ಕುಜನಸಂಗಿಯನ್ನು ಶಿವದೀಕ್ಷೆಯಂ ಮಾಡಲಾಗದು. ಹಾಗೆ ಮಾಡಿದ ಗುರುವಿಗೆ ದ್ರೋಹವುಂಟು.

ಪರದಾರಾ ಪ್ರವೃತ್ತಂ ಚ ಸ್ವರ್ಣಚೋರಂ ಚ ಲುಬ್ಧಕಮ್ ।
ಶಿವದೀಕ್ಷಾ ನ ಕರ್ತವ್ಯಾ ತತ್ಗುರುರ್ನರಕಂ ವ್ರಜೇತ್ ॥೩॥

ಹಾದರವಂ ಮಾಡುವಂಗೆ ಚಿನ್ನವ ಕಳುವಂಗೆ ಲೋಭಿಯಾಗಿದ್ದವಂಗೆ ಶಿವದೀಕ್ಷೆಯಂ ಮಾಡಲಾಗದು. ಹಾಗೆ ಮಾಡಿದಡೆ ಆ ಗುರುವು ನರಕವನೈದುವನು.

ಮಹಾಭೋಗೀ ಮಹಾತ್ಯಾಗೀ ಲೋಲುಪ್ತೋ ವಿಷಯಾತುರಃ ।
ಪೈಶೂನ್ಯೋ ನಿಗ್ರಹೀ ಚೈವ ತಮಾಚಾರ್ಯಂ ವಿವರ್ಜಯೇತ್ ॥೪॥

ಮಹಾಭೋಗಿಯಾಗಿದ್ದವನು ಮಹಾತ್ಯಾಗಿಯಾಗಿದ್ದವನು ಅತಿ ಲೋಲನಾಗಿದ್ದಾತನು ಅತಿವಿಷಯಾಸಕ್ತನು ಕೂಟಸಾಕ್ಷಿಕನು ಅತ್ಯಂತ ನಿಗ್ರಹಿಯಾಗಿದ್ದಾತನು ಆಚಾರ್ಯನೆಂದು ಆತನ ಕೈಯ್ಯ ದೀಕ್ಷೆಯಂ ಕೊಳಲಾಗದು.

> ಪುಷ್ಪಾಕ್ಷಂ ದಂತಹೀನಂ ಚ ಬಧಿರಂ ಕಲಹಪ್ರಿಯಮ್
> ವ್ಯಾಧಿನಂ ಚಾಂಗಹೀನಂ ಚ ಕುಷ್ಠಾಚಾರ್ಯಂ ವಿವರ್ಜಯೇತ್ ॥೫॥

ಹೂಗಣ್ಣವನು ದಂತಹೀನ ಕಿವುಡ ಕಲಹವಂತ ರೋಗಿ ಕುಷ್ಠಿ ಇಂತಹರಂ ಆಚಾರ್ಯರೆಂದು ದೀಕ್ಷೆಯಂ ಕೊಳಲಾಗದು.

## ವಚನಗಳು

೧

ಶ್ರೀಗುರುವಾದಾತನು ಸಕಲಾಗಮಂಗಳ ಹೃದಯವನರಿತು
ತನ್ನ ಆದಿಮಧ್ಯಾವಸಾನವಂ ತಿಳಿದು
ಸರ್ವಾಚಾರವು ತನ್ನಲ್ಲಿ ನೆಲೆಗೊಂಡು
ಉಪದೇಶಮಾಡುವ ಪರಿಯೆಂತೆಂದಡೆ
ಬ್ರಾಹ್ಮಣನಂ ಮೂರು ವರ್ಷ ನೋಡಬೇಕು
ವೈಶ್ಯನಂ ಒಂಬತ್ತು ವರ್ಷ ನೋಡಬೇಕು
ಕ್ಷತ್ರಿಯನಂ ಆರು ವರ್ಷ ನೋಡಬೇಕು
ಶೂದ್ರನಂ ಹನ್ನೆರಡು ವರ್ಷ ನೋಡಬೇಕು
ಅದೆಂತೆಂದಡೆ ವೀರಾಗಮೇ—

> ಬ್ರಾಹ್ಮಣಂ ತ್ರೀಣಿ ವರ್ಷಾಣಿ ಕ್ಷತ್ರಿಯಂ ವರ್ಷಷಟ್ಕಕಂ ।
> ವೈಶ್ಯಂ ತು ನವ ವರ್ಷಾಣಿ ಶೂದ್ರಂ ದ್ವಾದಶ ವರ್ಷಕಮ್ ॥

ಇಂತೀ ಶ್ರುತ್ಯರ್ಥವನರಿಯದೆ ಉಪಾಧಿವಿಡಿದು
ಉಪದೇಶವ ಮಾಡುವಾತ ಗುರುವಲ್ಲ
ಉಪದೇಶವಿಡಿದು ಉಪಾಧಿಯಲ್ಲಿ ದೀಕ್ಷೆಯ ಕೊಂಡಾತ ಶಿಷ್ಯನಲ್ಲ
ಇವರಿಬ್ಬರ ನಿಲವು ಒಂದೇ
ಕಳ್ಳನ ಮನೆಗೆ ಕಳ್ಳ ಬಿಜ್ಜಿನನಾಗಿ ಬಂದಂತೆ

ಆ ಗುರು ಶಿಷ್ಯರಿಬ್ಬರನು ರೌರವ ನರಕದಲ್ಲಿಕ್ಕುವ
ನಮ್ಮ ಕೂಡಲಸಂಗಮದೇವ

೨

ಸತ್ತು ಮಣ್ಣಾಗಿ ಹೋದ ಮಾತಾಪಿತರುಗಳು
ತಮ್ಮ ಸಂತಾನವಾಗಿ ಜನಿಸಿ ಬಂದರೆಂದು
ಹೆತ್ತು ಹೆಸರಿಟ್ಟು ಕರೆವರಯ್ಯಾ
ಕಾಗೆಯ ಬಾಯ ಕರಗದ ಬಾಯೋಗರವಂ ಕೊಂಡು
ಅನ್ಯದೈವಂಗಳಂ ಪೂಜಿಸಿ ನರಕಕ್ಕಿಳಿವ
ನರಕಿ ಜೀವಿಗಳಿಗೆ ಉಪದೇಶವಂ ಕೊಟ್ಟ ಗುರುಸಿಂಗೆಯೂ
ಆ ಗುರುವಿನ ಕೈಯ್ಯ ಉಪದೇಶವಂ ಕೊಂಡ ಶಿಷ್ಯಂಗೆಯೂ
ಇವರಿಬ್ಬರಿಗೆಂಯೂ ಭವಂ ನಾಸ್ತಿಯಾಗದೆ
ಭವಸಾಗರದೊಳಗೇಳುತ್ತ ಮುಳುಗುತ್ತಲಿಪ್ಪರು ಕಾಣಾ ಕಲಿದೇವರ ದೇವಾ

೩

ಪ್ರಾಣಕ್ಕೆ ಉಪದೇಶವ ಮಾಡಿ ಕಾಯಕ್ಕೆ ಲಿಂಗವ ಕೊಡಬೇಕು
ಕಾಯಶುದ್ಧವ ಮಾಡಿ ಪ್ರಾಣಕ್ಕೆ ಅರಿವ ಕೊಡಬೇಕು
ಇಷ್ಟುವನರಿಯದೆ ದೀಕ್ಷೆಯ ಮಾಡಬಾರದು
ಕುರುಡ ಕೂಳ ಕಲಸಿ ಪ್ರತಿಕುರುಡಂಗೂಡಿಸಿದಂತಾಯಿತ್ತು
ಮಲಭಾಂಡದ ಜೀವಿಯ ಕೈಯಲ್ಲಿ
ಅನುಜ್ಞೆಯ ಪಡೆದ ಶಿಷ್ಯಂಗೆ ಉಭಯ ಕೇಡಾಯಿತ್ತು
ಇದನರಿದು ಅರಿವುಳ್ಳ ಶಿಷ್ಯನು
ಶಿವಜ್ಞಾನಸಮಾರ್ಗವ ಬಲ್ಲ ಗುರುವಿನ ಕೈಯ್ಯಲ್ಲಿ
ಆ ಲಿಂಗವ ಕೊಟ್ಟು ಮರಳಿ ಪಡೆಯಬೇಕಂಡಾ
ಸದಾಶಿವಲಿಂಗ ಮೂರ್ತಿಯನರಿವುದಕ್ಕೆ ಇದೇ ಚಿಹ್ನೆಯು

೪

ಜಂಗಮದ ಪಾದತೀರ್ಥಪ್ರಸಾದವ ಕೊಳ್ಳುವಂತಹ
ಗುರುವಿನ ಕೈಯ್ಯಲ್ಲಿ

ಲಿಂಗಧಾರಣವ ಮಾಡಿಸಿಕೊಳ್ಳಲಾಗದು
ಆತನ ಪಾದತೀರ್ಥಪ್ರಸಾದವ ಕೊಳಲಾಗದು
ಅಥವಾ ಪ್ರಮಾದದಿಂ ಲಿಂಗಧಾರಣವ ಮಾಡಿಸಿಕೊಂಡಡೆಯೂ
ಕೊಳಲಿ
ಆ ಗುರುವನೇ ಜಂಗಮದ ಪಾದತೀರ್ಥಪ್ರಸಾದವ ಕೊಂಬಹಾಗೆ
ಸದಾಚಾರಿಯ ಮಾಡುವದು ಶಿಷ್ಯನು
ಆ ಗುರುಲಿಂಗಜಂಗಮದ ಪಾದತೀರ್ಥಪ್ರಸಾದವ ಕೊಳದಿರ್ದಡೆ
ಮಾಣಲಿ
ನೀ ನಿನ್ನ ಲಿಂಗವ ಮರಳಿ ಜಂಗಮದ ಪಾದತೀರ್ಥಪ್ರಸಾದವ ಕೊಂಬ
ಜಂಗಮದ ಕೈಯಲ್ಲಿ ಕೊಟ್ಟು ಕೊಳಬೇಕು
ಜಂಗಮದ ಪಾದತೀರ್ಥ ಪ್ರಸಾದವ ಕೊಳ್ಳದಂತಹ
ಜಂಗಮದ ಕೈಯ್ಯಲ್ಲಿ ತೀರ್ಥಪ್ರಸಾದವ ಕೊಳಲಾಗದು
ಜಂಗಮವು ಭಕ್ತನ ಮಠಕ್ಕೆ ಬಂದರೆ-
ಭಕ್ತನು ತೀರ್ಥಪ್ರಸಾದವ ಕೊಳ್ಳದಂತಹ ಜಂಗಮವವಾದಡೂ
ಅವರ ತೀರ್ಥಪ್ರಸಾದವ ಕೊಳ್ಳಲೀಯಾಗದು
ಅದೇನು ಕಾರಣವೆಂದರೆ ಜಂಗಮದ ಪಾದತೀರ್ಥಪ್ರಸಾದವ
ಕೊಳ್ಳದ-
ಗುರುವಿಂಗೆಯು ಲಿಂಗಕ್ಕೆಯು ಜಂಗಮಕ್ಕೆಯು
ಮುಕ್ತಿಯಿಲ್ಲ ಕಾಣಾ ರೇಕಣ್ಣಪ್ರಿಯ ನಾಗಿನಾಥಾ

## ಸಹಜ ದೀಕ್ಷಾ ಸ್ಥಲ ೪೪

ಈ ಪ್ರಕಾರದಿಂದ ಭಪ್ರೋತ್ತರವಾಗಿ ಕೊಡುವ ಕೊಂಬ ಗುರುಶಿಷ್ಯ ರ್ಕಳಲ್ಲಿಯ ದೀಕ್ಷಾವಿಧಾನವೇ ಶುದ್ಧದೀಕ್ಷೆಯಲ್ಲದೆ ಉಳಿದ ಪ್ರಪಂಚಕವ ಉದರಪೋಷಣನಿಮಿತ್ತ ಕೊಡುವ ಕೊಂಬ ದೀಕ್ಷೆಯು ಪ್ರಯೋಜನವಲ್ಲ ವೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಸಹಜ ಭಕ್ತರುಗಳಿಗೆ ನಿಜದೇಶಿಕೇಂದ್ರನು ಮಾಡುವ ದೀಕ್ಷಾವಿಧಾನವನರುಪಲೋಸ್ಕಾರ ನುಡಿದ ವಚನಂಗಳು

ವೀರಾಗಮೇ—

**ಸರ್ವಾಚಾರಸುಸಂಪನ್ನಃ ಪೂಜ್ಯೋ ವಸತಿ ಪೂತದಃ ।**
ನಿರ್ಮಲೋ ನಿಷ್ಪ್ರಪಂಚೋಽಯಮಿತಿ ಶ್ರೀಗುರುಲಕ್ಷಣಮ್ ॥ ॥

ಎಲ್ಲಾ ಆಚಾರಗಳಿಂದ ಪೂರ್ಣನಾಗಿದ್ದು ಪಾವನನಾಗಿದ್ದು ಪೂಜ್ಯ ನಾಗಿದ್ದು ಮಲರಹಿತನಾಗಿದ್ದು ಪ್ರಪಂಚರಹಿತನಾಗಿದ್ದುದೀಗ ಶ್ರೀಗುರು ವಿನ ಲಕ್ಷಣವು.

ಮಂತ್ರ ಶಾಸ್ತ್ರಸಮಾಯುಕ್ತಂ ನಿತ್ಯಂ ನಿರ್ಮಲಪೂಜಿತಮ್ ।
ಸದಾಚಾರಂ ತು ಕರ್ತವ್ಯಮಿತ್ಯೇತದ್ಗುರುಲಕ್ಷಣಮ್ ॥೨॥

ಮಂತ್ರ ಶಾಸ್ತ್ರಂಗಳಿಂದ ಸಹಿತವಾಗಿದ್ದ ನಿತ್ಯನಾದ ನಿರ್ಮಲನಾದ ಪೂಜ್ಯನಾದ ಸದಾಚಾರ ಸಂಪನ್ನನಾದುದೀಗ ಉತ್ತಮಗುರುವಿನ ಲಕ್ಷಣವು.

ಪಾಪಭೀರುಂ ಮಹಾಶಾಂತಂ ಲೋಕವಂದ್ಯಂ ವಿಚಕ್ಷಣಮ್ ।
ವ್ಯಾಪಾರರಹಿತಂ ಶುದ್ಧಂ ಶಾಶ್ವತಂ ಶಿವದೀಕ್ಷಿತಮ್ ॥೩॥

ಪಾಪಕ್ಕಂಜುವ ಅತ್ಯಂತ ಶಾಂತನಾಗಿರುವ ಸಮಸ್ತಪ್ರಾಣಿಗಳಿಂದ ವಂದಿಸಕೊಳ್ಳುವ ವಿವೇಕವುಳ್ಳ ಕಪಟವಿಲ್ಲದಿಹ ಶುದ್ಧನೆನಿಸಿವ ನಿತ್ಯನೆನಿ ಸಿವ ಶಿವದೀಕ್ಷೆಯುಳ್ಳ ಹೀಗಿರುವುದೀಗ ಗುರು ಲಕ್ಷಣವು.

**ಶಿವದೀಕ್ಷಾವಿಧಾನಜ್ಞ ಆಚಾರೇಷು ಪರೀಕ್ಷಿತಃ ।**
**ವೇದಾಗಮಾದಿಸಂಪನ್ನೋ ಆಚಾರ್ಯಃ ಶಿವದೀಕ್ಷಕಃ ॥೪॥**

ಶಿವದೀಕ್ಷಾವಿಧಾನವಂ ಬಲ್ಲ ಸದಾಚಾರಣೆಯಿಂ ಪರೀಕ್ಷಿಸಲ್ಪಟ್ಟ ಸಮಸ್ತವೇದಾಗಮ ಶಾಸ್ತ್ರಸಂಪನ್ನನಾದವನೇ ಶಿವದೀಕ್ಷೆಯ ಮಾಡಲು ತಕ್ಕ ಆಚಾರ್ಯನು.

**ಸುಂದರಃ ಸುಮುಖಃ ಸ್ವಚ್ಛಃ ಸುಲಭಃ ಸರ್ವತಂತ್ರವಿತ್ ।**
**ಅಸಂಶಯಃ ಸಂಶಯಚ್ಛೇತ್ತಾ ನಿರಪೇಕ್ಷೋ ಗುರುರ್ಮತಃ ॥೫॥**

ಮನೋಹರನಾಗಿದ್ದ ಸುಮುಖವಾಗಿದ್ದ ನಿರ್ಮಲವಾಗಿದ್ದ ಎಲ್ಲರಲ್ಲಿಯೂ ಸುಲಭನೆನಿಸಿದ ಎಲ್ಲ ತಂತ್ರಂಗಳನು ಬಲ್ಲ ಸಂಶಯರಹಿತನಾದ ಸಂಶಯಂಗಳನುತ್ತರಿಸುವ ಅಪೇಕ್ಷೆಯಿಲ್ಲದಿರುವನು ಗುರುವೆಂದು ತಿಳಿವುದು.

## ವಚನಗಳು

೧

ಎಲ್ಲರ ದೀಕ್ಷೆಯ ಪರಿಯಂತಲ್ಲ ಎನ್ನಯ್ಯನ ದೀಕ್ಷೆ
ನಡೆನುಡಿ ಶುದ್ಧವಾದವರಿಗಲ್ಲದೆ ಅನುಗ್ರಹಿಸನೋಡಾ
ಬಿಲ್ಲು ಬೆಳವಲಕಾಯ ಹಿಡಿದಂತೆ ಸಂಸ್ಕಾರಕ್ಕಲ್ಲ ಪಾರಮಾರ್ಥಕ್ಕಲ್ಲ
ಜಡನರರನೊಲ್ಲನೊಲ್ಲ ದೀಕ್ಷೆಯ ಕೊಡನು
ಭವಭಾರಿಗಳ ಮುಖದತ್ತ ನೋಡನಯ್ಯಾ
ನಮ್ಮ ಕೂಡಲ ಚನ್ನಸಂಗಯ್ಯನೆಂಬ ಜ್ಞಾನ ಗುರುವು

೨

ಒಳಗೆ ಶೋಧಿಸಿ ಹೊರಗೆ ಶುದ್ಧವಿಸಿ
ಒಳಹೊರಗೆಂಬ ಉಭಯ ಶಂಕೆಯ ಕಳೆದು
ಸ್ಫಟಿಕದ ಶಲಾಕೆಯಂತೆ ತಳವೆಳಗು ಮಾಡಿ
ಸುಕ್ಷೇತ್ರವನರಿದು ಬೀಜವ ಬಿತ್ತುವಂತೆ
ಶಿಷ್ಯನ ಸರ್ವಪ್ರಪಂಚ ನಿವೃತ್ತಿಯಂ ಮಾಡಿ ನಿಜೋಪದೇಶವನಿತ್ತು
ಆ ಶಿಷ್ಯನ ನಿಜದಾಯಿಯನೈದಿಸುವನೀಗ ಜ್ಞಾನ ಗುರುವು
ಆ ಸಹಜಗುರುವೀಗ ಜಗದಾರಾಧ್ಯನು
ಅವರ ಶ್ರೀಪಾದಕ್ಕೆ ನಮೋ ನಮಃ ಎಂಬೆ ಕಾಣಾ
ಚೆನ್ನಮಲ್ಲಿಕಾರ್ಜುನಾ

## ದೀಕ್ಷಾವಿಧಿಕ್ರಮ ಸ್ಥಲ ೧

ಇಂತಹ ಸಜ್ಜನ ಶುದ್ಧ ಶಿವಾಚಾರಸಂಪನ್ನರುಗಳಿಗೆ ಮಹಾದೇಶಿಕೇಂದ್ರನು ಮಾಡಿದ ದೀಕ್ಷಾವಿಧಾನಮಂ ಪ್ರಕಟಿಸಿ ನುಡಿದ ವಚನಂಗಳು.

ವಾತುಲತಂತ್ರೇ—

> ಪುತ್ರಮಾತೃಪಿತೃಭ್ರಾತೃದಾರಾ ಬಂಧುಜನಾಶ್ಚ ಯೇ ।
> ಏಕ ಏವ ಗುರುಸ್ತೇಷಾಂ ಅನ್ಯಥಾ ನರಕಂ ವ್ರಜೇತ್ ॥೧॥

ಮಗ ತಾಯಿ ತಂದೆ ಒಡಹುಟ್ಟಿದವ ಹೆಂಡತಿ ಬಂಧುಗಳು ಮೊದಲಾದ ಆರು ಕೆಲಂಬರುಂಟೊ ಅವರುಗಳಿಗೆಲ್ಲ ಒಬ್ಬನೇ ಗುರುವಾಗಬೇಕು. ಬೇರೆ ಗುರುವಾದರೆ ನರಕವೈದುವರು.

> ಚತ್ವಾರೋ ಋತ್ವಿಜಸ್ತತ್ರ ತಸ್ಯಾಚಾರ್ಯಸ್ಯ ಸಮ್ಮತಾಃ ।
> ಅನಿಂದಿತಚರಿತ್ರಾಶ್ಚ ಶಿವಾರಾಧನತತ್ಪರಾಃ ॥೨॥

ಆ ದೀಕ್ಷಾಕಾಲದಲ್ಲಿ ಆಚಾರ್ಯಂಗೆ ನಿಂದೆಯಿಲ್ಲದಿದ್ದ ಚಾರಿತ್ರವನುಳ್ಳ ಶಿವನರ್ಚಿಸುವಲ್ಲಿ ತಾತ್ಪರ್ಯವುಳ್ಳ ನಾಲ್ವರು ಋತ್ವಿಕ್ಕುಗಳು ಬೇಕಾಗುವರು.

> ಆದಿಷ್ಟೋ ಗುರುಣಾ ಶಿಷ್ಯಃ ಪ್ರಭಾತೇ ಪುಣ್ಯವಾಸರೇ ।
> ವಿಧಾಯ ಮಂಗಲಸ್ನಾನಂ ಧೌತವಸ್ತ್ರಪರಿಚ್ಛದಃ ॥೩॥

ಗುರುವಿನಿಂದ ಶಿಷ್ಯನು ಆಜ್ಞಾಪಿಸಲ್ಪಟ್ಟವನಾಗಿ ಪುಣ್ಯದಿವಸದುದಯ ಕಾಲದಲ್ಲಿ ಮಜ್ಜನವಂ ಮಾಡಿ ದಣಿಬವಹ ವಸ್ತ್ರವನುಟ್ಟುಕೊಂಬುವುದು.

> ಸಮಸ್ತಸಂಪತ್ಸಮಂಪ್ರಾಪ್ತಿ ಹೇತುಭಿರ್ಭಸಿತೈಃ ಸಿತೈಃ ।
> ಲಲಾಟಾದಿಕ್ರಮೇಣೈವ ಕುರ್ಯಾತ್ತ್ರಿಪುಂಡ್ರಕಂ ಮುದಾ ॥೪॥

ಸಮಸ್ತ ಕಾರ್ಯಂಗಳಹುದಕ್ಕೆ ಕಾರಣವಾದ ಬಿಳಿದಾದ ವಿಭೂತಿಯಿಂದ ಲಲಾಟ ಮೊದಲಾದ ಸ್ಥಾನಂಗಳಲ್ಲಿ ಕ್ರಮದಿಂದ ತ್ರಿಪುಂಡ್ರ ಧಾರಣವನ್ನು ಸಂತೋಷದಿಂದ ಮಾಡುವುದು.

ಉಪೇತ್ಯಾಚಾರ್ಯಪಾದಾಜ್ಞೇ ಪ್ರಣಮ್ಯ ತದನಂತರಮ್ ।
ಪೂಜಯೇತ್ಸ್ವರ್ಣಪುಷ್ಪಾದ್ಯೈರ್ಭಕ್ತ್ಯಾ ವಿತ್ತಾನುಸಾರತಃ ॥೫॥

ಆಚಾರ್ಯನ ಪದಕಮಲಸನ್ನಿಧಿಯನೈದಿ ನಮಸ್ಕರಿಸಿ ತದನಂತರ ದಲ್ಲಿ ದ್ರವ್ಯಮುಂಟಾದ ಹಾಗೆ ಸುವರ್ಣ ಪುಷ್ಪ ಮೊದಲಾದವುಗಳಿಂದ ಭಕ್ತಿಯೊಡನೆ ಪೂಜಿಸುವುದು

ಸ್ನಾತಾನಲಂಕೃತಾನ್ ಶುದ್ಧವಾಸಸೋ ಋತ್ವಿಜಸ್ತಥಾ ।
ಪುಷ್ಪಾಕ್ಷತವಿಭೂತ್ಯಾದ್ಯೈಶ್ಚತುರಸ್ತಾನ್ ಪ್ರಪೂಜಯೇತ್ ॥೬॥

ಅನಂತರದಲ್ಲಿ ಸ್ನಾನವಮಾಡಿದ ಅಲಂಕಾರವ ಮಾಡಿಕೊಂಡ ಶುದ್ಧ ವಸ್ತ್ರಗಳುಳ್ಳ ನಾಲ್ವರು ಋತ್ವಿಕ್ಕುಗಳನ್ನು ಪುಷ್ಪಾಕ್ಷತೆ, ವಿಭೂತಿ ಮೊದಲಾದವುಗಳಿಂದ ಲೇಸಾಗಿ ಪೂಜಿಸುವುದು.

ವಿಭೂತಿಂ ಶಿವಭಕ್ತೇಭ್ಯಃ ಸರ್ವೇಭ್ಯಸ್ತದನಂತರಮ್
ವೃದ್ಧಾನುಕ್ರಮತೋ ದತ್ವಾ ಪುಷ್ಪಾದ್ಯೈಸ್ಸಮ್ಯಗರ್ಚಯೇತ್ ॥೭॥

ಆದರ ತರುವಾಯದಲ್ಲಿ ಸಮಸ್ತಶಿವಭಕ್ತರಿಗೋಸ್ಕರ ವಿಭೂತಿಯನು ಹಿರಿಯರುಗಳು ಪಿಡಿದು ಕ್ರಮವಾಗಿ ಕೊಟ್ಟು ಪುಷ್ಪ ಮೊದಲಾದವುಗಳಿಂದ ಲೇಸಾಗಿ ಅರ್ಚಿಸುವುದು.

ತತಃ ಪ್ರಕಲ್ಪಿತೇ ದಿವ್ಯೇ ಮಂಟಪೇ ವರ್ಣಮಂಡಲೇ ।
ಪಂಚಸ್ವರ್ಣಾದಿ ಕಲಶಾನಾಚಾರ್ಯಃ ಸ್ಥಾಪಯೇನ್ನವಾನ್ ॥೮॥

ಆ ಬಳಿಕ ಮಾಡಲ್ಪಟ್ಟಿದ್ದ ದಿವ್ಯ ಮಂಟಪದಲ್ಲಿ ಪಂಚವರ್ಣ ಪದ್ಮಗಳಿಂ ಯುಕ್ತವಾದ ಸ್ಥಲದಲ್ಲಿ ಆಚಾರ್ಯನು ಹೊಸತಹ ಸುವರ್ಣ ಮೊದಲಾದ ಐದು ಕಲಶಂಗಳನಿರಿಸುವುದು.

ತೇಷು ವರ್ಣಾನಿ ರತ್ನಾನಿ ಕ್ಷಿಪ್ತ್ವಾ ಸಮ್ಯಕ್ಪ್ರಪೂಜಯೇತ್ ।
ನವಭಿಸ್ತಂತುಭಿಃ ಶುದ್ಧೈಃ ಪಂಚ ತಾನ್ ಪರಿವೇಷಯೇತ್ ॥೯॥

ಆ ಕಲಶಗಳಲ್ಲಿ ಬೀಜಾಕ್ಷರಂಗಳಂ ಬರೆದು ಪಂಚರತ್ನಂಗಳಂ ಹಾಕಿ ಲೇಸಾಗಿ ಪೂಜಿಸುವುದು ಶುದ್ಧವಾದ ಹೊಸತರಹ ನೂಲುಗಳಿಂದ ಕಲಶಂಗಳೈದನು ಸುತ್ತುವುದು.

ತೇಷು ತೀರ್ಥಾಂಬುಪೂರ್ಣೇಷು ಸಿದ್ಧಾದಾಮ್ರಪಲ್ಲವಾನ್ ।
ದೂರ್ವಾಂಕುರ ಸುಪೂಗಾನಿ ನಾಗವಲ್ಲೀ ದಲಾನ್ಯಪಿ ॥೧೦॥

ತೀರ್ಥೋದಕಂಗಳಿಂ ತುಂಬಲ್ಪಟ್ಟ ಆ ಕಲಶಂಗಳಲ್ಲಿ ಮಾವಿನ ತಳಿರುಗಳನ್ನು ದೂರ್ವಾಂಕುರಗಳನ್ನು ಅಡಕೆಯ ಹೊಂಬಾಳೆಯನ್ನು ಶೃಂಗಾರದಿಂದ ಸಮೇತವಾದ ನಾಗವಲ್ಲೀಎಲೆಗಳನಿರಿಸುವುದು.

ಇತ್ಥಂ ತ್ರಿವಾರಮಾಚಾರ್ಯಃ ಕೃತ್ವಾ ತಸ್ಯಾಭಿಷೇಚನಮ್ ।
ಶಿವಹಸ್ತಂ ವಿಧಾಯಾಥ ಶಿಷ್ಯಸ್ಯ ಶಿರಸಿ ನ್ಯಸೇತ್ ॥೧೧॥

ಈ ಪ್ರಕಾರದಲ್ಲಿ ಆಚಾರ್ಯನು ಆ ಶಿಷ್ಯಂಗೆ ಪಾಪಕ್ಷಯವಹ ಅಭಿಷೇಕವನು ಮೂರು ಬಾರಿ ಮಾಡಿ ಅನಂತರದಲ್ಲಿ ಶಿಷ್ಯನ ಶಿರಸ್ಸಿನಲ್ಲಿ ಹಸ್ತವನಿರಿಸಿ ಶಿವಧ್ಯಾನವಂ ಮಾಡುತ್ತ ಶಿವಹಸ್ತವೆಂದಿರಿಸುವುದು.

ತತ್ಪಂಚಕಲಶಾಂಬೋಭಿರಾಚಾರ್ಯಃ ಶಿಷ್ಯಮೂರ್ಧನಿ ।
ಅಭಿಷಿಂಚೇತ್ಸ್ವಯಂ ಪ್ರಾಜ್ಞೋ ನೋದ್ಧೃತ್ಯ ಕಲಶಾನ್ ಗುರುಃ ॥೧೨॥

ಆಚಾರ್ಯನು ಆ ಪಂಚಕಲಶೋದಕಂಗಳಿಂದ ಶಿಷ್ಯನ ಮಸ್ತಕದಲ್ಲಿ ಸಂಪ್ರೋಕ್ಷಣೆಯಂ ಮಾಡುವದು. ಪ್ರಾಜ್ಞನಾದ ಶ್ರೀಗುರುವು ಕಲಶಂಗಳಂ ನೆಗಹಲಾಗದು.

ಶಿವತೇಜೋಮಯೋ ಜ್ಞಾನೀ ಶಿವಮಂತ್ರಮುದೀರಯನ್ ।
ತತ್ಸಿಂಹಾಸನಂ ಧ್ಯಾತ್ವಾ ಶಿಷ್ಯಮೂರ್ಧನಿ ದೇಶಿಕಃ ॥೧೩॥

ಶಿವತೇಜೋಮಯನಾಗಿ ಜ್ಞಾನಿಯಾದ ಶ್ರೀಗುರುವು ಶಿವಮಂತ್ರವನ್ನುಚ್ಚರಿಸುತ್ತ ಅನಂತರದಲ್ಲಿ ದೇಶಿಕನು ಶಿಷ್ಯನ ಮಸ್ತಕದಲ್ಲಿ ಸಿಂಹಾಸನವನಿಕ್ಕುವುದು.

ಕರ್ಣೇ ಶಿಷ್ಯಸ್ಯ ಶನಕೈಃ ಶಿವಮಂತ್ರಮುದೀರಯೇತ್ ।
ಸ ತು ಬದ್ಧಾಂಜಲಿಃ ಶಿಷ್ಯೋ ಮಂತ್ರತದ್ಗತಮಾನಸಃ ॥೧೪॥

ಆ ಶಿಷ್ಯನ ಕರ್ಣದಲ್ಲಿ ಪಂಚಾಕ್ಷರಿಯ ಮಂತ್ರವನ್ನು ಮೆಲ್ಲನೆ ಹೇಳುವುದು ಆ ಶಿಷ್ಯನು ಕೈಮುಗಿದುಕೊಂಡು ಮಂತ್ರದಲ್ಲಿ ತತ್ಪರವಾದ ಮನಸ್ಸುಳ್ಳವನಾಗುವುದು.

ತಾಮಾಕೃಷ್ಯ ಯಥಾನ್ಯಾಯಂ ಲಿಂಗೇ ಸಮುಪವೇಶಯೇತ್ ।
ತಲ್ಲಿಂಗಂ ಸ್ಥಾಪಯೇಚ್ಛಿಷ್ಯ "ಪ್ರಾಣಲಿಂಗಮಿದಂ ತವ" ॥
ಏವಮುಕ್ತ್ವಾ ಸದಾ ಲಿಂಗಂ ನ ಕದಾಚಿದ್ವಿಯೋಜಯೇತ್ ॥೧೫॥

ಆ ಕಳೆಯನ್ನು ಆಕರ್ಷಣವಂ ಮಾಡಿ ಕ್ರಮದಿಂದ ಶಿವಲಿಂಗದಲ್ಲಿ ಪ್ರವೇಶಿಸುವುದು ಆ ಲಿಂಗವನ್ನು ಶಿಷ್ಯನಲ್ಲಿ ಪ್ರತಿಷ್ಠಿಸುವುದು "ಇದು ನಿನ್ನ ಪ್ರಾಣಲಿಂಗ" ವೆಂದು ಈ ಪ್ರಕಾರ ನುಡಿದಾತನಾಗಿ ಲಿಂಗವನ್ನು ಎಲ್ಲಾ ಗಳು ಒಂದಾನೊಂದು ವೇಳೆಯು ಅಗಲಬಾರದೆಂದು ನಿರೂಪಿಸುವುದು.

## ವಚನಗಳು

೧

ಉಪದೇಶ ಮಾಡುವ ಗುರು ಒಬ್ಬನಲ್ಲದೆ ಲಿಂಗವೊಂದೇಯಲ್ಲದೆ
ಪತಿಗೊಂದು ಲಿಂಗ ಸತಿಗೊಂದು ಲಿಂಗ ಸುತಗೊಂದು ಲಿಂಗ
ಸೋದರಗೊಂದು ಲಿಂಗ ದಾಸಿಗೊಂದು ಲಿಂಗ ಭೃತ್ಯಗೊಂದು ಲಿಂಗ
ಇಂತೀ ಒಂದು ಮನೆಗೆ ಎರಡು ಗುರು ಎರಡು ಲಿಂಗವುಂಟೇ
ಅದೆಂತೆಂದಡೆ ಶಿವನವಾಕ್ಯ—

> ದಾಸೀಗೋಪಾಲ ಭೃತ್ಯಾನಾಂ ಗೃಹಸ್ಥಸುತಯೋಃ ಶಿವಃ ।
> ಲಿಂಗಸಾಹಿತ್ಯಃ ಸರ್ವೇಷಾಮನ್ಯತ್ಖಂಡಲತದ್ಗೃಹಮ್ ॥ ಮತ್ತೆಯು
> ಗುರುರೇಕೋ ಲಿಂಗಮೇಕಂ ದೀಕ್ಷೈಕಾ ತು ಪ್ರಸಾದಕಮ್ ।
> ಏತದ್ದ್ವಯಮಿದಂ ದೇವಿ ವಿಶೇಷಂ ಪಾತಕಂ ಭವೇತ್ ॥

ಎಂಬುದಾಗಿ ಇಂತೀ ಒಂದು ಮನೆಗೆ ಗುರುಲಿಂಗವೆರಡಮಾಡಿ-
ನಡೆದಡೆ ಅಘೋರ ನರಕದಲ್ಲಿಕ್ಕುವ ನೋಡಾ
ನಮ್ಮ ಕೂಡಲಸಂಗಮದೇವರು

೨

ಭವಿತನಕ್ಕೆ ಹೇಸಿ ಭಕ್ತನಾಗಬೇಕೆಂಬಾತನು
ಸದ್ಗುರವನರಸಿಕೊಂಡು ಬಂದು
ಅವರ ಕಾರುಣ್ಯದಿಂದ ಮುಕ್ತಿಯಂ ಪಡೆದೆನೆಂದು
ಆ ಶ್ರೀಗುರುವಿಂಗೆ ದಂಡಪ್ರಣಾಮಂ ಮಾಡಿ
ಭಯಭಕ್ತಿಯಿಂದ ಕರಂಗಳಂ ಮುಗಿದು ನಿಂದಿರ್ದು
ಎಲೆ ದೇವಾ ! ಎನ್ನ ಭವಿತನಮಂ ಹಿಂಗಿಸಿ
ನಿಮ್ಮ ಕಾರುಣ್ಯದಿಂದೆನ್ನ ಭಕ್ತನಂ ಮಾಡುವುದೆಂದು

ಶ್ರೀಗುರುವಿಂಗೆ ಬಿನ್ನಹವಂ ಮಾಡಲು
ಆ ಶ್ರೀಗುರುವು ಅಂತಪ್ಪ ಭಯಭಕ್ತಿ ಕಿಂಕರತೆಯೊಳಿಪ್ಪ
ಶಿಶುವಂ ಕಂಡು
ತಮ್ಮ ಕೃಪಾವಲೋಕನದಿಂ ನೋಡಿ ಆ ಭವಿಯ
ಪೂರ್ವಾಶ್ರಯಮಂ ಕಳೆದು ಪುನರ್ಜಾತನಂ ಮಾಡಿ
ಆತನ ಅಂಗದಮೇಲೆ ಲಿಂಗಪ್ರತಿಷ್ಠೆಯಂ ಮಾಡುವ
ಕ್ರಮವೆಂತೆಂದಡೆ—

ಮೊದಲಲ್ಲಿ ಕಾಯಶುದ್ಧ ಜೀವಶುದ್ಧ ಆತ್ಮಶುದ್ಧನಂ ಮಾಡುವ
ಕ್ರಮವೆಂತೆಂದರೆ—

ಓಂ ಜಲಮಿತಿ ಭಸ್ಮ ಓಂ ಸ್ಥಲಮಿತಿಭಸ್ಮ
ಓಂ ಅಗ್ನಿರಿತಿ ಭಸ್ಮ ಓಂ ವಾಯುರಿತಿ ಭಸ್ಮ
ಓಂ ವ್ಯೋಮೇತಿ ಭಸ್ಮ ಓಂ ಸೋಮೇತಿ ಭಸ್ಮ
ಓಂ ಸೂರ್ಯೇತಿ ಭಸ್ಮ ಓಂ ಆತ್ಮೇತಿ ಭಸ್ಮ

ಎಂಬೀ ಮಂತ್ರದಿಂದ ಆತನ ಅಷ್ಟತನುವಂ ಶುದ್ಧವಮಾಡುವುದು
ಇನ್ನು ಆತನ ಜೀವ ಶುದ್ಧವ ಮಾಡುವ ಕ್ರಮವೆಂತೆಂದಡೆ—

ಓಂ ಅಸ್ಯ ಪ್ರಾಣ ಪ್ರತಿಷ್ಠಾಮಂತ್ರಸ್ಯ ಬ್ರಹ್ಮ ವಿಷ್ಣು ಮಹೇಶ್ವರಾ
ಋಷಯಃ
ಋಗ್ಯಜುಃ ಸಾಮಾಥರ್ವಣಾ ಶ್ಛಂದಾಂಸಿ
ಸದಾಶಿವ ಮಹಾಪ್ರಾಣ ಇಹಪ್ರಾಣ ಮಮ ಜೀವ ಅಯಂ ತಥಾ
ಮಮಾಸಕ್ತ ಸರ್ವೇಂದ್ರಿಯಾಣಿ
ವಾಙ್ಮನಶ್ಚಕ್ಷುಃ ಶ್ರೋತ್ರ ಜಿಹ್ವಾಘ್ರಾಣ ಮನೋಬುದ್ಧಿ ಚಿತ್ತ
ವಿಜ್ಞಾನಮ್
ಮಮ ಶರೀರೇ ಅಂಗಸ್ಯ ಸುಖಂ ಸ್ಥಿರಿಷ್ಯತಿ ॥
ಜೀವಃ ಶಿವಃಶಿವೋ ಜೀವಃ ಸಜೀವಃ ಕೇವಲಃ ಶಿವಃ ।
ಪಾಶಬದ್ಧೋ ಭವೇಜ್ಜೀವಃ ಪಾಶಮುಕ್ತಃ ಸದಾಶಿವಃ ॥

ಎಂದೀ ಮಂತ್ರದಿಂದ ಆತನ ಜೀವ ಶುದ್ಧವಂ ಮಾಡುವುದು.
ಇನ್ನು ಆತ್ಮಶುದ್ಧವ ಮಾಡುವ ಕ್ರಮವೆಂತೆಂದರೆ—

ಓಂ ಶಿವಾತ್ಮಕ ಸುಖಂ ಜೀವೋ ಜೀವಾತ್ಮಕಸುಖಂ ಶಿವಃ ।
ಶಿವಜೀವಾತ್ಮಸಂಯೋಗೇ ಪ್ರಾಣಲಿಂಗಂ ತಥಾ ಭವೇತ್ ॥

ಎಂದೀ ಮಂತ್ರದಿಂದ ಆತನ ಆತ್ಮನ ಶುದ್ಧವಂ ಮಾಡುವುದು

ಇನ್ನು ವಾಕ್ಪಾಣಿ ಪಾದಗುಹ್ಯ ಪಾಯುವೆಂಬ ಕರ್ಮೇಂದ್ರಿಯಂಗಳ ಮೇಲಣ ಇಂದ್ರಿಯ ಲಿಖಿತವಂ ತೊಡೆದು ಲಿಂಗಲಿಖಿತವಂ ಮಾಡುವ ಕ್ರಮವೆಂತೆಂದಡೆ—

**ಓಂ ನೇತ್ರೇ ತ್ರ್ಯಂಬಕಃ ಪಾತು ಮುಖೇ ಪಾತು ಮಹೇಶ್ವರಃ ।**
**ಕರ್ಣಯೋಃ ಪಾತು ಶಂಭುರ್ಮೇ ನಾಶಿಕಾಯಾಂ ಭವೋದ್ಭವಃ ॥**
**ವಾಗೀಶಃ ಪಾತು ಮೇ ಜಿಹ್ವಾಮೋಷ್ಠಂ ಪಾತ್ವಂಬಿಕಾಪತಿಃ ।**

ಎಂದೀ ಮಂತ್ರದಿಂದ ಆತನ ಪಂಚೇಂದ್ರಿಯಂಗಳ ಮೇಲಣ ಇಂದ್ರಿಯ ಲಿಖಿತಮಂ ತೊಡೆದು ಲಿಂಗ ಲಿಖಿತವಂ ಮಾಡುವುದು.

ಇನ್ನು ಮನಬುದ್ಧಿ ಚಿತ್ತಅಹಂಕಾರವೆಂಬ ಅಂತಃಕರಣ ಚತುಷ್ಟಯಂಗಳ ನಿವರ್ತನೆಯ ಮಾಡುವ ಕ್ರಮವೆಂತೆಂದಡೆ—

ಮನದಲ್ಲಿ ಧ್ಯಾನವಾಗಿ ಬುದ್ಧಿಯಲ್ಲಿ ವಂಚನೆಯಿಲ್ಲದೆ
ಚಿತ್ತವು ದಾಸೋಹದಲ್ಲಿ ಅಹಂಕಾರವು ಜ್ಞಾನದಲ್ಲಿಟ್ಟು

ಈ ಮರ್ಯಾದೆಯಲ್ಲಿ ಚತುರ್ವಿಧಮಂ ನಿವರ್ತನೆಯಂ ಮಾಡುವುದು.

ಇನ್ನು ಆತಂಗೆ ಪಂಚಗವ್ಯಮಂ ಕೊಟ್ಟು ಏಕಭುಕ್ತೋಪವಾಸಂಗಳಂ ಮಾಡಿಸಿ ಪಂಚಭೂತಸ್ಥಾನದ ಅಧಿದೇವತೆಗಳಂ ತೋರುವುದು ಅವಾವೆಂದಡೆ—

**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ ।**
**ಏತೇ ಗರ್ಭಗತಾ ಯಸ್ಯ ತಸ್ಮೈ ಶ್ರೀಗುರವೇ ನಮಃ ॥**

ಎಂದೀ ಮಂತ್ರದಿಂದ ಆತನ ಪಂಚಭೂತ ಶುದ್ಧಿಯಿಂ ಮಾಡುವುದು.

ಈ ಕ್ರಮದಲ್ಲಿ ಶುದ್ಧಾತ್ಮನಂ ಮಾಡಿದ ಬಳಿಕ ಆತನನ್ನು ಗಣತಿಂಥಿಣಿಯ ಮುಂದೆ ನಿಂದಿರಿಸುವುದು. ನಿಂದಿರ್ದಾತನಂ ದಂಡ-ಪ್ರಣಾಯಮಂ ಮಾಡಿಸುವ ಕ್ರಮವೆಂತೆಂದಡೆ—

**ಅನಂತ ಜನ್ಮಸಂಪ್ರಾಪ್ತ ಕರ್ಮೇಂಧನ ವಿದಾಹಿನೇ ।**
**ಜ್ಞಾನಾನಲ ಪ್ರಭಾವಾಯ ತಸ್ಮೈ ಶ್ರೀಗುರವೇ ನಮಃ ॥**

ಕರ್ಮಣಾ ಮನಸಾ ವಾಚಾ ಗುರವೇ ಭಕ್ತಿವತ್ಸಲಃ ।
ಶರೀರಂ ಪ್ರಾಣಮರ್ಥಂ ಚ ಸದ್ಗುರುಭ್ಯೋ ನಿವೇದಯೇತ್ ॥
ಪ್ರಣಮ್ಯ ದಂಡವದ್ಭೂಮೌ ಅಷ್ಟಮಂತ್ರೈಃ ಸಹಾರ್ಚಯೇತ್ ।
ಶ್ರೀಗುರೋಃ ಪಾದಪದ್ಮಂಚ ಗಂಧಪುಷ್ಪಾಕ್ಷತಾದಿಭಿಃ ॥
ಅನ್ಯಥಾ ವಿತ್ತಹೀನೋऽಪಿ ಗುರುಭಕ್ತಿ ಪರಾಯಣಃ ।
ಕೃತ್ವಾ ದಂಡನಮಸ್ಕಾರಂ ಸ್ವಶರೀರಂ ನಿವೇದಯೇತ್ ॥

ಎಂದೀ ಮಂತ್ರದಿಂದ ದಂಡಪ್ರಣಾಮವಂ ಮಾಡಿಸುವುದು

ಆತನ ಕೈವಿಡಿದೆತ್ತುವ ಕ್ರಮವೆಂತೆಂದರೆ—

ಗುರುಃ ಪಿತಾ ಗುರುರ್ಮಾತಾ ಗುರುರೇವ ಹಿ ಬಾಂಧವಃ ।
ಗುರೋರ್ದೈವಾತ್ಪರಂ ನಾಸ್ತಿ ತಸ್ಮೈ ಶ್ರೀಗುರವೇ ನಮಃ ॥
ಓಂ ಗುರುದೇವೋ ಭವ ಓಂ ಪಿತೃದೇವೋ ಭವ ಓಂ ಆಚಾರ್ಯ ದೇವೋ ಭವ ।

ಎಂದೀ ಮಂತ್ರದಿಂದ ಆತನ ಕೈವಿಡಿದೆತ್ತುವುದು

ಇನ್ನು ಭೂಶುದ್ಧಿಯಂ ಮಾಡುವ ಕ್ರಮವೆಂತೆಂದರೆ—

ಓಂ ಶಿವಶಿವ ಶಿವಾಜ್ಞಾ ವಿಷ್ಣುಪ್ರವರ್ತಮಾನುಷಾ ಪವಿತ್ರಾಪವಿತ್ರಾಪನೀ
ಸರ್ವವಸ್ತುಗತೋऽಪಿ ವಾ ।
ಯಃಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಂ ಶುಚಿಃ ॥
ಪೃಥ್ವಿ-ತ್ವಯಾಧೃತಾ ದೇವಿ ದೇವ ತ್ವಂ ವಿಷ್ಣುನಾ ಧೃತಾ ।
ಪಂಚದಾರಾಮಯೋ ದೇವಿ ಪವಿತ್ರಂ ಕುರು ಚಾಸನಮ್ ॥
ಸಮ್ಮಾರ್ಜನಂ ಶತಂ ಪುಣ್ಯಂ ಸಹಸ್ರ ಮನು ಲೇಪನಮ್ ।
ರೇಖಾ ಶತಸಹಸ್ರೇಷು ಅನಂತಂ ಪದ್ಮಮುಚ್ಯತೇ ॥
ಬಂಧೋ ಭವಪರಶ್ಚೈವ ಸ್ವಸ್ತಿಕಂ ಶತ್ರುನಾಶನಮ್ ।
ಪದ್ಮಂ ಪುಣ್ಯ ಫಲಂ ಚೈವ ಮುದ್ರಾ ತು ಮೋಕ್ಷಸಾಧನಮ್ ॥

ಎಂದೀ ಮಂತ್ರದಿಂದ ಭೂಶುದ್ಧಿಯಂ ಮಾಡುವುದು

ಇನ್ನು ಆತನ ಚೌಕಮಧ್ಯದಲ್ಲಿ ಕುಳ್ಳಿರಿಸುವ ಕ್ರಮವೆಂತೆಂದಡೆ—

ಓಂ ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ
ಯೇऽಂತರಿಕ್ಷೇ ಯೇ ದಿವಿ ಯೇಷಾಮನ್ನಂವಾತೋ

ವರ್ಷಮಿಷವಸ್ತೇಭ್ಯೋ ದಶಪ್ರಾಚೀ ದಶ ದಕ್ಷಿಣಾ
ದಶಪ್ರತೀಚೀ ದಶೋದೀಚೀ ದಶೋರ್ಧ್ವಾಸ್ತೇಭ್ಯೋ
ನಮಸ್ತೇ ನಮೋ ಮೃಡಾಯ ತಸ್ಮೈ ವಿಷ್ಣೋ ಯಶ್ಚನೋ
ದ್ವೇಷ್ಟಿ ತಂ ವೊ ಜಂಭೇ ದಧಾಮಿ ।
ಜಾಂ ಪೃಥಿವ್ಯಾ ಮೇರು ಪೃಷ್ಠ ಋಷಿಃ । ಕೂರ್ಮೋದೇವತಾ
ಜಗತೀ ಛಂದಃ ಆಸನೇ ವಿನಿಯೋಗಃ ।

ಎಂದೀ ಮಂತ್ರದಿಂದ ಶ್ರೀಗುರುವು ಆತನ ಚೌಕಮಧ್ಯದಲ್ಲಿ ಕುಳ್ಳಿರಿಸುವುದು.

ಇನ್ನು ನಾಲ್ಕು ಕಲಶದ ಪ್ರತ್ಯೇಕ ಪ್ರಧಾನ ದೇವತೆಗಳಂ ಕುಳ್ಳಿರಿಸಿ ಗುರುಕಲಶವಂ ಸ್ಥಾಪ್ಯವಂ ಮಾಡುವ ಕ್ರಮವೆಂತೆಂದಡೆ—

ಚೌಕ ಮಧ್ಯ ಸುಮಾಂಗಲ್ಯಂ ಷೋಡಶಂ ಕಲಶಂ ತಥಾ ।
ಭಾಸುರಂ ತಂಡುಲಂ ತಸ್ಯ ಪಂಚಸೂತ್ರಂ ತಥೈವ ಚ ॥
ತೇಷು ತೀರ್ಥಾಂಬು ಪೂರ್ಣೇಷು ನಿದಧ್ಯಾದಾಮ್ರಪಲ್ಲವಾನ್ ।
ದೂರ್ವಾಂಕುರ ಸುಪೂಗಾನಿ ನಾಗವಲ್ಲೀದಲಾನ್ಯಪಿ ॥
ಓಂ ತತ್ಪುರುಷಾಯ ನಮಃ ತತ್ಪುರುಷವಕ್ತ್ರಾಯ ನಮಃ ।
ಓಂ ಅಘೋರಾಯ ನಮಃ ಅಘೋರವಕ್ತ್ರಾಯ ನಮಃ ।
ಓಂ ಸದ್ಯೋಜಾತಾಯ ನಮಃ ಸದ್ಯೋಜಾತವಕ್ತ್ರಾಯ ನಮಃ ।
ಓಂ ವಾಮದೇವಾಯ ನಮಃ ವಾಮದೇವ ವಕ್ತ್ರಾಯ ನಮಃ ।
ಓಂ ಈಶಾನಾಯ ನಮಃ ಈಶಾನ ವಕ್ತ್ರಾಯ ನಮಃ ।
ಓಂ ತತ್ಪುರುಷ ಅಘೋರ ಸದ್ಯೋಜಾತ ವಾಮದೇವ ಈಶಾನ ।

ಎಂದು ಈ ಮಂತ್ರದಿಂದ ಗುರುಕಲಶಕ್ಕೆ ಪಂಚಸೂತ್ರಂಗಳನಿಕ್ಕಿ ಪಂಚಪಲ್ಲವಂಗಳನಿಕ್ಕಿ ಪಂಚಮುಖಂಗಳನಿಕ್ಕಿ ಗುರುಕಲಶವಂ ಸ್ಥಾಪ್ಯವಂ ಮಾಡುವುದು.

ಇನ್ನು ಜಲಶುದ್ಧವಂ ಮಾಡುವ ಕ್ರಮವೆಂತೆಂದಡೆ—

ಓಂ ನಮಃ ಶಿವಾಯ ನಮಸ್ತೇ ಅಸ್ತು ಭಗವನ್
ವಿಶ್ವೇಶ್ವರಾಯ ಮಹಾದೇವಾಯ ತ್ರ್ಯಂಬಕಾಯ ತ್ರಿಪುರಾಂತಕಾಯ
ತ್ರಿಕಾಗ್ನಿಕಾಲಾಯ ಕಾಲಾಗ್ನಿರುದ್ರಾಯ ನೀಲಕಂಠಾಯ
ಮೃತ್ಯುಂಜಯಾಯ ಸರ್ವೇಶ್ವರಾಯ ಸದಾಶಿವಾಯ

ಶ್ರೀಮನ್ಮಹಾದೇವಾಯ ನಮಃ ॥
ಓಂ ನಿಧನಪತಯೇ ನಮಃ ನಿಧನಪತಾಂತಿಕಾಯ ನಮಃ
ಓಂ ಊರ್ಧ್ವಾಯ ನಮಃ ಊರ್ಧ್ವಲಿಂಗಾಯ ನಮಃ
ಓಂ ಹಿರಣ್ಯಾಯ ನಮಃ ಹಿರಣ್ಯಲಿಂಗಾಯ ನಮಃ
ಓಂ ಸುವರ್ಣಾಯ ನಮಃ ಸುವರ್ಣಲಿಂಗಾಯ ನಮಃ
ಓಂ ದಿವ್ಯಾಯ ನಮಃ ದಿವ್ಯಲಿಂಗಾಯ ನಮಃ
ಓಂ ಭವಾಯ ನಮಃ ಭವಲಿಂಗಾಯ ನಮಃ
ಓಂ ಶಿವಾಯ ನಮಃ ಶಿವಲಿಂಗಾಯ ನಮಃ
ಓಂ ಜ್ಯೇಷ್ಠಾಯ ನಮಃ ಜ್ಯೇಷ್ಠಲಿಂಗಾಯ ನಮಃ
ಓಂ ಶ್ರೇಷ್ಠಾಯ ನಮಃ ಶ್ರೇಷ್ಠಲಿಂಗಾಯ ನಮಃ
ಓಂ ಜ್ವಾಲಾಯ ನಮಃ ಜ್ವಾಲಲಿಂಗಾಯ ನಮಃ
ಓಂ ಸ್ಥೂಲಾಯ ನಮಃ ಸ್ಥೂಲಲಿಂಗಾಯ ನಮಃ
ಓಂ ಸೂಕ್ಷ್ಮಾಯ ನಮಃ ಸೂಕ್ಷ್ಮಲಿಂಗಾಯ ನಮಃ
ಓಂ ಶೂನ್ಯಾಯ ನಮಃ ಶೂನ್ಯಲಿಂಗಾಯ ನಮಃ
ಓಂ ನೇತ್ರಾಯ ನಮಃ ನೇತ್ರಲಿಂಗಾಯ ನಮಃ
ಓಂ ಶ್ರೋತ್ರಾಯ ನಮಃ ಶ್ರೋತ್ರಲಿಂಗಾಯ ನಮಃ
ಓಂ ಘ್ರಾಣಾಯ ನಮಃ ಘ್ರಾಣಲಿಂಗಾಯ ನಮಃ
ಓಂ ಪ್ರಾಣಾಯ ನಮಃ ಪ್ರಾಣಲಿಂಗಾಯ ನಮಃ
ಓಂ ವ್ಯೋಮಾಯ ನಮಃ ವ್ಯೋಮಲಿಂಗಾಯ ನಮಃ
ಓಂ ಆತ್ಮಾಯ ನಮಃ ಆತ್ಮಲಿಂಗಾಯ ನಮಃ
ಓಂ ಪರಮಾಯ ನಮಃ ಪರಮಲಿಂಗಾಯ ನಮಃ
ಓಂ ಶರ್ವಾಯ ನಮಃ ಶರ್ವಲಿಂಗಾಯ ನಮಃ
ಓಂ ಶಾಂತಾಯ ನಮಃ ಶಾಂತಲಿಂಗಾಯ ನಮಃ
ಓಮೇತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ
ಸ್ಥಾಪಯತಿ ಪಾಣಿಮಂತ್ರಂ ಪವಿತ್ರಮ್ ॥

ಓಂ ನಮಸ್ತೇ ಸರ್ವೇ ವೈ ರುದ್ರಸ್ತಸ್ಮೈ ರುದ್ರಾಯ ನಮೋಽಸ್ತು
ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ ಹಿರಣ್ಯರೂಪಾಯ
ಹಿರಣ್ಯಪತಯೇ ಅಂಬಿಕಾಪತಯೇ ಉಮಾಪತಯೇ
ಪಶುಪತಯೇ ನಮೋ ನಮಃ ॥

ಋತಂ ಸತ್ಯಂ ಪರಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮಃ ॥

ಓಂ ಸದ್ಯೋ ಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮಃ
ಭವೇ ಭವೇ ನಾತಿಭವೇ ಭಜಸ್ವ ಮಾಂ ಭವೋದ್ಭವಾಯ ನಮಃ
ಓಂ ವಾಮದೇವಾಯ ನಮಃ ಪರಮಪದಾಯ ನಮಃ
ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮಃ ರುದ್ರಾಯ ನಮಃ
ಕಾಲಾಯ ನಮಃ ಕಲವಿಕರಣಾಯ ನಮಃ
ಬಲಾಯ ನಮಃ ಬಲಪ್ರಮಥನಾಥಾಯ ನಮಃ
ಸರ್ವಾಯ ನಮಃ ಸರ್ವಭೂತದಮನಾಯ ನಮಃ
ಮನೋನ್ಮನಾಯ ನಮಃ ||

ಓಮಘೋರೇಭ್ಯೋಽಥ ಘೋರೇಬೆಭ್ಯೋ ಘೋರ ಘೋರತರೇಭ್ಯಃ
ಸರ್ವ ತತ್ಸರ್ವ ಸರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯಃ
ಶಿವೇಭ್ಯಃ ಶ್ರೀ ಸದಾಶಿವಾಯ ನಮಃ ||

ಓಂ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ
ತನ್ನೋ ರುದ್ರಃ ಪ್ರಚೋದಯಾತ್ ||

ಓಮೀಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ
ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿ ಬ್ರಹ್ಮಾ ಶಿವೋಮೇ-
ಮ್ಸ್ತುಡೋಽಸ್ತು ಸದಾಶಿವಾಯ ನಮೋ ನಮಃ ||

ಕದ್ರುದ್ರಾಯಸ್ತನ್ಮಹೇ ಪ್ರಚೇತಸೇ
ಏಕಃ ಶಿವ ಏವಾನ್ಯರಹಿತಾಯ ತೇ ನಮೋ ನಮಃ ||

ಓಂ ವಿಶ್ವಂ ಭೂತಂ ಭುವನಂ ಚಿತ್ರಂ ಬಹುಧಾ ಜಾಯಮಾನಂ ಚ
ಯತ್ ||

ಓಂ ಶಂ ಚ ಮೇ ಮಯಶ್ಚ ಮೇ ಪ್ರಿಯಂ ಚ ಮೇ
ನುಕಾಮಶ್ಚ ಮೇ ಕಾಮಶ್ಚ ಮೇ ಸೌಮನಶ್ಚ ಮೇ
ಭದ್ರಂ ಚ ಮೇ ಶ್ರೇಯಶ್ಚ ಮೇ ವಸ್ಯಂ ಚ ಮೇ
ಯಶಶ್ಚ ಮೇ ಜಗಚ್ಚ ಮೇ ಭಗಶ್ಚ ಮೇ
ದ್ರವಿಣಂ ಚ ಮೇ ಯಂತಾ ಚ ಮೇ ಧರ್ತಾ ಚ ಮೇ
ಕ್ಷೇಮಂ ಚ ಮೇ ಧೃತಿಶ್ಚ ಮೇ ವಿಶ್ವಂ ಚ ಮೇ
ಮಹಶ್ಚಮೇ ಸಂವಿಚ್ಚ ಮೇ ಜ್ಞಾತ್ರಂ ಚ ಮೇ
ಸೂತಶ್ಚ ಮೇ ಪ್ರಸೂತಶ್ಚ ಮೇ ಸೀರಂ ಚ ಮೇ
ಲಯಂ ಚ ಮೇ ಮೃತಂ ಚ ಮೇ ಆಯುಷ್ಯಂ ಚ ಮೇ
ನಾಮಯಶ್ಚ ಮೇ ಜೀವಾತು ಶ್ಚ ಮೇ ದೀರ್ಘಾಯುತ್ವಂ ಚ ಮೇ

ಪವಿತ್ರಂ ಚ ಮೇ ಸುಗಂಧಂ ಚ ಮೇ ಶಯನಂ ಚ ಮೇ
ಸುಶಾಂತಂ ಚ ಮೇ ಸುದಿನಂ ಚ ಮೇ ॥

ಓಂ ಸಹನಾವವತು ಸಹನೌಭುನಕ್ತು
ಸಹ ವೀರ್ಯಂ ಕರವಾವಹೈ ತೇಜಸ್ವಿನಾವಧೀತಮಸ್ತು
ಮಾ ವಿದ್ವಿಷಾವಹೈ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಎಂದೀ ಮಂತ್ರದಿಂದ ಜಲಶುದ್ಧವಂ ಮಾಡುವುದು.

ಇನ್ನು ಜಂಗಮಕ್ಕೆ ಪಾದಾರ್ಚನೆಯಂ ಮಾಡುವ ಕ್ರಮವೆಂತೆಂದಡೆ–

ಅಂಗುಷ್ಠಾಗ್ರೇ ಅಷ್ಟಷಷ್ಟಿ ತೀರ್ಥಾನಿ ನಿವಸಂತಿ ವೈ ।
ಸಪ್ತಸಾಗರ ಪಾದಾಧಸ್ತ ದೂರ್ಧ್ವೇ ಕುಲಪರ್ವತಾಃ ॥

ಚರಸ್ಯ ಪಾದತೀರ್ಥೇನ ಲಿಂಗಮಜ್ಜನ ಮುತ್ತಮಮ್ ।
ತತ್ಪ್ರಸಾದಂ ಮಹಾದೇವಿ ನೈವೇದ್ಯಂ ಶುಭ ಮಂಗಲಮ್ ॥

ಈ ಮಂತ್ರದಿಂದ ಪಾದಾರ್ಚನೆಯಂ ಮಾಡುವುದು

ಇನ್ನು ಕುಮಾರಶಾವನು ಜಲಾಭಿವಾಸನ ಮಾಡುವ ಕ್ರಮ ವೆಂತೆಂದಡೆ–

ಜ್ವಾಲಾಮಾಲಾವೃತಾಂಗಾಯ ಜ್ವಲನಸ್ತಂಭರೂಪಿಣೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥

ಅನಾದಿಮಲ ಸಂಸಾರ ರೋಗ ವೈದ್ಯಾಯ ಶಂಭವೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥

ಎಂದೀ ಮಂತ್ರದಿಂದ ಕುಮಾರಶಾವನ್ನು ಜಲಾಭಿವಾಸವ ಮಾಡಿಸುವುದು.

ಇನ್ನು ಆ ಶಿಷ್ಯನ ಹಸ್ತವಂ ಶೋಧಿಸುವ ಕ್ರಮವೆಂತೆಂದಡೆ–

ಓಂ ತ್ರಾಸ್ತ್ರಿಯಂ ವಿಶಕ್ತಿಃ ।
ಶ್ರೀಕರಂ ಚ ಪವಿತ್ರಂ ಚ ರೋಗಶೋಕ ಭಯಾಪಹಮ್ ।
ಮನಸಾ ಸಹ ಹಸ್ತೇಭ್ಯೋ ಪದ್ಭ್ಯಾಮುದ್ಧರಣಾಯ ಚ ॥

ಎಂದೀ ಮಂತ್ರದಿಂದ ಶಿಷ್ಯನ ಹಸ್ತವಂ ಶೋಧಿಸುವುದು.

ಇನ್ನು ವಿಭೂತಿಯ ಧರಿಸುವ ಕ್ರಮವೆಂತೆಂದಡೆ–

ಮೂರ್ಧ್ನಿ ಲಲಾಟೇ ಕರ್ಣೇ ಚ ಚಕ್ಷುಷೋರ್ಘ್ರಾಣಕೇ ತಥಾ ।
ಆಸ್ಯೇ ದ್ವಾಭ್ಯಾಂ ಚ ಬಾಹುಭ್ಯಾಂ ತನ್ಮೂಲ ತನವಸ್ತಥಾ ॥

ಮಣಿಬಂಧೇ ಚ ಹೃತ್ಪಾರ್ಶ್ವೇ ನಾಭೌ ಮೇಢ್ರೇ ತಥೈವ ಚ ।
ಊರೌ ಚ ಜಾನುಕೇ ಚೈವ ಜಂಘಾ ಪೃಷ್ಠೇ ತಥೈವ ಚ ॥

ಪಾದೇ ದ್ವಾತ್ರಿಂಶತಿಶ್ಚೈವ ಪಾದಸಂಧೌ ಯಥಾ ಕ್ರಮಾತ್ ।
ಇತ್ಯುದ್ಧೂಳನಂ ಸ್ನಾನಂ ಧಾರಣಂ ಮೋಕ್ಷಕಾರಣಮ್ ॥

ಎಂದೀ ಮಂತ್ರದಿಂದ ಆ ಶಿಷ್ಯನ ಮೂವತ್ತೆರಡು ಸ್ಥಾನಗಳಲ್ಲಿ ವಿಭೂತಿಯಂ ಧರಿಸುವುದು.

ಇನ್ನು ರುದ್ರಾಕ್ಷಿಯಂ ಧರಿಸುವ ಕ್ರಮವೆಂತೆಂದಡೆ—

ಓಂ ಹ್ರೂಂ ಶ್ರೂಂ ಘ್ರೂಂ ರೂಂ ಬ್ರೂಂ-
ಪ್ರರುರೂಮುಪಿ ಸ್ರೀಯಂ ಕ್ಷೇಕ್ಷಮುಪಿಕ್ಷೂಹ್ರೀಂ ನಮೋಂತಿ ಮಯುಯೇ

ಇತಿ ಪೂರ್ವೋಕ್ತ ಮಂತ್ರಾನಂತರೇ ಪ್ರಾಣಾಯಾಮ್ಯ "ಸಮಸ್ತ ಪಾಪಕ್ಷಯಾರ್ಥಂ ಶಿವಜ್ಞಾನಾವಾಪ್ತ್ಯರ್ಥಂ ಸಮಷ್ಟಿಮಂತ್ರೈಃ ಸಹ ಧಾರಣಂ ಕರಿಷ್ಯೇ" ಇತಿ ಸಂಕಲ್ಪ್ಯ—

ಶಿರಸಾ ಧಾರಯೇತ್ಕೋಟಿ ಕರ್ಣಯೋರ್ದಶಕೋಟಿಭಿಃ ।
ಶತಕೋಟಿ ಗಳೇ ಬದ್ಧಂ ಸಹಸ್ರಂ ಬಾಹುಮೂಲಯೋಃ ॥
ಅಪ್ರಮಾಣ ಫಲಂ ಹಸ್ತೇ ರುದ್ರಾಕ್ಷಂ ಮೋಕ್ಷಸಾಧನಮ್ ।

ಎಂದೀ ಮಂತ್ರದಿಂದ ಆ ಶಿಷ್ಯನ ಹಸ್ತಂಗಳಲ್ಲಿ ರುದ್ರಾಕ್ಷಿಯಂ ಧರಿಸುವುದು.

ಇನ್ನು ಜಲಾಧಿವಾಸದೊಳಗಣ ಕುಮಾರತಾವಂ ತೆಗೆಯುವ ಕ್ರಮವೆಂತೆಂದಡೆ—

ಮಹಾದೇವಾಯ ಮಹತೇ ಜ್ಯೋತಿಷೇಽನಂತತೇಜಸೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥

ಎಂದೀ ಮಂತ್ರದಿಂದ ಜಲಾಧಿವಾಸದೊಳಗಣ ಕುಮಾರತಾವಂ ತೆಗೆಯುವದು.

ಇನ್ನು ಶಿಲೆಯ ಪೂರ್ವಾಶ್ರಯವಂ ಕಳೆವ ಪರಿಯೆಂತೆಂದಡೆ—

ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ
ವಿಶ್ವತಃ ಪಾತ್ ಸಬಾಹುಭ್ಯಾಂ ಧಮತಿ ಸಂಪದಂ ತ್ರಯೀ—
ದ್ಯಾವಾಭೂಮೀ ಜನಯನ್ ದೇವ ಏಕ ಏವ ||

ಎಂಬೀ ಮಂತ್ರದಿಂದ ಆ ಶಿಲೆಯ ಪೂರ್ವಾಶ್ರಯವಂ ಕಳೆವುದು.

ಇನ್ನು ಆ ಶಿಲೆಗೆ ಪ್ರಾಣ ಪ್ರತಿಷ್ಠೆಯಂ ಮಾಡುವ ಕ್ರಮವೆಂತೆಂದಡೆ—

ಓಂ ವಿಶ್ವಾಧಿಕೋ ರುದ್ರೋ ಮಹರ್ಷಿಃ ಸರ್ವೋ ಹ್ಯೇಷ ರುದ್ರ.
ತಸ್ಮೈ ರುದ್ರಾಯ ತೇ ಅಸ್ತು ನಮೋ ರುದ್ರೋ ಸೈ ಕ್ರೂರೋ.
ರುದ್ರಃ ಪಶೂನಾಮಧಿಪತಿಸ್ತಥಾ ದೇವಾ ಊರ್ಧ್ವಬಾಹವೋ.
ರುದ್ರಾ ಸ್ತುಸ್ವಂತಿ। ಯಸ್ಮಾತ್ಪರಂ ನಾಪರಮಸ್ತಿ ಕಿಂಚಿದ್ಯಸ್ಮಾನ್ನ—
ಣೀಯೊ ನ ಜ್ಯೇಯಃ ಕಿಂಚಿತ್ । ಶಿವ ಏಕೋ ಧ್ಯೇಯಃ

ಎಂಬೀ ಮಂತ್ರದಿಂದ ಆ ಶಿಲೆಗೆ ಪ್ರಾಣಪ್ರತಿಷ್ಠೆಯಂ ಮಾಡುವುದು.

ಇನ್ನು ದೇವರಿಗೆ ಸ್ನಪನಕ್ರಿಯೆಯುವ ಕ್ರಮವೆಂತೆಂದಡೆ—

ಸಪುಷ್ಪಶೀರ್ಷಕಂ ಲಿಂಗಂ ತಥಾ ಸ್ನಪನಮಾಚರೇತ್ ।
ಪಯೋದಧ್ಯಾಜ ಮಧ್ವಿಕ್ಷುರಸೈರ್ಮಾಲೇನ ಪಂಚಭಿಃ ||
ಓಮನಂತ ರುಚಿರಾಯಂಕ್ಷ ಭಕ್ತಂ ತಿಸ್ರರತಾತ್
ಪರಮಂ ಪಿಯಮುಚ್ಯತೇ ಪರ್ವಾತಸ್ಯ
ಅಪಿರಸ ಭುವನಂ ಜ್ಯೋತಿರೂಪಕರ್ವ ||

ಎಂಬೀ ಮಂತ್ರದಿಂದ ದೇವರಿಗೆ ಸ್ನಪನಕ್ಕೆರೆವುದು.

ಇನ್ನು ದೇವರಿಗೆ ವಸ್ತ್ರವಂ ಸಮರ್ಪಿಸುವುದೆಂತೆಂದಡೆ—

ವ್ಯೋಮರೂಪ ನಮಸ್ತೇಽಸ್ತು ವ್ಯೋಮಾತ್ಮಾಯ ಪ್ರಹರ್ಷಿಣೇ ।
ವಾಸಾಂಸಿ ಚ ವಿಚಿತ್ರಾಣಿ ಸರವಂತಿ ಮೃದೂನಿ ಚ ||
ಶಿವಾಯ ಗುರವೇ ದತ್ತಂ ತಸ್ಯ ಪುಣ್ಯ ಫಲಂ ಶೃಣು ।
ಏವಂ ತದ್ವಸ್ತ್ರ ತಂತೂನಾಂ ಪರಿಸಂಖ್ಯಾತ ಏವ ಹಿ ||
ತಾವದ್ವರ್ಷ ಸಹಸ್ರಾಣಿ ರುದ್ರಲೋಕೇ ಮಹೀಯತೇ ।

ಎಂಬೀ ಮಂತ್ರದಿಂದ ದೇವರಿಗೆ ವಸ್ತ್ರವಂ ಸಮರ್ಪಿಸುವುದು.

ಇನ್ನು ದೇವರಿಗೆ ಗಂಧವಂ ಸಮರ್ಪಿಸುವ ಕ್ರಮವೆಂತೆಂದಡೆ—

ಚಂದನಾಗರು ಕರ್ಪೂರ ತಮಾಲದಳ ಕುಂಕುಮಂ ।
ಉಶೀರಕೋಷ್ಠಸಂಯುಕ್ತಂ ಶಿವಗಂಧಾಷ್ಟಕಂ ಸ್ಮೃತಮ್ ॥

ಆಚಮನಸ್ತು ಸಿದ್ಧಾರ್ಥಂ ಅಪಥಾರ್ಯ ಯಥೈವ ಚ।
ಅಷ್ಟಗಂಧಸಮಾಯುಕ್ತಂ ಪುಣ್ಯಪ್ರದ ಸಮನ್ವಿತಮ್ ॥

ಎಂಬೀ ಮಂತ್ರದಿಂದ ದೇವರಿಗೆ ಗಂಧಮಂ ಸಮರ್ಪಿಸುವುದು.

ಇನ್ನು ದೇವರಿಗೆ ಅಕ್ಷತೆಯನರ್ಪಿಸುವ ಕ್ರಮವೆಂತೆಂದರೆ—

ಅಭಿನ್ನಶಂಖವಚ್ಚೈವ ಸುಶ್ವೇತ ವ್ರೀಹಿ ತಂಡುಲಮ್ ।
ಸ್ಮೃತಂ ಶಿವಾರ್ಚನಾಯೋಗ್ಯಂ ನೇತರಂ ಚ ವರಾನನೇ ॥
ಗಂಧಾಕ್ಷತ ಸಮಾಯುಕ್ತಂ ಶಿವಮುಕ್ತೇಶ್ಚ ಕಾರಣಮ್ ।
ಸರ್ವವಿಘ್ನ ವಿನಿರ್ಮುಕ್ತಂ ಶಿವಲೋಕೇ ಮಹೀಯತೇ ।

ಎಂಬೀ ಮಂತ್ರದಿಂದ ದೇವರಿಗೆ ಅಕ್ಷತೆಯಂ ಸಮರ್ಪಿಸುವುದು.

ಇನ್ನು ದೇವರಿಗೆ ಪುಷ್ಪಮಂ ಸಮರ್ಪಿಸುವ ಕ್ರಮವೆಂತೆಂದಡೆ—

ಮಲ್ಲಿಕೋತ್ಪಲಪುನ್ನಾಗಕದಂಬಾಶೋಕ ಚಂಪಕಮ್ ।
ಸೇವಂತಿ ಕರ್ಣಿಕಾರಾಖ್ಯಂ ತ್ರಿಸಂಧ್ಯಾರಕ್ತಕೇಸರೀ ॥

ಕದಂಬವನಸಂಭೂತಂ ಸುಗಂಧಿಂ ಚ ಮನೋಹರಮ್ ।
ತತ್ತತ್ರ್ಯಮಾತ್ಮಕಂ ದಿವ್ಯಂ ಪುಷ್ಪಂ ಶಂಭೋಽರ್ಪಯಾಮಿ ತೇ ॥

ಎಂಬೀ ಮಂತ್ರದಿಂದ ದೇವರಿಗೆ ಪುಷ್ಪವ ಸಮರ್ಪಿಸುವುದು.

ಇನ್ನು ದೇವರಿಗೆ ಧೂಪವ ಸಮರ್ಪಿಸುವ ಕ್ರಮವೆಂತೆಂದರೆ—

ಗುಗ್ಗುಲಂ ಘೃತಸಂಯುಕ್ತಂ ಲಿಂಗಮಭ್ಯರ್ಚ್ಯ ಸಂದಹೇತ್ ।
ವನಸ್ಪತಿವಾಸನೋಕ್ತಂ ಗಂಧಂ ದದ್ಯಾತ್ತ ಮುತ್ತಮಮ್ ।
ಅರ್ಪಣಾದೇವ ದೇವಾಯ ಭಕ್ತ ಪಾಪಹರಾಯ ಚ ।

ಎಂಬೀ ಮಂತ್ರದಿಂದ ದೇವರಿಗೆ ಧೂಪವನರ್ಪಿಸುವುದು.

ಇನ್ನು ದೇವರಿಗೆ ದೀಪವ ಸಮರ್ಪಿಸುವ ಕ್ರಮವೆಂತೆಂದಡೆ—

ಸ್ವಪ್ರಕಾಶ ಮಹಾತೇಜ ಸರ್ವಾಂತಸ್ತಿಮಿರಾಪಹ ।
ಸಬಾಹ್ಯಾಭ್ಯಂತರಂ ಜ್ಯೋತಿರ್ದೀಪೋಽಯಂ ಪ್ರತಿಗೃಹ್ಯತಾಮ್ ॥

ಎಂಬೀ ಮಂತ್ರದಿಂದ ದೇವರಿಗೆ ದೀಪವನರ್ಪಿಸುವುದು.

ಇನ್ನು ದೇವರಿಗೆ ನೈವೇದ್ಯವನರ್ಪಿಸುವ ಕ್ರಮವೆಂತೆಂದಡೆ—

ಕ್ಷೀರವಾರಿಧಿಸಂಭೂತಮಮೃತಂ ಚಂದ್ರಸನ್ನಿಭಮ್ ।
ನೈವೇದ್ಯಂ ಷಡ್ರಸೋಪೇತಂ ಶಾಶ್ವತಾಯ ಸಮರ್ಪಿತಮ್ ॥

ಎಂಬೀ ಮಂತ್ರದಿಂದ ದೇವರಿಗೆ ನೈವೇದ್ಯವ ಸಮರ್ಪಿಸುವುದು.

ಇನ್ನು ದೇವರಿಗೆ ತಾಂಬೂಲವ ಸಮರ್ಪಿಸುವ ಕ್ರಮವೆಂತೆಂದಡೆ—

ಪೂಗಸಂಭೂತ ಕರ್ಪೂರ ಚೂರ್ಣ ಪರ್ಣದ್ವಿಸಂಯುತಃ ।
ತ್ರಯೋದಶಕಲಾತ್ಮಾನಂ ತಾಂಬೂಲಂ ಫಲಮುಚ್ಯತೇ ॥

ಎಂದೀ ಮಂತ್ರದಿಂದ ದೇವರಿಗೆ ತಾಂಬೂಲವ ಸಮರ್ಪಿಸುವುದು.

ಇನ್ನು ದೇವರಿಗೆ ಮಂತ್ರಪುಷ್ಪವ ಸಮರ್ಪಿಸುವ ಕ್ರಮವೇಂತೆಂದಡೆ-

ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಮ್ ।
ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್॥

ಎಂಬೀ ಮಂತ್ರದಿಂದ ದೇವರಿಗೆ ಮಂತ್ರಪುಷ್ಪವಂ ಸಮರ್ಪಿಸುವುದು.

ಇನ್ನು ದೇವರಿಗೆ ನಮಸ್ಕಾರವಂ ಮಾಡುವ ಕ್ರಮವೇಂತೆಂದಡೆ—

ಪೀಠಂಯಸ್ಯಾ ಧರಿತ್ರೀ ಜಲಧರಕಲಶಂ ಲಿಂಗಮಾಕಾಶಮೂರ್ತಿಂ
ನಕ್ಷತ್ರಂ ಪುಷ್ಪಮಾಲ್ಯಂ ಗ್ರಹಗಣಕುಸುಮಂ ನೇತ್ರ
ಚಂದ್ರಾರ್ಕವಹ್ನಿಮ್ ।
ಕುಕ್ಷಿಂ ಸಪ್ತಸಮುದ್ರಂ ಭುಜಗಿರಿ ಶಿಖರಂ ಸಪ್ತಪಾತಾಳಪಾದಂ
ವೇದಂ ವಕ್ತ್ರಂ ಷಡಂಗಂದಶದಿಶವಸನಂ ದಿವ್ಯಲಿಂಗಂ ನಮಾಮಿ ॥

ಎಂಬೀ ಮಂತ್ರದಿಂದ ದೇವರಿಗೆ ನಮಸ್ಕಾರವಂ ಮಾಡುವುದು.

ಇನ್ನು ದೇವರಿಗೆ ಅನುಷ್ಠಾನವಂ ಮಾಡುವ ಕ್ರಮವೆಂತೆಂದಡೆ—

" ಏತೇಷಾಂ ಪುರುಷೋಽಸ್ತು "

ಎಂದೀ ಮಂತ್ರದಿಂದ ದೇವರಿಗೆ ಅನುಷ್ಠಾನವಂ ಮಾಡುವುದು.

ಇನ್ನು ಅನುಷ್ಠಾನವಂ ಮಾಡಿದ ಬಳಿಕ ಶ್ರೀಗುರುವು ಶಿಷ್ಯಂಗೆ ಉರಸ್ಥಲದ ಸಜ್ಜೆಯಲ್ಲಿ ಲಿಂಗವ ಧರಿಸುವ ಕ್ರಮವೆಂತೆಂದಡೆ—

ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ ।
ಅಯಂ ಮೇ ವಿಶ್ವಭೇಷಜಃ ಅಯಂ ಶಿವಾಭಿಮರ್ಶನಃ ॥

ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಾಗಮತ್
ಇದಂ ತವ ಸಮರ್ಪಣಂ ಸುಬಂಧವೇ ಶರೀಹಿ ||

ಎಂದೀ ಮಂತ್ರದಿಂದ ಆ ಶಿಷ್ಯನ ಅಂಗದ ಮೇಲೆ ಲಿಂಗಪ್ರತಿಷ್ಠೆಯಂ ಮಾಡುವುದು,

ಇನ್ನು ಆ ಶಿಷ್ಯನ ವಾಯುಪ್ರಾಣಿತ್ವವಂ ಕಳೆದು ಲಿಂಗಪ್ರಾಣಿಯ ಮಾಡುವ ಕ್ರಮವೆಂತೆಂದಡೆ—

ಓಂ ಅಪಿ ಚ ಪ್ರಾಣಾಪಾನವ್ಯಾನೋದಾನ ಸಮಾನಾದಿ
ತಚ್ಚೈತನ್ಯ ಸ್ವರೂಪಸ್ಯ ಪರಮೇಶ್ವರಸ್ಯ ||
ಓಂ ಶ್ರದ್ಧಾಯಾಂ ಪ್ರಾಣೇನ ವಿಷ್ಣೋಽಮೃತಂ ಜುಹೋಮಿ
ಶಿವೋ ಮಾಂ ವಿಷಪ್ರದಾಹಾಯ ಪ್ರಾಣಾಯ ಸ್ವಹಾ ||
ಓಂ ಶ್ರದ್ಧಾಯಾಮಪಾನೇನ ವಿಷ್ಣೋಽಮೃತಂ ಜುಹೋಮಿ
ಶಿವೋ ಮಾಂ ವಿಷಪ್ರದಾಹಾಯ ಅಪಾನಾಯ ಸ್ವಹಾ ||
ಓಂ ಶ್ರದ್ಧಾಯಾಂ ವ್ಯಾನೇನ ವಿಷ್ಣೋಽಮೃತಂ ಜುಹೋಮಿ
ಶಿವೋಽಮಾಂ ವಿಷಪ್ರದಾಹಾಯ ವ್ಯಾನಾಯ ಸ್ವಹಾ ||
ಓಂ ಶ್ರದ್ಧಾಯಾಮುದಾನೇನ ವಿಷ್ಣೋಽಮೃತಂ ಜುಹೋಮಿ
ಶಿವೋ ಮಾಂ ವಿಷಪ್ರದಾಹಾಯ ಉದಾನಾಯ ಸ್ವಹಾ ||
ಓಂ ಶ್ರದ್ಧಾಯಾಂ ಸಮಾನೇನ ವಿಷ್ಣೋಽಮೃತಂ ಜುಹೋಮಿ
ಶಿವೋ ಮಾಂ ವಿಷಪ್ರದಾಹಾಯ ಸಮಾನಾಯ ಸ್ವಹಾ ||

ಎಂದೀ ಮಂತ್ರದಿಂದ ಆ ಶಿಷ್ಯನ ವಾಯುಪ್ರಾಣಿತ್ವವ ಕಳೆದು ಲಿಂಗಪ್ರಾಣಿಯಂ ಮಾಡುವುದು.

ಇನ್ನು ಆ ಶಿಷ್ಯಂಗೆ ಅಗ್ರೋದಕವನ್ನು ಸರ್ವಾಂಗದ ಮೇಲೆ ತಳಿವ ಕ್ರಮವೆಂತೆಂದಡೆ—

ಶಿವಃ ಪಶ್ಯತಿ ಶಿವೋ ದೃಶ್ಯತೇ ಅಹೋರಾತ್ರಂ
ಶಿವಸಸ್ಮಿಧಾವ್ಯೈಕಮೇನಂ ಪ್ರಯುಜ್ಯತೇ |
ತ್ರ್ಯಜಾತಾಮಿ ಯಜೇಶಂ ಆ ಸರ್ವೇಭ್ಯೋ ಹಿ
ಕಾಮೇಭ್ಯೋ ಅಗ್ನೀನಾಂ ಪ್ರಯುಜ್ಯತೇ ||
ಸರ್ವೇಭ್ಯೋ ಹಿ ಕಾಮೇಭ್ಯೋ ಅಗ್ನೀನಾಂ ಪ್ರಯುಜ್ಯತೇ
ತ್ರ್ಯಜಾತಾಮಿಯಜೇಶಂ ಅಭಿಚಾರನ್ || ಇತಿ ||

ಸರ್ವೋ ವೈ ಏಷ ಯಜ್ಞೋ ಯತ್ರೋಪಾತ್ತ ಯಜ್ಞಾ
ಸರ್ವೇಷಾಮೇನಂ ಯಜ್ಞೇನ ಜಾಯತೇ ॥
ನ ದೇವತಾಭ್ಯಾಂ ಆ ವೃಶ್ಚತೇ ದ್ವಾದಶಕಪಾಲ ಪುರೋಡಾಶೋ ಭವತಿ ॥
ತಂ ತೇ ಯಜೇತ ಕಪಾಲ ಸ್ತ್ರೀಣಾಮುದ್ರ್ಯ—
ತ್ರಯಂ ತ್ರಯೋ ವೋ ಲೋಕಾ ಏಷಾಮ—
ಲೋಕಾನಾಮುಪ್ಯುತ್ತರೋತ್ತರ ಜ್ಯೋತಿಯೋ ಭವತಿ ॥

ಎಂದೀ ಮಂತ್ರದಿಂದ ಆ ಶಿಷ್ಯಂಗೆ ಸರ್ವಾಂಗದಲ್ಲಿ ಅಗ್ರೋದಕವಂ ತಳಿವುದು.

ಇನ್ನು ಆ ಶಿಷ್ಯನ ಫಾಳದಲ್ಲಿ ವಿಭೂತಿಯ ಪಟ್ಟವಂ ಕಟ್ಟುವ ಕ್ರಮವೆಂತೆಂದಡೆ—

ಓಂ ತ್ರಿಪುಂಡ್ರಂ ಸತತಂ ತ್ರಿಪುಂಡ್ರಂ
ಸರ್ವದೇವ ಲಲಾಟ ಪಟ್ಟೇ ತ್ರಿಪುಂಡ್ರಂ
ಸಪ್ತ ಜನ್ಮಕೃತಂ ಪಾಪಂ ಭಸ್ಮಭೂಷಂ ತತಃ ಕ್ಷಣಾತ್ ॥

ಎಂದೀ ಮಂತ್ರದಿಂದ ಆ ಶಿಷ್ಯನ ಫಾಳದಲ್ಲಿ ವಿಭೂತಿ ಪಟ್ಟವಂ ಕಟ್ಟುವುದು.

ಇನ್ನು ಆ ಶಿಷ್ಯನ ದುರಕ್ಷರವ ತೊಡೆವ ಕ್ರಮವೆಂತೆಂದಡೆ—

ಐಶ್ವರ್ಯಕಾರಣಾದ್ಭೂತಿರ್ಭಾಸನಾದ್ಭಸಿತಂ ತಥಾ ।
ಸರ್ವಾಂಗಾಭ್ಯರ್ಚನಾದ್ಭಸ್ಮ ಚಾಪದಕ್ಷರಣಾತ್ ಕ್ಷರಂ ॥
ತತೋ ಭೂತಪ್ರೇತ ಪಿಶಾಚ ಬ್ರಹ್ಮರಾಕ್ಷಸ—
ಅಪಸ್ಮಾರಭವಭೀತಿಭ್ಯೋ ಭೀಕಾರಣಾದ್ರಕ್ಷಾ ರಕ್ಷತೇ ॥
ಏತಾನಿ ತಾನಿ ಶಿವಮಂತ್ರ ಪವಿತ್ರಿತಾನಿ
ಭಸ್ಮಾನಿ ಕಾಮದಹನಾಂಗ ವಿಭೂಷಿತಾನಿ ।
ತ್ರೈಪುಂಡ್ರಕಾನಿ ರಚಿತಾನಿ ಲಲಾಟಪಟ್ಟೇ
ಲುಂಪಂತಿ ದೈವಲಿಖಿತಾನಿ ದುರಕ್ಷರಾಣಿ ॥

ಎಂದೀ ಮಂತ್ರದಿಂದ ಆ ಶಿಷ್ಯನ ದುರಕ್ಷರವಂ ತೊಡೆವುದು.

ಇನ್ನು ಆ ಶಿಷ್ಯನ ಲಲಾಟದಲ್ಲಿ ಲಿಂಗಲಿಖಿತವಂ ಬರೆವ ಕ್ರಮವೆಂತೆಂದಡೆ—

" ಓಂ ಓಂ ಓಂ ನಮಃಶಿವಾಯ ಸರ್ವಜ್ಞಾನಧಾಮ್ನೇ "

ಎಂಬೀ ಮಂತ್ರದಿಂದ ಆ ಶಿಷ್ಯನ ಲಲಾಟದಲ್ಲಿ ಶಿವಲಿಖಿತಮಂ ಬರೆವುದು.

ಇನ್ನು ಆ ಶಿಷ್ಯನ ಮಸ್ತಕದಲ್ಲಿ ಹಸ್ತವನಿರಿಸುವ ಕ್ರಮವೆಂತೆಂದಡೆ-

ಉದ್ಯದ್ಭಾಸ್ಕರ ಕೋಟಿ ಪ್ರಕಾಶ ಮಹಾದರ್ಶನ
ವಿಶ್ವಮೂರ್ತಿರ್ಭೀಷಣಮ್।
ಭುಜಂಗ ಭೂಷಣಂ ಧ್ಯಾಯೇ ದಿವ್ಯಾಯುಧಂ ರುದ್ರಮ್ ।
ಸರ್ವೈಸ್ತಪಸ್ವಿಭಿಃ ಪ್ರೋಕ್ತಂ ಸರ್ವಜ್ಞೇಷು ಭಾಗಿನಮ್ ॥
ರುದ್ರಭಕ್ತಂ ಸ್ಮೃತಾಃ ಸರ್ವೇ ತ್ರಿಪುಂಡ್ರಾಂಕಿತ ಮಸ್ತಕಮ್ ।

ಎಂಬೀ ಮಂತ್ರದಿಂದ ಆ ಶಿಷ್ಯನ ಮಸ್ತಕದ ಮೇಲೆ ಹಸ್ತವನ್ನಿರಿಸುವುದು.

ಇನ್ನು ಆ ಶಿಷ್ಯನ ಕರ್ಣದಲ್ಲಿ ಶಿವಮಂತ್ರವಂ ನಿರೂಪಿಸುವ ಕ್ರಮವೆಂತೆಂದಡೆ—

ಕರ್ಣದ್ವಾರೇ ಯಥಾವಾಕ್ಯಂ ಸದ್ಗುರೋರ್ಲಿಂಗಮೀರ್ಯತೇ ।
ಇಷ್ಟಪ್ರಾಣಸ್ತಥಾಭಾವೋ ತ್ರಿಧಾಮ್ನೈಕ್ಯಮಿದಂ ಶೃಣು ॥
ಕರ್ಣೇ ಶಿಷ್ಯಸ್ಯ ದಕ್ಷೇ ಶಿವಮಂತ್ರಮುದೀರಯೇತ್ ।
ಸ ತು ಬದ್ಧಾಂಜಲಿಃ ಶಿಷ್ಯೋ ಮಂತ್ರತದ್ಧ್ಯಾನಮಾನಸಃ ॥

ಎಂಬೀ ಮಂತ್ರದಿಂದ ಆ ಶಿಷ್ಯನ ಕರ್ಣದಲ್ಲಿ ಶಿವಮಂತ್ರವಂ ನಿರೂಪಿಸುವುದು.

ಇನ್ನು ಶತಪತ್ರದೊಳಗಣ ಮನಪ್ರಾಣದೊಳಗಿಪ್ಪ
ಪ್ರಾಣಲಿಂಗಕ್ಕೊಂದು ಇಷ್ಟಲಿಂಗ ಸ್ಥಲಮಂ ತೋರಿಸಿ
ಆ ಶಿಷ್ಯನಂ ಕೃತಕೃತ್ಯನಂ ಮಾಡಿದ ಶ್ರೀಗುರುವಿಂಗೆ
ನಮೋ ನಮಃ ಎಂದು ಬದುಕಿದೆನಯ್ಯಾ
ಕೂಡಲ ಚೆನ್ನಸಂಗಮದೇವಾ

## ಗುರುಶಿಷ್ಯ ಪ್ರವೇಶ ಸ್ಥಲ ೨

ಇಂತೀ ಪ್ರಕಾರದಿಂ ನಿರ್ಮಲಾತ್ಮಕರಪ್ಪ ಸದ್ಭಕ್ತರುಗಳಿಗೆ ಮಹಾದೇಶಿಕೇಂದ್ರನು ಮಾಡಿದ ದೀಕ್ಷಾವಿಧಾನಮಂ ಪ್ರತಿಷ್ಠೆಯಂ ಮಾಡಿ ನುಡಿವರ್ಮಹಾಪುರಾತನರು.

ಇಂತಹ ನಿರ್ಮಲಾತ್ಮಕರಾದ ಶಿಷ್ಯೋತ್ತಮರುಗಳನ್ನು ಶ್ರೀಗುರುವು ದೀಕ್ಷಾವಿಧಾನದಿಂದ ತನ್ನಂತೆ ಮಾಡಿಕೊಂಡ ಪರಿಯಂ ತೋರಿ ನುಡಿದ ವಚನಂಗಳು.

ಶಿವರಹಸ್ಯೇ—

ಪಶುನಾಥಃ ಶಿವಸ್ತಸ್ಮಾತ್ಪಶೂನಾಂ ಪತಿರಿತ್ಯಪಿ ।
ಪಶುಪಾಶವಿನಿರ್ಮುಕ್ತೋ ಗುರೋರಾಜ್ಞಾನಿರೀಕ್ಷಣಾತ್ ॥ ೧ ॥

ಪಶುಪತಿಯುಂ ಶಿವನಾದ ಕಾರಣ ಪಶುಗಳಿಗೆ ಒಡೆಯನು ಆ ಪಶುತನವನ್ನು ಪಾಶವನ್ನು ಕೆಡಿಸುವುದು ಗುರುವಿನಾಜ್ಞಾನಿರೀಕ್ಷಣೆಯು

ಯಥೈವ ವಹ್ನಿಸಂಪರ್ಕಾನ್ಮಲಂ ತ್ಯಜತಿ ಕಾಂಚನಮ್ ।
ತಥೈವ ಗುರುಸಂಪರ್ಕಾತ್ ಪಾಪಂ ತ್ಯಜತಿ ಮಾನವಃ ॥ ೨ ॥

ಹೇಗೆ ಅಗ್ನಿಯ ಸಂಗದಿಂದ ಚಿನ್ನದ ಕಾಳಿಕೆಯು ಹೋಗಿ ಅಪರಂಜಿಯಹುದೋ ಹಾಗೆ ಗುರುವಿನ ಸಂಗದಿಂದ ಶಿಷ್ಯನು ಪಾಪವು ಕೆಟ್ಟು ಮುಕ್ತನಹನು.

ವಿನಶ್ಯತ್ಯಂಧಕಾರಸ್ತು ಯಥಾ ಸೂರ್ಯಸ್ಯ ಸನ್ನಿಧೌ ।
ಗುರೋರ್ನಿರೀಕ್ಷಣಾದೇವ ಸರ್ವಪಾಪೈಃ ಪ್ರಮುಚ್ಯತೇ ॥ ೩ ॥

ಸೂರ್ಯನ ಸನ್ನಿಧಿಯಿಂದ ಕತ್ತಲೆಯು ಹೇಗೆ ಕೆಡುವುದೋ ಹಾಗೆ ಶ್ರೀಗುರುವಿನ ನೋಟ ಮಾತ್ರದಿಂದ ಸಮಸ್ತಪಾಪಂಗಳು ಕೆಟ್ಟು ಮುಕ್ತನಹನು.

ನೈವತದ್ಭೂತ ಸಂವಿಪ್ರಃ ಸಮುದ್ರಾನಬಿಲಾನಪಿ ।
ಶಿವಭಕ್ತೋ ಮುನಿಃ ಕಶ್ಚಿದ್ವೇದೀ ಜಿಹ್ವಾಗ್ರತಃ ಕ್ಷಣಾತ್ ॥ ೪ ॥

ಸಮುದ್ರವಂ ಕೂಡಿದಂತಹ ಸಮಸ್ತನದಿಗಳು ಹೇಗೆ ಏಕವರ್ಣವಾದಾವವೋ ಹಾಗೆ ಗುರುವಿನ ಜಿಹ್ವಾಗ್ರದಲ್ಲಿ ಪ್ರವೇಶಿತನಾದ ಭಕ್ತಂಗೆ ಶಿವಕುಲವಲ್ಲದೇ ಬೇರೆ ಕುಲವಿಲ್ಲವು.

ದಾರ್ವಶ್ಮ ಲೋಹವ್ಯದ್ರತ್ನ ಜಾತಂ ಲಿಂಗಪ್ರತಿಷ್ಠಿತವ್ ।
ಅವಘಾರ್ಯಂ ಯಥಾಪೂಜ್ಯಂ ತಥಾ ಶಿಷ್ಯಶ್ಚದೇಶಿಕೇ ॥ ೫ ॥

ಕಾಷ್ಟ ಕಂಚು ಮಂಣು ಲೋಹ ರತ್ನ ಇವುಗಳಲ್ಲಿ ಮಾಡಿದ ಲಿಂಗಾಕಾರವಂ ಪ್ರತಿಷ್ಠೆಯಂ ಮಾಡಿದರೆ ಹೇಗೆ ಪೂಜ್ಯವೋ ಹಾಗೆ ಗುರುಪ್ರವೇಶವಾದ ಬಳಿಕ ಶಿಷ್ಯನು ಪೂಜ್ಯನಹನು.

## ವಚನಗಳು

೧

ಹಸ್ತಾಬ್ಜ ಮಥನದಿಂದೊತ್ತಿ ಭಸ್ಮವ ಮಾಡಿ
ಮತ್ತು ಪಂಚಾಕ್ಷರಿ ಮರು ಜೀವಣಿಯ
ಚಿತ್ತ ಶೋತ್ರದೊಳು ಧಾರೆಯನೆರೆಯಲು
ಆತ ನಿನ್ನಂತೆ ಕಾಣಾ ರಾಮನಾಥಾ

೨

ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ
ಆ ತೃಣವ ನಾಕಿಚ್ಚು ನುಂಗಿದಂತೆ
ಗುರು ಚರಣದ ಮೇಲೆ ತನುವೆಂಬ ತೃಣವ ತಂದಿರಿಸಿದರೆ
ಆತನ ಸರ್ವಾಂಗವೆಲ್ಲ ಲಿಂಗ ಕಾಣಾ ರಾಮನಾಥಾ

೩

ಜ್ಯೋತಿಯ ಸಂಗದಿಂದ ಕರ್ಪೂರವು ಜ್ಯೋತಿಯಪ್ಪಂತೆ
ಅಪ್ಪುವಿನ ಸಂಗದಿಂದ ಲವಣವು ಅಪ್ಪುವಪ್ಪಂತೆ
ಶ್ರೀ ಗುರುವಿನ ಸಂಗದಿಂದ ಶಿಷ್ಯನು ಶ್ರೀ ಗುರುವಪ್ಪುದು ತಪ್ಪದು
"ಯಥಾ ಬೀಜಸ್ತಥಾಂಕುರಃ" ಎಂಬುದು ತಪ್ಪದು ದಿಟ ದಿಟ
ನೋಡಾ

ಕಲ್ಪವೃಕ್ಷದ ಬೀಜದಿಂದಾದ ಸಸಿಯು ಕಲ್ಪವೃಕ್ಷವಪ್ಪುದು
ತಪ್ಪದು ನೋಡಾ
ಕಾಮಧೇನುವಿನ ಶಿಶು ಕಾಮಧೇನುವಪ್ಪುದು ತಪ್ಪದು
ದಿಟ ದಿಟ ನೋಡಾ
ಸದ್ಗುರುವಿಂದಾದ ಶಿಷ್ಯನು ಸದ್ಗುರುವಪ್ಪುದು ತಪ್ಪದು
ದಿಟ ದಿಟ ನೋಡಾ
"ಯಥಾ ಬೀಜಸ್ತಥಾಂಕುರಃ" ಎಂಬ ವಾಕ್ಯ ತಪ್ಪದು
ಶಿವಬಲ್ಲನು ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ

ಬ್ರಹ್ಮಸೃಷ್ಟಿ ಪಂಚಭೂತಸಮಿಶ್ರದಿಂದಾದ ಕಾಯವು
ಭೂತಕಾಯವು
ವಾಯು ಪ್ರಾಣಿ ಉತ್ಪತ್ತಿಸ್ಥಿತಿಲಯ ಕಾರಣ ಕಾಯವು
ಈ ಪರಿಯ ಉತ್ಪತ್ತಿಯು ದೇವದಾನವಮಾನವರಿಗೆಯು ಒಂದೇಪರಿ
ಶ್ರೀ ಗುರುವಿನ ಸೃಷ್ಟಿಯಿಂದಲೂ ಮಹಾಪ್ರಸಾದದಿಂದಲೂ
ಮಹಾಮಂತ್ರ ಸಮ್ಮಿಶ್ರದಿಂದಾದ ಕಾಯವು ಪ್ರಸಾದಕಾಯವು
ಮಹಾಮಂತ್ರ ಪಿಂಡವು ಭಕ್ತಿಕಾಯವು
ಲಿಂಗಪ್ರಾಣಿಗೆ ಉತ್ಪತ್ತಿ ಸ್ಥಿತಿಲಯವಿಲ್ಲ
ಸತ್ಯನು ಸದ್ಯೋನ್ಮುಕ್ತನು
ಈಪರಿಯು ಶ್ರೀಗುರುಕಾರುಣ್ಯವ ಪಡೆದ ಮಹಾತ್ಮಂಗೆ ಒಂದೇ ಪರಿ
ಶ್ರೀ ಗುರುವಿನ ಕಾರುಣ್ಯದ ಪರಿ ಶಿವಭಕ್ತನಯಿರವಿನ ಪರಿ
ಇಂತುಂಟಯ್ಯ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ
ನಿಮ್ಮ ಶರಣರಿಗೆ ಲೋಕವ ಮಾನವರ ಸರಿಯೆಂದರೆ ನಾಯಕ
ನರಕ ತಪ್ಪದು.

೫೧

ಶ್ರೀ ಗುರು ಮಾಡಿದ ಗುರು ತತ್ವವು ಉಪಮಾತೀತವಯ್ಯ
ನೇತ್ರದಲ್ಲಿ ತನ್ನ ರೂಪವ ತುಂಬಿ ನೇತ್ರವನು ಗುರುವ ಮಾಡಿದ
ಶ್ರೋತ್ರದಲ್ಲಿ ಮಹಾ ಮಂತ್ರವ ತುಂಬಿ ಶ್ರೋತ್ರವ ಗುರುವ ಮಾಡಿದ

ಘ್ರಾಣದಲ್ಲಿ ಗುರುಪಾದಪದ್ಮದಲ್ಲಿಯ ಮಹಾಗಂಧವನು ತುಂಬಿ
ಘ್ರಾಣವನು ಗುರುವ ಮಾಡಿದ
ಜಿಹ್ವೆಯಲ್ಲಿ ತನ್ನ ಕರುಣ ಪ್ರಸಾದವ ತುಂಬಿ ಜಿಹ್ವೆಯನು
ಗುರುವ ಮಾಡಿದ
ಕಾಯವನು ಭಕ್ತಕಾಯಮಮಕಾಯವೆಂದು
ಪ್ರಸಾದಕಾಯವೆಂದೆನಿಸಿ ಕಾಯವನು ಗುರುವ ಮಾಡಿದ
ಪ್ರಾಣವನು ಲಿಂಗಪ್ರಾಣಸಂಬಂಧವ ಮಾಡಿ ಪ್ರಾಣವನು
ಗುರುವ ಮಾಡಿದ
ಇಂತು ಅಂತರಂಗ ಬಹಿರಂಗವನು ಗುರುವ ಮಾಡಿ
ಸರ್ವಾಂಗವನು ಗುರುತ್ವವ ಮಾಡಿದ ಮಹಾಗುರುವಿಂಗೆ
ನಾನಿನ್ನೇನ ಮಾಡುವೆನಯ್ಯ.
ಗುರುಪೂಜೆಯಂ ಮಾಡಲು ಆವಾವ ದ್ರವ್ಯಂಗಳನು
ಆವಾವ ಪದಾರ್ಥಂಗಳನು ಆವಾವ ಪುಷ್ಪಫಲಾದಿಗಳನು
ವಿಚಾರಿಸಿ ನೋಡಿದಡೆ ಅವಾವೂ ಗುರುತ್ವವಿಲ್ಲ
ಸರ್ವದ್ರವ್ಯಮೂಲವು ಸರ್ವಪದಾರ್ಥಮೂಲವು
ಸರ್ವರಸ ಪುಷ್ಪ ಫಲಾದಿಗಳೆಲ್ಲಕ್ಕೆಯೂ ಮೂಲಿಗ ಮನವು
ಗುರುತ್ವವುಳ್ಳದು
ನನ್ನ ಮನೋವಾಕ್ಕಾಯಸಹಿತ ಕಾಯವನು ಗುರುವಿಂಗಿತ್ತು
ಎನ್ನ ಶಿರವನು ಶ್ರೀಗುರುವಿನ ದರ್ಶನ ಸ್ಪರ್ಶನವ ಮಾಡಿ
ಸುಖಿಯಪ್ಪೆನಯ್ಯ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ಗುರುಮಾಹತ್ಮ್ಯಸ್ಥಲ ೩

ಇಂತೀಪ್ರಕಾರದಿಂ ಮಹಾದೇಶಿಕೇಂದ್ರನು ತಚ್ಛಿಷ್ಯನುಗಪ್ರಾಣಾದಿ ಸಮಸ್ತಕ್ರಿಯೆಗಳಲ್ಲಿ ಜ್ಯೋತಿಯಿಂ ಜ್ಯೋತಿಯ ಬೆಳಗಿದಂತೆ ಪ್ರವೇಶ ವಾದುದಂ ಪ್ರತಿಷ್ಠೆಯುಂ ಮಾಡಿ ನುಡಿದರ್ಮಹಾಪುರಾತನರು

ಇಂತಹ ಶ್ರೀಗುರುಮೂರ್ತಿಯ ಮಹಾತ್ಮ್ಯವಂ ಪೊಗಳ್ವ ವಚನಂಗಳು.

ಶಿವರಹಸ್ಯೇ—

ಗುರುರೂಪಧರೋ ದೇವಿ ಶಿವಏವ ಮಹೀತಲೇ ।
ಕರೋತ್ಯನುಗ್ರಹಂ ಶಿಷ್ಯಕುಲಂ ಭಕ್ತ್ಯಾನುಮೋದಿತಃ ॥ ೧ ॥

ಎಲೈ ಪಾರ್ವತಿದೇವಿಯೇ ಶಿವನು ಗುರುರೂಪವಂ ಧರಿಸಿ ಆಚಾರ್ಯನಾಗಿ ಭೂಮಿಗೆ ಬೀಜಯಂಗೈದು ಶಿಷ್ಯನ ಕುಲವಂ ತೊಡೆದು ಅನುಗ್ರಹವುಂ ಮಾಡಿ ರಕ್ಷಿಸುವನು.

ಸೂತಸಂಹಿತಾಯಾಂ—

ಯಾವತ್ಪೀತಾಂಬರಂ ಪ್ರಾಹ ಶೃಣು ಪಂಕಜಲೋಚನ ।
ಆಚಾರ್ಯಃ ಸತು ಸಂಸಾರಮೋಚನಪ್ರದ ಉಚ್ಯತೇ ॥ ೨ ॥

ವಿಶ್ವಾಸದಿಂ ನಮಸ್ಕರಿಸಿದ ವಿಷ್ಣುವಿಂಗೆ ಗುರುವೇ ಸಂಸಾರವಂ ಕಳೆದನು ಗುರುವಂ ಬಿಟ್ಟು ಅಧಿಕವಿಲ್ಲೆಂದು ಶಿವನು ನಿರೂಪವಂ ಕೊಟ್ಟನು.

ನಗುರೋರಧಿಕಂ ನಗುರೋರಧಿಕಂ ನಗುರೋರಧಿಕಂ ವಿದಿತಂ ವಿದಿತಮ್।
ವಿದಿತಂ ವಿದಿತಂ ಶಿವಶಾಸನತಃ ಶಿವಶಾಸನತಃ ಶಿವಶಾಸನತಃ ॥ ೩ ॥

ಗುರುವಿನಿಂದಧಿಕವಿಲ್ಲ ಗುರುವಿನಿಂದಧಿಕವಿಲ್ಲ ಗುರುವಿನಿಂದಧಿಕವಿಲ್ಲ ಹೀಗೆಂದು ಹೇಳಲ್ಪಟ್ಟಿತು. ಹೇಳಲ್ಪಟ್ಟಿತು ಹೇಳಲ್ಪಟ್ಟಿತು ಶಿವಾಗಮದಲ್ಲಿ ಶಿವಾಗಮದಲ್ಲಿ ಶಿವಾಗಮದಲ್ಲಿ.

## ವಚನಗಳು

೧

ಶಿವನು ನರಕಾಯವ ತೊಟ್ಟು ಗುರುರೂಪವಾಗಿ ಮರ್ತ್ಯಕ್ಕೆ ಬಂದು
ಅಷ್ಟಾದಶಜಾತಿಯೊಳಗಿದ್ದಡೇನು ಮರ್ತ್ಯನೆ? ಅಲ್ಲ

ಅದೆಂತೆಂದಡೆ ಶಿವರಹಸ್ಯೇ —

ಗುರುದೇವೋ ಮಹಾದೇವೋ ಗುರುದೇವಃ ಸದಾಶಿವಃ।
ಗುರುದೈವಾತ್ಪರಂ ನಾಸ್ತಿ ತಸ್ಮೈ ಶ್ರೀ ಗುರವೇನಮಃ॥

ಎಂದುದಾಗಿ ಮಹದೇವನು ತಾನೇ—

ಲಲಾಟಲೋಚನಂ ಚಾಂದ್ರೀಂಕಲಾಮಪಿಚ ದೋರ್ದ್ವಯಮ್ ।
ಅಂತರ್ನಿಧಾಯ ವರ್ತೇಹಂ ಗುರುರೂಪೋ ಮಹೇಶ್ವರಿ॥

ಎಂದುದಾಗಿ ಶಿವನು ಗುರುರೂಪವಾಗಿ ವರ್ತಿಸುತ್ತಿದ್ದನು.

ಪರಃ ಶಿವೋ ಗುರೋರ್ಮೂರ್ತಿಃ ಶಿಷ್ಯದೀಕ್ಷಾದಿಕಾರಣಾತ್।
ಶಿಷ್ಯಾತೀತಂ ಮಹಚ್ಛ್ರೇದಂ ಚ್ಛೇದ್ಯರೂಪಾಯ ವೈನಮಃ॥

ಎಂದುದಾಗಿ ಶಿಷ್ಯಂಗೆ ದೀಕ್ಷೆಯಂ ಕರುಣಿಸಿ ಮಾಡಬೇಕೆಂದು
ಬಂದನಯ್ಯ ಮಹಾಕಾರುಣ್ಯಮೂರ್ತಿ ಪರಶಿವನು ತಾನೇ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೨

ಸದ್ಗುರುವಿನಿಂದ ಮಹತ್ತಪ್ಪ ಲಿಂಗೋತ್ಪತ್ತಿ
ಲಿಂಗದಿಂದ ಜಂಗಮೋತ್ಪತ್ತಿ
ಜಂಗಮದಿಂದ ಪ್ರಸಾದೋತ್ಪತ್ತಿ
ಪ್ರಸಾದದಿಂದ ಭಕ್ತ್ಯುತ್ಪತ್ತಿ
ಭಕ್ತಿಯಿಂದ ಸಕಲ ಲೋಕೋತ್ಪತ್ತಿ

ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾಸಹ।
ನಾದಬಿಂದು ಕಲಾತೀತಂ ಗುರುಣಾ ಲಿಂಗಮುದ್ಭವಮ್॥

ಎಂದುದಾಗಿ ಇದುಕಾರಣ ಪ್ರಸಾದಉಳ್ಳವಂಗೆ ಭಕ್ತಿಯುಂಟು
ಭಕ್ತಿಯುಳ್ಳವಂಗೆ ಲಿಂಗವುಂಟು

ಲಿಂಗವುಳ್ಳವಂಗೆ ಜಂಗಮವುಂಟು
ಜಂಗಮವುಳ್ಳವಂಗೆ ಗುರುವುಂಟು
ಇದುಕಾರಣ ಸದ್ಗುರುವೇ ಕಾರಣ ಅಂದೆತೆಂದಡೆ—

ಗುರುಣಾದೀಯತೇ ಲಿಂಗಂ ಗುರುಣಾದೀಯತೇ ಕ್ರಿಯಾ।
ಗುರುಣಾದೀಯತೆ ಮಂತ್ರಂ ಸದ್ಗುರುಃ ಸರ್ವಕಾರಣಂ॥

ಎಂದುದಾಗಿ ಸದ್ಗುರುವೇ ಸರ್ವಶ್ರೇಷ್ಠನು
ಸದ್ಗುರುವೇ ಸರ್ವಪೂಜ್ಯನು
ಸದ್ಗುರುವೇ ಸರ್ವ ಕಾರಣನಯ್ಯ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೩

ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಮಾಯೆ
ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಮರವೆ
ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಪ್ರಪಂಚು
ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಎನ್ನ ಸುತ್ತಿದ ಕರ್ಮಪಾಶವು

ಗುಶಬ್ದಸ್ತ್ವಂಧಕರಃ ಸ್ಯಾದ್ರುಶಬ್ದಸ್ತನ್ನಿರೋಧಕಃ।
ಅಂಧಕಾರ ನಿರೊಧೇನ ಗುರುರಿತ್ಯಭಿಧೀಯತೇ॥

ಎಂದುದಾಗಿ ಇದನರಿದು ಕಣ್ಣಿಗೆ ಸತ್ವರಜತಮವೆಂಬ
ತಿಮಿರ ಕವಿದು ಅಜ್ಞಾನವತವಾದಲ್ಲಿ
ಸದ್ಗುರುವನುಪಧಾವಿಸಿ ಔಷಧಿಯ ಬೇಡಲೊಡನೆ
ಶಿವಜ್ಞಾನವೆಂಬ ಅಂಜನವ ಹಚ್ಚಿ ಎನ್ನ ಕಣ್ಣ ಮುಸುಗಿದ
ಅಜ್ಞಾನವೆಂಬ ಕಾಳಿಕೆಯ ಬೇರ್ಪಡಿಸಿ
ತನ್ನ ಶ್ರೀಗುರು ಪಾದವನರುಹಿಸಿ ಕೊಟ್ಟನಯ್ಯ
ನಮ್ಮ ಕಪಿಲ ಸಿದ್ಧಮಲ್ಲಿನಾಥಯ್ಯನು.

೪

ಗುರು ತನ್ನ ವಿನೋದಕ್ಕೆ ಸ್ಥಾವರವಾದ
ಗುರು ತನ್ನ ವಿನೋದಕ್ಕೆ ಲಿಂಗವಾದ

ಗುರು ತನ್ನ ವಿನೋದಕ್ಕೆ ಜಂಗಮನಾದ
ಗುರು ತನ್ನ ವಿನೋದಕ್ಕೆ ಪ್ರಸಾದವಾದ
ಗುರು ತನ್ನ ವಿನೋದಕ್ಕೆ ಗುರುವಾದ
ಕೂಡಲ ಸಂಗಯ್ಯನಲ್ಲಿ ಏಕಾರ್ಥವಾದ ಗುರುವು.

೫

ಶಿಷ್ಯನ ಗುರುತ್ವವನು ಗುರುವಿನ ಮಹತ್ವವನು
ಆರಯ್ಯ ಬಲ್ಲವರು ಗುರುಶಿಷ್ಯನಾದ ಪರಿಯನು
ಶ್ರೀ ಪಂಚಾಕ್ಷರಿಯ ಉಚ್ಚಾರಣೆಯ ವಿಶ್ವಾಸದ ಸಾಧನದಿಂದ
ವಶಿಷ್ಠ ವಾಮದೇವ ಮೊದಲಾದ ಸಮಸ್ತ ಋಷಿಗಳಿಗೆ
ಹಿರಿದಪ್ಪ ಶಿಷ್ಯ ಗುರುವಾದ ಪರಿಯನು ಆರಯ್ಯ ಬಲ್ಲವರು
ವಾಙ್ಮನೋತೀತ ಉಪಮಿಸಬಾರದ ಘನವು ಮಹಾಕ್ರಿಯನು
ಭಕ್ತಿಯಿಂದ ಗುರು ಭಕ್ತಿವತ್ಸಲನಾಗಿ ಶಿಷ್ಯನಾದ ಪರಿಯನು
ಆ ಬೀಜ ವೃಕ್ಷನ್ಯಾಯದಂತೆ ಅವಿನಾಭಾವವಯ್ಯ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ವಿಭೂತಿಮಹಾತ್ಮ್ಯ ಸ್ಥಲ ೪

ಇಂತೀ ಪ್ರಕಾರದಿಂ ಇಹಪರಂಗಳಲ್ಲಿಯೂ ಪರಿಪೂರ್ಣವಾದ ವಸ್ತು ಸದ್ಗುರುನೆಂಬುದನರಿದು ಗುರುಮಹಾತ್ಮೆಯಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಶ್ರೀ ಗುರು ಶಿಷ್ಯನ ಅಂಗದ ಮೇಲೆ ಧರಿಸಿದ ಭಸ್ಮವನು ಪ್ರಕಟಿಸಿ ನುಡಿದ ವಚನಂಗಳು.

ವಾಶಿಷ್ಠೇ —

ಪಾತಕೀ ಪಾತಕಾನ್ಮುಕ್ತೋ ಭವಿಷ್ಯತಿ ನಸಂಶಯಃ ।
ಭಸ್ಮನಾ ಸದೃಶಂ ನಾಸ್ತಿ ಕಿಂಚಿಲ್ಲೋಕೇಷ್ವಪಿ ತ್ರಿಷು ॥ ೧ ॥

ಪಾಪವ ಮಾಡಿದವನು ವಿಭೂತಿಯ ಧರಿಸಲೊಡನೆ ತಾನಾ ಪಾಪಂಗಳಿಂ ತೊಲಗುವನು ಸಂದೇಹವಿಲ್ಲ ಆ ವಿಭೂತಿಗೆ ಸಮಾನ ವಸ್ತುವು ಮೂರು ಲೋಕಗಳಲ್ಲಿಯೂ ಇಲ್ಲವು.

ಶಿವಧರ್ಮೇ —

ಪ್ರಾತಃ ಸ್ನಾತ್ವಾ ಚ ಸೋಗಚ್ಛೇದ್ಭಸ್ಮನಾಪಾ ಶಿವಂ ಪದಮ್ ।
ಪಾಪಕಂಚುಕಮುತ್ಸೃಜ್ಯ ಸ್ನಾನಮಾಗ್ನೇಯಮಾಚರೇತ್ ॥ ೨ ॥

ಪಾಪಕ್ಕಂಜುವಾತನು ಉದಯದಿಂ ಮುನ್ನವೇ ಎದ್ದು ವಿಭೂತಿಯಿಂ ಜಳಕವ ಮಾಡಿ ಅಡಿಯಿಡುವಾತನು ತನ್ನ ಪಾಪವಂ ಕಳೆದು ಶಿವಪುರವನೈದುವನು.

ಲೈಂಗೇ —

ಜಟಿನೋ ಮುಂಡಿನೋ ವಾಪಿ ನಗ್ನಾ ನಾನಾಪ್ರಕಾರಿಣಃ ।
ಯದ್ಭಸ್ಮ ಮಾತ್ಯಜೇನ್ನಿತ್ಯಂ ಕರ್ಮಣಾ ಮನಸಾ ಗಿರಾ ॥ ೩ ॥

ಜಡೆಯ ಧರಿಸಿದವರಾದರೂ ಬೋಳಾದವರಾದಡೆಯೂ ಬತ್ತಲೆಯವರಾದಡೆಯೂ ವಿಭೂತಿಯಂ ಧರಿಸುವುದು ಮನದಲ್ಲಿಯು ವಾಕ್ಕಿನಲ್ಲಿಯು ಕಾಯದಲ್ಲಿಯು ವಿಭೂತಿಯಂ ಬಿಡಲಾಗದು.

ವೀರಾಗಮೇ—

ಸ್ಥಾನಭೇದಂ ಪ್ರವಕ್ಷ್ಯಾಮಿ ಮೂರ್ಧಾಚೈವ ಲಲಾಟಕಮ್ ।
ಕರ್ಣೌ ಚ ಚಕ್ಷುಷೀ ಚೈವ ನಾಸಿಕಾ ಚಾಸ್ಯಮೇವ ಚ ॥ ೪ ॥

ಗ್ರೀವಾಸ್ಕಂಧೌ ಚ ಬಾಹೂ ಚ ಕೂರ್ಪರೇ ಚ ತಥಾಮಣೀ ।
ಹೃನ್ನಾಭಿ ಮೇಢ್ರಪಾಯೂ ಚ ಊರು ಜಾನುನಿ ಜಂಘಯೋಃ ॥ ೫ ॥

ಗುಲ್ಫೇ ಪಾದದ್ವಯೋಶ್ಚೈವ ವೃಷಣದ್ವಯಮೇವ ಚ ।
ದ್ವಾತ್ರಿಂಶತ್ ಸ್ಥಾನಮಿತ್ಯುಕ್ತಂ ಭಸ್ಮನಾ ಲೇಪಯೇತ್ತತಃ ॥ ೬ ॥

ವಿಭೂತಿಯ ಸ್ಥಾನ ಭೇದವನು ಹೇಳುವೆನು ಅವಾವವೆಂದಡೆ— ಶಿರಸ್ಸು, ಹಣೆ, ಕಿವಿಗಳು, ಕಣ್ಣುಗಳು, ಮೂಗು, ಮುಖ, ಕೊರಳು, ಮುಡುಹುಗಳು, ತೋಳುಗಳು, ಮೊಳಕೈಗಳು, ಮುಂಗೈಗಳು, ಹೃದಯ, ಹೊಕ್ಕುಳ, ಗುಹ್ಯ, ಅಧೋದ್ವಾರ, ತೊಡೆಗಳು, ಮೊಣಕಾಲುಗಳು, ಕಿರಿದೊಡೆಗಳು, ಹರಡುಗಳು, ಪಾದಗಳು, ಅಂಡಗಳು, ಇಂತೀ ಮೂವತ್ತೆರಡು ಸ್ಥಾನಂಗಳೆಂದು ಹೇಳಲ್ಪಟ್ಟಿರುವವು. ಈ ಮೂವತ್ತೆರಡು ಸ್ಥಾನಗಳಲ್ಲಿ ವಿಭೂತಿಯಂ ಧರಿಸುವುದು.

## ವಚನಗಳು

೧

ಚಂದ್ರಮನ ಕಾಂಬುದಕೆ ಆ ಚಂದ್ರನಿಂದೊದಗಿದ ಬೆಳಗೇ ಮುಖ್ಯ
ಸೂರ್ಯನ ಕಾಂಬುದಕೆ ಆ ಸೂರ್ಯನಿಂದೊದಗಿದ ಬೆಳಗೇ ಮುಖ್ಯ
ಜ್ಯೋತಿಯ ಕಾಂಬುದಕೆ ಆ ಜ್ಯೋತಿಯಿಂದೊದಗಿದ ಬೆಳಗೇ ಮುಖ್ಯ
ರತ್ನವ ಕಾಂಬುದಕ್ಕೆ ಆ ರತ್ನದಿಂದೊದಗಿದ ಕಳಾಲಹರಿಯೇ ಮುಖ್ಯ
ನಮ್ಮ ಗುಹೇಶ್ವರಲಿಂಗವ ಕಾಂಬುದಕ್ಕೆ ಆ ಮಹಾವಸ್ತುವಿನ-
ದಿವ್ಯತೇಜದಿಂದೊಗಿದ ಭಸಿತವೇ ಮುಖ್ಯ ಕಾಣಿರಣ್ಣಾ

೨

ಅನೇಕ ಜನ್ಮದಲ್ಲಿ ಮಾಡಿದ ಪಾಪವು
ಹೇಗೆ ಹೋಹವೋ ಎಂದು ಚಿಂತಿಸಬೇಡ
ಕಹಿಸೋರೆಯ ಕಾಯತಂದು ವಿಭೂತಿಯ ತುಂಬಿದರೆ
ಸಿಹಿಯಾಗದೇ ಮೂರು ದಿವಸಕ್ಕೆ

ಹಲವು ಕಾಲ ಕೊಂದ ಸೂನೆಗಾರನ ಕೈಯ್ಯ ಕತ್ತಿಯಾದಡೇನು
ಪರುಷ ಮುಟ್ಟಲು ಹೊನ್ನಾಗದೇ ಅಯ್ಯಾ
ಲಲಾಟದಲ್ಲಿ ವಿಭೂತಿಯ ಧರಿಸಲ್ಕೆ
ಪಾಪಂಗಳು ಬೆಂದು ಹೋಂಗದಿಹವೇ ಕೂಡಲ ಸಂಗಮದೇವಾ

೩

ಧರಿಸಿ ಭೋ ಧರಿಸಿ ಭೋ ಮರ್ತ್ಯರೆಲ್ಲರು ಮರೆಯದೆ
ಶ್ರೀ ಮಹಾಭಸಿತವ
ಲೆಕ್ಕವಿಲ್ಲದ ತೀರ್ಥಂಗಳ ಮಿಂದ ಫಲಕ್ಕಿಂದವು ಕೋಟಿಮಡಿ ಪೆಗ್ಗಳ
ಧರಿಸಿಭೋ ಧರಿಸಿಭೋ ಮರ್ತ್ಯರೆಲ್ಲರು ಮರೆಯದೆ ಶ್ರೀಮಹಾಭಸಿತವ
ಲೆಕ್ಕವಿಲ್ಲದ ಯಜ್ಞಂಗಳ ಮಾಡಿದ ಫಲಕ್ಕಿಂದ ಕೋಟಿಮಡಿ ಪೆಗ್ಗಳ
ಅದೆಂತೆಂದಡೆ ಭೀಮಾಗಮೇ—

ಸರ್ವತೀರ್ಥೇಷು ಯತ್ಪುಣ್ಯಂ ಸರ್ವಯಜ್ಞೇಷು ಯತ್ಫಲಮ್ ।
ತತ್ಫಲಂ ಕೋಟಿ ಗುಣಿತಂ ಭಸ್ಮಸ್ನಾನಂ ನ ಸಂಶಯಃ ॥

ಎಂದುದಾಗಿ ಧರಿಸಿಭೋ ಧರಿಸಿಭೋ ಮರ್ತ್ಯರೆಲ್ಲರು ಮರೆಯದೆ
ಶ್ರೀ ಮಹಾಭಸಿತವ
ನಮ್ಮ ಕಲಿದೇವರ ನಿಜ ಚರಣವ ಕಾಂಬುದಕ್ಕೆ
ಶ್ರೀ ಮಹಾಭಸಿತವೇ ವಸ್ತುಕಾಣಿಭೋ

೪

ಶ್ರೀವಿಭೂತಿಯ ಬಿಟ್ಟು ತಪಸ್ಸು ಮಾಡಿದಡೆ ಆ ತಪಃಸಿದ್ಧಿ ಬಯಲು
ಶ್ರೀವಿಭೂತಿಯ ಬಿಟ್ಟು ದೀಕ್ಷೆಯ ಕೊಂಡಡೆ ಆ ದೀಕ್ಷೆ ಬಯಲು
ಶ್ರೀವಿಭೂತಿಯ ಬಿಟ್ಟು ಮಂತ್ರಗಳ ಸಾಧಿಸಿದಡೆ ಆ ಮಂತ್ರಸಿದ್ಧಿ
ಬಯಲು
ಶ್ರೀವಿಭೂತಿಯ ಬಿಟ್ಟು ಯಜ್ಞಂಗಳ ಸಾಧಿಸಿದಡೆ ಆ ಯಜ್ಞಸಿದ್ಧಿ
ಬಯಲು
ಶ್ರೀವಿಭೂತಿಯ ಬಿಟ್ಟು ದೇವತಾರ್ಚನೆಯ ಮಾಡಿದಡೆ
ಆ ದೇವತಾರ್ಚನೆ ಬಯಲು
ಶ್ರೀವಿಭೂತಿಯ ಬಿಟ್ಟು ವಿದ್ಯವ ಸಾಧಿಸಿದಡೆ ಆ ವಿದ್ಯಾಸಿದ್ಧಿ ಬಯಲು

ಶ್ರೀವಿಭೂತಿಯ ಬಿಟ್ಟು ವೇದವ ಪಠಿಸಿದಡೆ ಆ ವೇದಸಿದ್ಧಿ ಬಯಲು
ಅದೆಂತೆಂದಡೆ ಶೃಂಗೇ—

ನ ದೀಕ್ಷಾ ನ ತಪೋ ಮಂತ್ರಂ ನ ಯಜ್ಞೋ ನ ಚ ದೇವತಾ ।
ವಿದ್ಯಾ ನೈವಾಗಮಜ್ಞಾನಂ ಭಸ್ಮ ಮಾಹಾತ್ಮ್ಯ ವರ್ಜಿತಮ್ ॥

ಎಂದುದಾಗಿ ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ
ನಿಮ್ಮ ದಿವ್ಯಾಲಂಕಾರಮಪ್ಪ ದಿವ್ಯ ಭಸಿತವ ಬಿಟ್ಟ—
ಪಂಚಮಹಾಪಾತಕರಿಗೆ ಆವ ಕಾರ್ಯವೂ ಸಿದ್ಧಿಸುವುದಿಲ್ಲ

೫

ಅಯ್ಯಾ ಎನಗೆ ಶ್ರೀವಿಭೂತಿಯೇ ಮನೆದೈವ
ಅಯ್ಯಾ ಎನಗೆ ಶ್ರೀವಿಭೂತಿಯೇ ಮನದೈವ
ಅಯ್ಯಾ ಎನಗೆ ಶ್ರೀವಿಭೂತಿಯೇ ಸರ್ವಕಾರಣ
ಅಯ್ಯಾ ಎನಗೆ ಶ್ರೀವಿಭೂತಿಯೇ ಸರ್ವಸಿದ್ಧಿ
ಅಯ್ಯಾ ಎನಗೆ ಶ್ರೀ ವಿಭೂತಿಯೇ ಸರ್ವತತ್ತ್ವ
ಅಯ್ಯಾ ಕೂಡಲ ಸಂಗಮದೇವಾ
ಶ್ರೀಮಹಾ ಭಸಿತವೆಂಬ ಪರಂಜ್ಯೋತಿ ಸೀವಾದಿರಾಗಿ
ಅಯ್ಯಾ ಎನಗೆ ವಿಭೂತಿಯೇ ಸರ್ವಸಾಧನವಯ್ಯಾ

## ರುದ್ರಾಕ್ಷಮಾಹಾತ್ಮ್ಯ ಸ್ಥಲ ೫

ಈ ಪ್ರಕಾರದಿಂ ಮಹಾಘನತರವುಳ್ಳ ವಿಭೂತಿಯೊಂದರಿದು ಸದ್ಭಕ್ತರು ವಿಶ್ವಾಸದಿಂದ ಧರಿಸಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದ ಮಹಾಪುರಾತನರು.

ಇಂತಹ ಶ್ರೀ ವಿಭೂತಿಯಂ ಧರಿಸಿದ ಶಿವಭಕ್ತರು ರುದ್ರಾಕ್ಷಿಯಂ ಧರಿಸಬೇಕೆಂಬುದಂ ನುಡಿದ ವಚನಂಗಳು.

ವಾಶಿಷ್ಠೇ—

ರುದ್ರಾಕ್ಷ ಧಾರಣಾದ್ರುದ್ರೋ ಭವತ್ಯತ್ರ ನ ಸಂಶಯಃ ।
ಪಶ್ಯನ್ನಪಿ ನಿಷಣ್ಣಃ ಸನ್ ತಥಾ ಶೃಣ್ವನ್ನಪಿ ಸ್ಮರನ್ ॥೧॥
ಜಿಘ್ರನ್ನಪಿ ತಥಾ ವಕ್ಷ್ಯನ್ ಪ್ರಲಪನ್ನಪಿ ಸಂತತಮ್ ।
ಕುರ್ವನ್ನಪಿ ತಥಾ ಗಚ್ಛನ್ವಿಸೃಜನ್ನಪಿ ಮಾನವಃ ॥
ರುದ್ರಾಕ್ಷಧಾರಣಾದೇವ ಸರ್ವಪಾಪೈರ್ವಿಮುಚ್ಯತೇ ॥೨॥

ರುದ್ರಾಕ್ಷಿಗಳ ಧರಿಸುವುದರಿಂ ರುದ್ರನಹನು ಈ ವಿಷಯದಲ್ಲಿ ಸಂಶಯವಿಲ್ಲ. ನೋಡುತ್ತಿದ್ದಾತನಾದರೂ ಕುಳಿತಿದ್ದಾತನಾದರೂ ನೆನೆವುತ್ತಿದ್ದಾತನಾದರೆಯೂ ವಾಸಿಸುತ್ತಿದ್ದಾತನಾದರೆಂದೂ ಉಂಣುತ್ತಿದ್ದಾತನಾದರೆಯೂ ಆವಾಗಲೂ ಏನನಾದಡೆಯೂ ನುಡಿವಾತನಾದಡೆಯೂ ಏನನಾದರೂ ಮಾಡುವಾತನಾದಡೆಯೂ ನಡೆವುತ್ತಿದ್ದಾತನಾದಡೆಯೂ ಬರುತ್ತಿದ್ದಾತನಾದಡೆಯೂ ಇಂತಹ ಮನುಷ್ಯನು ಮಾಡಿದಂತಹ ಪಾಪವೆಲ್ಲವು ನಾಶವಾಗುವುದಲ್ಲದೆ ರುದ್ರಾಕ್ಷಿಯ ಧಾರಣದ ದೆಸೆಯಿಂದ ಎಲ್ಲ ಪಾಪಂಗಳಿಂ ಬಿಡಲ್ಪಡುತ್ತಿಹನು.

### ವಚನಗಳು

೧

ಅಯ್ಯಾ ರುದ್ರಾಕ್ಷಿಯಿಂದ ಇಹವ ಕಂಡೆ
ಅಯ್ಯಾ ರುದ್ರಾಕ್ಷಿಯಿಂದ ಪರವ ಕಂಡೆ
ಅಯ್ಯಾ ರುದ್ರಾಕ್ಷಿಯಿಂದ ಗತಿಯ ಕಂಡೆ
ಅಯ್ಯಾ ರುದ್ರಾಕ್ಷಿಯಿಂದ ಮತಿಯ ಕಂಡೆ

ಅಯ್ಯಾ ರುದ್ರಾಕ್ಷಿಯಿಂದ ಮೋಕ್ಷವ ಕಂಡೆ
ಅಯ್ಯಾ ಇನ್ನು ನಾನು ಬದುಕಿದೆ ಬದುಕಿದೆನಯ್ಯಾ
ಅಯ್ಯಾ ಇನ್ನು ಭವಂ ನಾಸ್ತಿಯಾಯಿತ್ತೆನಗೆ
ಅಯ್ಯಾ ಮಹಾಲಿಂಗ ಕಲ್ಲೇಶ್ವರಾ ಶ್ರೀಮಹಾರುದ್ರಾಕ್ಷಿಯಿಂದ ಕಂಡೆನು
ಅಯ್ಯಾ ಎನ್ನ ಕರಸ್ಥಲವಲ್ಲಿ ಮಹಾಗೂಢವಾಗಿಪ್ಪ ನಿಮ್ಮ ದಿವ್ಯ ಮೂರ್ತಿಯ ಸೊಂಪನು

೨

ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ್ಯ-
ಪಂಚಬ್ರಹ್ಮ ಮೊದಲಾದ ಪಂಚಮುಖದ ರುದ್ರಾಕ್ಷಿಯ
ಹಸ್ತ ಬಾಹು ಕರ್ಣ ಕಂಠ ಉರ ಮಸ್ತಕಂಗಳಲ್ಲಿ ಧರಿಸಿಪ್ಪಾತನೇ ರುದ್ರನು
ಆ ಸದ್ಭಕ್ತನ ದರ್ಶನ ಸ್ಪರ್ಶನವ ಮಾಡಿದವರಿಗೆ
ಭವ ರೋಗ ದುರಿತ ಮುಟ್ಟಲಮ್ಮವು ನೋಡಾ

"ಅತ ಏವ ರುದ್ರಾಕ್ಷಧಾರಣಾದೇವ ರುದ್ರಃ"

ಎಂದುದಾಗಿ ರುದ್ರಪದವಿಯ ಸೀವ ರುದ್ರಾಕ್ಷಿಯ ಧರಿಸಿಪ್ಪ
ಶಿವಭಕ್ತಂಗೆ ಶರಣೆಂಬೆನಯ್ಯಾ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೩

ಘನಕ್ಕೆ ಘನಮಹಿಮೆಯ ಪಡೆವರೆ
ರುದ್ರಾಕ್ಷಿಯ ಧರಿಸಿಪ್ಪ ಸದ್ಭಕ್ತನು ಮನುಜನಲ್ಲ ನೋಡಿರೇ
ಮುನ್ನಲೊಬ್ಬ ವ್ಯಾಧನು ಶ್ವಾನನ ಕೊರಳಲ್ಲಿ ರುದ್ರಾಕ್ಷಿಯ ಕಟ್ಟಲು
ಆ ಶ್ವಾನ ರುದ್ರ ಲೋಕವನೈದಿತ್ತೆಂಬುದಕ್ಕೆ
ಶಿವಧರ್ಮ ಪುರಾಣ ಪ್ರಸಿದ್ಧ ನೋಡಿರೇ—

ರುದ್ರಾಕ್ಷ ಕಂಠಮಾಶ್ರಿತ್ಯ ಶ್ವಾನೋಽಪಿ ಮ್ರಿಯತೇ ಯದಿ ।
ಸೋಽಪಿ ರುದ್ರತ್ವಮಾಪ್ನೋತಿ ಕಿಂ ಪುನರ್ಮಾನುಷಾದಯಃ ॥

ಎಂದುದಾಗಿ ಮತ್ತಂ—

ಶಿಖಾಯಾಂ ಧಾರಯೇದೇಕಂ ಶಿರಸಿ ತ್ರೀಣಿ ಧಾರಯೇತ್ ।
ಷಟ್ತ್ರಿಂಶದ್ಧಾರಯೇನ್ಮೂರ್ಧ್ನಿ ಏಕೈಕಂ ಕರ್ಣಯೋರ್ದ್ವಯೋಃ ॥

ದ್ವಾತ್ರಿಂಶತ್ಕಂಠಮಾಲಾಯಾಂ ಪಂಚಾಶನ್ಮಾಲಿಕಾಂ ಹೃದಿ ।
ಬಾಹ್ವೋಶ್ಚ ಷೋಡಶಶ್ಚೈವ ದ್ವಾದಶ್ಚೈವ ಪ್ರಕೋಷ್ಠಕೇ ।
ಅಷ್ಟೋತ್ತರಶತಂ ಮಾಲಾಂ ರುದ್ರಾಕ್ಷೈರುಪವೀತಕಮ್ ।
ಪದೇ ಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತಿ ಶಾಶ್ವತಮ್ ।

ಎಂದುದಾಗಿ ಶಿಖೆಯಲ್ಲಿ ಒಂದು ಶಿರಸ್ಸಿನಲ್ಲಿ ಮೂರು
ಮಂಡೆಯ ಸುತ್ತಲು ಮೂವತ್ತಾರು ಎರಡು ಕಿವಿಗಳಲ್ಲಿ ಒಂದೊಂದು
ಕೊರಳಲ್ಲಿ ಮೂವತ್ತೆರಡು ಹೃದಯದಲ್ಲಿ ಐವತ್ತು
ಎರಡು ತೋಳುಗಳಲ್ಲಿ ಹದಿನಾರು ಹದಿನಾರು ।
ಎರಡು ಮುಂಗೈಗಳಲ್ಲಿ ಹನ್ನೆರಡು ಹನ್ನೆರಡು
ಯಜ್ಞೋಪವೀತವಾಗಿ ನೂರೆಂಟು ಮಣಿಗಳಿಂದ ।
ಅಕ್ಷಮಾಲೆಯಂ ಮಾಡಿ ಧರಿಸುವುದು
ಈ ರೀತಿಯಲ್ಲಿ ಧರಿಸಿದಾತನು ಹೆಜ್ಜೆಹೆಜ್ಜೆಯಲ್ಲಿ ।
ಅಶ್ವಮೇಧಯಾಗದ ಫಲವನ್ನೈದುವನು
ಸಂಶಯವಿಲ್ಲವಾಗಿ ಇಂತಪ್ಪ ಮಹಾಮಹಿಮನು ।
ಇಹಲೋಕ ಪೂಜ್ಯನು ಪರಲೋಕ ಪೂಜ್ಯನು
ಆ ಸದ್ಭಕ್ತನ ದರ್ಶನ ಸ್ಪರ್ಶನದಿಂದ ಪಾಪಕ್ಷಯವಹುದು
ಈ ಕ್ರಮವನರಿಯದೆ ರುದ್ರಾಕ್ಷಿಯ ಧರಿಸಿದಡೆ
ಕತ್ತೆ ರುದ್ರಾಕ್ಷಿಯ ಹೊತ್ತು ಬಂದಂತೆ ಕಾಣಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

# ಪಂಚಾಕ್ಷರೀ ಮಾಹಾತ್ಮ್ಯ ಸ್ಥಲ ೬

ಇಂತೀ ಪ್ರಕಾರದಿಂ ಮಹಾಘನಮಹಿಮೆಯುಳ್ಳ ರುದ್ರಾಕ್ಷಿಯೆಂದ ರಿದು ಶಿವಭಕ್ತರು ವಿಶ್ವಾಸದಿಂದ ಧರಿಸಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ರುದ್ರಾಕ್ಷಿಯಂ ಧರಿಸಿದಾತನು ಪಂಚಾಕ್ಷರಿಯಂ ಜಪಿಸ ಬೇಕೆಂದು ನುಡಿದ ವಚನಗಳು

ಪಂಚಾಕ್ಷರಪ್ರಭಾವಾಚ್ಚ ಲೋಕಾ ದೇವಾ ಮಹರ್ಷಯಃ ।
ತಿಷ್ಠಂತಿ ಶಾಶ್ವತಂ ಧರ್ಮವೇದಾಃ ಸರ್ವಮಿದಂ ಜಗತ್ ॥೧॥

ಪಂಚಾಕ್ಷರಿಯ ಸಾಮರ್ಥ್ಯದ ದೆಸೆಯಿಂದ ಹದಿನಾಲ್ಕು ಲೋಕಂಗಳು ಮೂವತ್ತುಮೂರು ಕೋಟಿ ದೇವರ್ಕಳೂ ಮೂರುಕೋಟಿ ಮಹರ್ಷಿ ಗಳೂ ಧರ್ಮವೂ ನಾಲ್ಕು ವೇದಂಗಳೂ ಇರುತ್ತಿಹವು.

ಆಶ್ರಿತ್ಯ ಪರಮಾಂ ವಿದ್ಯಾಂ ಹೃದ್ಯಾಂ ಪಂಚಾಕ್ಷರೀಂ ಮಮ ।
ಭಕ್ತಾಶ್ಚ ಪರಮಾತ್ಮಾನೋ ಮುಚ್ಯಂತೇ ಕಲಿಜಾ ನರಾಃ ॥೨॥

ಎಲೈ ಪಾರ್ವತಿ, ನನ್ನ ಪಂಚಾಕ್ಷರಿಯ ವಿದ್ಯೆಯನ್ನು ಆಶ್ರಯಿಸಿ ಕಲಿಯುಗದಲ್ಲಿ ಹುಟ್ಟಿದ ನನ್ನ ಬಕ್ತಜನರು ಪರಮಾತ್ಮರೆನಿಸಿ ಮುಕ್ತ ರಹರು.

ಮಮ ಪಂಚಾಕ್ಷರೀಮಂತ್ರಂ ಪಾಠಮಾತ್ರೇಣ ಸಿದ್ಧಿದಮ್
ಸರ್ವಲೋಕವಶೀಕಾರಂ ಸೌಭಾಗ್ಯಂ ಜ್ಞಾನವರ್ಧನಮ್ ॥೩॥

ನನ್ನ ಪಂಚಾಕ್ಷರಿಯ ಮಂತ್ರವು ಪಠನ ಮಾತ್ರದಿಂದಲೇ ಮಹಾ ಸಿದ್ಧಿಯಂ ಕೊಡುವುದು; ಸರ್ವಲೋಕವನು ವಶೀಕರಿಸುವುದು ಐಶ್ವರ್ಯ ಸುಜ್ಞಾನಗಳ ಹೆಚ್ಚುಗೆಯಂ ಕೊಡುವುದು

ತಸ್ಮಾತ್ತಪಾಂಸಿ ಯಜ್ಞಾಶ್ಚ ವ್ರತಾನಿ ನಿಯಮಾಸ್ತಥಾ ।
ಪಂಚಾಕ್ಷರಾರ್ಚನಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ ॥೪॥

ಅದು ಕಾರಣವಾಗಿ ತಪಸ್ಸುಗಳು ಯಜ್ಞಂಗಳು ಮಂತ್ರಗಳು ಹಾಗೆ ನಿಯಮಗಳು ಪಂಚಾಕ್ಷರಿ ಮಂತ್ರದಿಂದರ್ಚಿದ ಫಲಕ್ಕೆ ಕೋಟ್ಯಂಶದೊಳ ಗಣ ಒಂದಂಶ ಫಲಕ್ಕೆ ಸಮಬಾರದು.

ಅನೇನ ಸದೃಶಂ ಜಾಪ್ಯಂ ನಾಸ್ತಿ ನಾಸ್ತಿ ಶ್ರುತೌ ಸ್ಮೃತೌ
ಏಷಾ ಪಂಚಾಕ್ಷರೀವಿದ್ಯಾ ಸರ್ವಶ್ರುತಿ ಶಿರೋಗತಾ ॥೫॥

ಈ ಪಂಚಾಕ್ಷರಿಯ ಮಂತ್ರದೊಡನೆ ಜಪಿಸಲು ಯೋಗ್ಯವಾದ ಮಂತ್ರವು ವೇದದಲ್ಲಿಯೂ ಧರ್ಮಶಾಸ್ತ್ರದಲ್ಲಿಯೂ ಇಲ್ಲ ಇಲ್ಲ. ಪಂಚಾಕ್ಷರೀ ವಿದ್ಯೆಯು ಸಮಸ್ತವೇದ ಶಿರೋಮಣಿಯು.

## ವಚನಗಳು

೧

ಶ್ರೀ ಮಹಾಪಂಚಾಕ್ಷರಿಯೇ ಸರ್ವಮಂತ್ರಕ್ಕೆಲ್ಲಕ್ಕೆಯೂ
ಉತ್ಪತ್ತಿ ಸ್ಥಿತಿಲಯಸ್ಥಾನ
ಸರ್ವಕಾರಣವೆಲ್ಲಕ್ಕೆಯೂ ಮೂಲವು ಶ್ರೀ ಪಂಚಾಕ್ಷರಿಯು

ಅದೆಂತೆಂದಡೆ ಕಾಮಿಕಾಗಮೇ—

ಸಪ್ತಕೋಟಿ ಮಹಾಮಂತ್ರ ಉಪಮಂತ್ರಾಸ್ತ್ವನೇಕಧಾ ।
ಪಂಚಾಕ್ಷರ್ಯಾಂ ಪ್ರಲೀಯಂತೇ ಮನಸ್ತತ್ರ ವಿಸರ್ಗತಃ ॥
ತಸ್ಮಿನ್ವೇದಾಶ್ಚ ಶಾಸ್ತ್ರಾಣಿ ಮಂತ್ರಃ ಪಂಚಾಕ್ಷರೀ ತಥಾ

ಎಂದುದಾಗಿ ಇದುಕಾರಣ ಶ್ರೀ ಪಂಚಾಕ್ಷರಿಯುಳ್ಳ
ಸದ್ಭಕ್ತನೇ ವೇದವಿತ್ತು
ಆ ಸದ್ಭಕ್ತನೇ ಶಾಸ್ತ್ರವಾನ್ ಆ ಮಹಾಮಹಿಮನೇ ಪುರಾಣಿಕನು
ಆ ಮಹಾ ಮಹಿಮನೇ ಆಗಮಿಕನು
ಆ ಮಹಾಮಹಿಮನೇ ಸರ್ವಜ್ಞನಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೨

ಸಪ್ತಕೋಟಿ ಮಹಾ ಮಂತ್ರಗಳಿಗೆ ಉಪಮಂತ್ರಗಳುಂಟು
ಆ ಉಪಮಂತ್ರಕ್ಕೆ ಲೆಕ್ಕವಿಲ್ಲ ಆ ಜಾಳುಮಂತ್ರಕ್ಕೆ ಭ್ರಮಿಸಿ
ಚಿತ್ತವ್ಯಾಕುಲವಾಗಿ ಕೆಟ್ಟು ಹೋಗದಿರು ಮನವೇ
ಶಿವಶಿವಾ ನಮಃ ಶಿವಾಯ ಎಂದಡೆ ಸಾಲದೇ
ಒಂದು ಕೋಟಿ ಮಹಾಪಾತಕ ಪರಿಹಾರವಕ್ಕು

ಅದೆಂತೆಂದಡೆ ಶಿವಧರ್ಮೇ—

> ಶಿವೇತಿಮಂಗಲಂ ನಾಮ ಯಸ್ಯ ವಾಚಿ ಪ್ರವರ್ತತೇ ।
> ಭಸ್ಮೀಭವಂತಿ ತಸ್ಯಾಶು ಮಹಾಪಾತಕಕೋಟಯಃ ॥

ಎಂದುದಾಗಿ ಸದ್ಗುರು ಚೆನ್ನಮಲ್ಲಿಕಾರ್ಜುನನ ತೋರಿದ
ಸಹಜ ಮಂತ್ರವೆನಗಿದೇ ಪರಮ ತತ್ವವಯ್ಯಾ

೩

ಕರಿಯಂಜುವದಂಕುಶಕ್ಕೆ ಗಿರಿಯಂಜುವದು ವಜ್ರಕ್ಕೆ
ತಮಂಧವಂಜುವದು ಜ್ಯೋತಿಗೆ ಕಾನನವಂಜುವುದು ಬೇಗೆಗೆ
ಪಂಚ ಮಹಾಪಾತಕವಂಜುವದು ಕೂಡಲಸಂಗಯ್ಯಾ
ನಿಮ್ಮ ನಾಮಕ್ಕೆ

೪

ಅಗ್ರಜನಾಗಲಿ ಅಂತ್ಯಜನಾಗಲಿ ಮೂರ್ಖನಾಗಲಿ ಪಂಡಿತನಾಗಲಿ
ಜಪಿಸುವುದು ಶ್ರೀ ಪಂಚಾಕ್ಷರೀ ಮಂತ್ರವ
ಜಪದಿಂದ ರುದ್ರನಪ್ಪುದು ತಪ್ಪದು

ಅದೆಂತೆಂದಡೆ ಲೈಂಗೇ—

> ಅಗ್ರಜಶ್ಚಾಂತ್ಯಜೋ ವಾಪಿ ಮೂರ್ಖೋ ವಾ ಪಂಡಿತೋಽಪಿ ವಾ ।
> ಜಪೇತ್ ಪಂಚಾಕ್ಷರೀಮಂತ್ರಂ ರುದ್ರೋ ನಾತ್ರ ಸಂಶಯಃ ॥

ಎಂದುದಾಗಿ ಇದಕ್ಕೆ ಶಪಥ ಮಾಡಿದೆನು
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೫

ಶ್ರೀ ಮತ್ಪಂಚಾಕ್ಷರಿಯ ಉಚ್ಚರಣದ ವಿಶ್ವಾಸದಿಂದ
ಉಪಮನ್ಯುವಿಗೆ ಶಿವಜ್ಞಾನ ಸಿದ್ಧಿಸಿತ್ತು
ಶ್ರೀ ಮತ್ಪಂಚಾಕ್ಷರಿಯ ಉಚ್ಚರಣದ ವಿಶ್ವಾಸದ ಸಾಧನದಿಂದ
ವಶಿಷ್ಠ ವಾಮದೇವ ಮೊದಲಾದ ಸಮಸ್ತಋಷಿಗಳಿಗೆ
ಹಿರಿದಪ್ಪ ಪಾಪದೋಷ ಪರಿಹರಿದುವು
ಶ್ರೀ ಮತ್ಪಂಚಾಕ್ಷರಿಯ ಉಚ್ಚರಣದ ವಿಶ್ವಾಸದ ಸಾಧನದಿಂದ
ಬ್ರಹ್ಮವಿಷ್ಣ್ವಾದಿಗಳಿಗೆ ಜಗತ್ಸೃಷ್ಟಿರಕ್ಷಾಪತಿತ್ವ ಸಾಧ್ಯವಾಯಿತ್ತು

ಅದೆಂತೆಂದಡೆ ಬ್ರಹ್ಮಾಂಡಪುರಾಣೇ—

ಉಪಮನ್ಯುಃ ಪುರಾಯೋಗೀ ಮಂತ್ರೇಣಾನೇನ ಸಿದ್ಧಿಮಾನ್ ।
ಲಬ್ಧವಾನ್ ಪರಮೇಶಾನಾಚ್ಛೈವ ಶಾಸ್ತ್ರಪ್ರವಕ್ತೃತಾಮ್ ॥

ಮತ್ತಂ ವಿಷ್ಣುಪುರಾಣೇ—

ವಶಿಷ್ಠವಾಮದೇವಾದ್ಯಾ ಮುನಯೋ ಮುಕ್ತಕಿಲ್ಬಿಷಾಃ ।
ಮಂತ್ರೇಣಾನೇನ ಸಂಸಿದ್ಧಾ ಮಹಾತೇಜಸ್ವಿನೋಽಭವನ್ ॥

ಎಂಬುದಾಗಿ ಮತ್ತಂ ಕೂರ್ಮಪುರಾಣೇ—

ಬ್ರಹ್ಮಾದೀನಾಂ ಚ ದೇವಾನಾಂ ಜಗತ್ಸೃಷ್ಟ್ಯಧಿಕಾರಣಾತ್ ।
ಮಂತ್ರಸ್ಯಾಸ್ಯೈವ ಮಾಹಾತ್ಮ್ಯಾತ್ಸಾಮರ್ಥ್ಯಮುಪಜಾಯತೇ ॥

ಎಂದುದಾಗಿ ಇಂತಪ್ಪ ಪುರಾಣ ವಾಕ್ಯಂಗಳನರಿದು
ವಿಪ್ರರೆಲ್ಲರು ಶ್ರೀ ಪಂಚಾಕ್ಷರಿಯ ಜಪಿಸಿರೋ ಜಪಿಸಿರೋ
ಮಂತ್ರಂಗಳುಂಟೆಂದು ಕೆಡಬೇಡಿ ಕೆಡಬೇಡಿ
ಮರೆಯದೆ ಮಹತ್ತಪ್ಪ ಪದವಿಯ ಪಡೆವಡೆ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರದೇವರ ದಿವ್ಯನಾಮವನು

## ಲಿಂಗಧಾರಣ ಮಹಾತ್ಮ್ಯ ಸ್ಥಲ ೭

ಇಂತೀ ಪ್ರಕಾರದಿಂ ಏಳುಕೋಟಿ ಮಹಾಮಂತ್ರಗಳಿಗೆಯು ಉಪಮಂತ್ರ ಕೋಟ್ಯಾನುಕೋಟಿಗಳಿಗೆಯೂ ಪಂಚಾಕ್ಷರಿಮಂತ್ರವೇ ಮಹಾ ಘನಮಹಿಮೆಯುಳ್ಳದ್ದೆಂಬುದನರಿದು ವಿಶ್ವಾಸದಿಂದ ಶಿವಭಕ್ತರು ಪೂಜಿಸ ಬೇಕೆಂದು ಪಂಚಾಕ್ಷರಿಯ ಮಹಾತ್ಮೆಯಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಪಂಚಾಕ್ಷರಿಯಂ ಜಪಿಸಿದಾತನು ಲಿಂಗವ ಧರಿಸಬೇಕೆಂದು ನುಡಿದ ವಚನಂಗಳು.

ಶಿವಧರ್ಮೇ —

ಅಧಮಾಧಮಯುಕ್ತಾನಾಂ ಪಾಪೀನಾಂ ಚಾಭಿಚಾರಿಣಾಮ್ ।
ಲಿಂಗಧಾರಣಯೋಗೇನ ಯಮಲೋಕೋ ನ ವಿದ್ಯತೇ ॥ ೧ ॥

ಅತ್ಯಂತ ಅಧಮರುಗಳೊಡನೆ ಕೂಡಿದವರಿಗೆಯೂ ಪಾಪಿಗಳಿಗೆಯೂ ಮಾಟ ಕೂಟವ ಮಾಡುವರಿಗೆಯೂ ಎಲ್ಲಾಗಳು ಶಿವಲಿಂಗವ ಧರಿಸಿದಡೆಶಿಯಿಂದ ಯಮಲೋಕವಿಲ್ಲವು.

ಅಭಕ್ಷಭಕ್ಷಕೋವಾಪಿ ಬ್ರಹ್ಮಹಾಯದಿ ಮಾತೃಹಾ ।
ಪಿತೃಹಾ ಬಾಲಘಾತೀಚಗೋಘ್ನಃ ಸ್ತ್ರೀ ಶೂದ್ರಘಾತುಕಃ ॥ ೨ ॥
ವಕ್ತಾ ಚ ಪರದೋಷಸ್ಯ ಪರಸ್ಯಗುಣದೂಷಕಃ ।
ಕೃಪಣೋನೃತವಾದೀ ಚ ಮಣಿರತ್ನಾಪಹಾರಕಃ ॥
ಸರ್ವಪಾಪಮಯಃ ಇತ್ಯುಚ್ಯತೇ ಸರ್ವಪಾತಕೈಃ ॥ ೩ ॥

ಶಿವನು ಸ್ಕಂದನಿಗೆ ನಿರೂಪಮಂ ಕೊಡುತ್ತಿಹನು— ಎಲೈ ಮಗನೆ ಶಾಸ್ತ್ರಂಗಳಲ್ಲಿ ಕೇಳಬಾರದಂತಹ ಅನ್ಯಾಹಾರಂಗಳಂ ಕೊಂಡವನಾದಡೆಯೂ ಆಗಲಿ ಬ್ರಾಹ್ಮಣನನ್ನು ಕೊಂದವನು ತಾಯ ಕೊಂದವನು ತಂದೆಯ ಕೊಂದವನು ಹಸುಳೆಯ ಕೊಂದವನು ಗೋವ ಕೊಂದವನು ಸ್ತ್ರೀಯಂ ಕೊಂದವನು ಶೂದ್ರನಂ ಕೊಂದಾತನು ಅನ್ಯರ ದೋಷವ ನುಡಿದಾತನು ಮತ್ತೊಬ್ಬರ ಗುಣಂಗಳ ಜರಿದಾತನು ಕಾರ್ಪಣ್ಯ ಬಡುವಾತನು ಹುಸಿಯ ನುಡಿವಾತನು ಮುತ್ತು ರತ್ನವ ಕದ್ದಾತನು ಸಮಸ್ತ ಪಾಪರೂಪಾದಂತಹನೂ ಲಿಂಗಧಾರಣದೆಶೆಯಿಂದ ಪಾಪಂಗಳಿಂದೆ ಬಿಡುತ್ತಿಹನು.

## ವಚನಗಳು

೧

ನಿತ್ಯ ನಿರಂಜನ ಪರಂಜ್ಯೋತಿಲಿಂಗವು
ಪ್ರತ್ಯಕ್ಷವಾಗಿ ತನ್ನ ಕರಸ್ಥಲಕ್ಕೆ ಬಂದಿರಲು
ಮತ್ತೂ ಅನ್ಯವ ನೆನೆನೆನೆದು ಬದುಕಿಹೆನೆಂಬುದು ಅಜ್ಞಾನವಯ್ಯ
ಸತ್ಯವು
ಸರ್ವಾಂಗ ಲಿಂಗವೆಂದರಿಯದೆ ಮತ್ತೆ ಕಾಯಬೆರಿಸಿ
ಕೈಲಾಸಕ್ಕೆ ಹೋಗಬೇಕೆಂದು ಬಯಸುವುದು ಕ್ರಮವಲ್ಲವಯ್ಯ
ಪಂಚಾಮೃತವು ಮುಂದೆ ಬಂದು ಸಿಂದಿರಲು ಹಸಿದೆನೆಂದು
ಲೋಗರ ಮನೆಯನ್ನವ ಬೇಡುವರೇ
ಕಂಣ ಮುಂದೆ ನಿಧಿ ನಿಧಾನವಿರಲು ಬಳಸಲರಿಯದೆ
ಬಡತನದಲ್ಲಿರುವರೇ
ಲಿಂಗವಿಲ್ಲದವರು ಮೊದಲಾಗಿ ಲಿಂಗವ ನೆನೆನೆನೆದು
ಬದುಕಿಹೆನೆಂಬರು
ಕಂಡು ಕಂಡು ನಂಬದಿಹುದುಚಿತವೇ ಇದು ಗುಣವಲ್ಲವಯ್ಯ
ಮುಂಗಯ್ಯ ಕಂಕಣಕ್ಕೆ ಕನ್ನಡಿಯು ಬೇಡ
ಲಿಂಗ ವಂಗದೊಳಿರ್ದು ಲಿಂಗದ ಪರಿಯೆಂತೆಂದು ಅನ್ಯರ ಕೇಳಬೇಡ
ತನ್ನಿಂದ ತಾನೇ ತಿಳಿದುಕೊಂಬುದು
ಇದನರಿದು ಬೇರೇ ಅರಸಬೇಡ
ಕಾಣೆನೆಂದು ಮನದಲ್ಲಿ ಮರುಗಬೇಡ
ಮುಂದೆ ಜನ್ಮವುಂಟೆಂದು ನೋಯಬೇಡ
ಇದುಕಾರಣ ತನ್ನ ಕರಸ್ಥಲದ ವಸ್ತುವ ತಾನರಿವಡೆ ತಾನೇ ಶಿವನು
ಇದು ಸತ್ಯ ಶಿವಬಲ್ಲನಯ್ಯ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೨

ವಟ ಬೀಜ ವೃಕ್ಷ ವಟ ವೃಕ್ಷಕೋಟಿಯ ನುಂಪ್ಪಂತೆ
ಸಟೆಯಿಂದಾದ ಅಜಾಂಡಕೋಟಿಗಳ ನುಂಗಿಪ್ಪ ಲಿಂಗವೇ
ದಿಟಪುಟ ಕಂಣುಮನಕರಸ್ಥಲಕ್ಕೆ ಬಂದು ಪ್ರಕಟವಾಗದೆ

ಮಝುಭಾಪು ಮಝುಭಾಪು ಲಿಂಗವೇ
"ನಚ ರೇಣು ನ ಚಕ್ಷು" ಎನಿಸುವ ಲಿಂಗವೇ
ಉತ್ಪತ್ತಿ ಸ್ಥಿತಿ ಲಯಕ್ಕೆ ಹೊರಗಾದೆನಯ್ಯ ನಿನ್ನ ಮುಟ್ಟಿದ ಕಾರಣ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೩

ಶ್ರೀ ಗುರುಸ್ವಾಮಿ ಕರುಣಿಸಿ ಕೊಟ್ಟಲಿಂಗವು
ಪಂಚಬ್ರಹ್ಮಮುಖವುಳ್ಳ ವಸ್ತುವೆಂದರಿವುದು
ಆ ಪಂಚಬ್ರಹ್ಮಮುಖಸಂಜ್ಞೆಯ ಭೇದವೆಂತೆಂದಡೆ—
ಆವುದಾನೊಂದು ಶಿವಸಂಬಂಧವಾದ ಪರಮ ತೇಜೋಲಿಂಗವು
ತನ್ನ ಭೋಗಾದಿಕಾರಣ ಮೂರ್ತಿಗಳಿಂದುಪಾಸ್ಯವಾದ
ಬ್ರಹ್ಮಾದಿ ತೃಣಾಂತವಾದ ದೇಹಿಗಳಿಂದಲೂ
ವ್ಯೋಮಾದಿ ಭೂತಂಗಳಿಂದಲೂ
ಇತ್ಯಾದಿ ಸಮಸ್ತ ತತ್ವಂಗಳಿಂದಲೂ
ಮೇಲಣ ತತ್ವವಪ್ಪುದೇ ಕಾರಣವಾಗಿ
ಪರವೆಂಬ ಸಂಜ್ಞೆಯದುಳ್ಳದಾಗಿಹುದು
ಅನಂತ ಕೋಟಿ ಬ್ರಹ್ಮಾಂಡಗಳ ತನ್ನೊಳಗಡಗಿಸಿಕೊಂಡು
ಸಮಸ್ತ ಜಗಜ್ಜನಕ್ಕೆ ತಾನೇ ಕಾರಣವಾಗಿ
ಅವ್ಯಕ್ತಲಕ್ಷಿತವಾದ ನಿಮಿತ್ತ ಗೂಢವೆಂಬ
ಸಂಜ್ಞೆಯದುಳ್ಳದಾಗಿಹುದು
ತಾನು ಶೂನ್ಯಶಿವತತ್ವಭೇದವಾಗಿ
ಅಯಸ್ಕಾಂತ ಸನ್ನಿಧಿಯಿಂದ ಲೋಹವೇ ಹೇಗೆ ಭ್ರಮಿಸುವುದೋ
ಹಾಗೆ ಬ್ರಹ್ಮಾದಿಗಳ ಪೃಥ್ವಮಲ ಮಧ್ಯದಲ್ಲಿದ್ದು
ತನ್ನ ಚಿಚ್ಛಕ್ತಿಯ ಸನ್ನಿಧಿಮಾತ್ರದಿಂದ
ಅಹಮಾದಿಗಳಿಂ ವ್ಯೋಮಾದಿಭೂತಗಳಿಂದ
ಸೃಷ್ಟಿಸುವುದಕ್ಕೆ ತಾನೇ ಕಾರಣವಪ್ಪುವುದರಿಂದ
ಶರೀರಸ್ಥವೆಂಬ ಸಂಜ್ಞೆಯದುಳ್ಳುದಾಗಿಹುದು
ತನ್ನ ಸೃಷ್ಟಿ ಶಕ್ತಿಯಿಂದುದಯವಾದ ಸಮಸ್ತ ಸಂಸಾರಾದಿ
ಪ್ರಪಂಚವು

ತನ್ನಿಂದವೇ ಕಾರಣವಪ್ಪುದರಿಂ
ಅನಾದಿವತ್ತೆಂಬ ಸಂಜ್ಞೆಯದುಳ್ಳದಾಗಿಹುದು
ತನ್ನ ಮಾಯಾಶಕ್ತಿಯಿಂದುದಯವಾದ
ಸ್ತ್ರೀಲಿಂಗ ಪುಲ್ಲಿಂಗ ನಪುಂಸಕಲಿಂಗವೆಂಬ
ತ್ರಿಲಕ್ಷಿತವಾದ ಸಮಸ್ತ ಪ್ರಪಂಚವು ವರ್ತಿಸುವುದಕ್ಕೆ
ತಾನೇ ಸ್ಥಾನವಾದಕಾರಣ
ಲಿಂಗಕ್ಷೇತ್ರವೆಂಬ ಸಂಜ್ಞೆಯುಳ್ಳದುದಾಗಿಹುದು
ಈ ಪ್ರಕಾರದಿಂ ಪರಬ್ರಹ್ಮಲಿಂಗವು
ಪಂಚಮುಖ ಸಂಜ್ಞೆಯನುಳ್ಳುದಾಗಿಹುದೆಂದರಿವುದು

ಅದೆಂತೆಂದಡೆ ಅದಕ್ಕೆ ವಾತುಲಾಗಮದಲ್ಲಿ—

" ಅಖಿಲಾರ್ಣವ ವಲಯಾನಾಂ ಲಿಂಗತತ್ವಂ ಪರಂ ತತಃ ॥
ಪರಂ ಗೂಢಂ ಶರೀರಸ್ಥಂ ಲಿಂಗಕ್ಷೇತ್ರಮನಾದಿಮತ್ ।
ಯಥಾದಿ ವ್ಯಕ್ಷರಂ ತೇಜಸ್ತಲ್ಲಿಂಗಂ ಪಂಚಸಜ್ಞಕಂ ॥

ಎಂಥೆನಿಸುವ ಲಿಂಗವು ಮತ್ತಂ ವಾಸಿಷ್ಠದಲ್ಲಿ—

ಪಿಂಡಬ್ರಹ್ಮಾಂಡಯೋರೈಕಂ ಲಿಂಗಸೂತ್ರಾತ್ಮನೋರಪಿ ।
ಸಬಾಹ್ಯಕೃತಯೋರೈಕ್ಯಂ ಕ್ಷೇತ್ರಜ್ಞಪರಮಾತ್ಮನೋಃ ॥

ಎಂದೆನಿಸುವ ಲಿಂಗವು ಮತ್ತಂ ಬ್ರಹ್ಮಾಂಡಪುರಾಣದಲ್ಲಿ—

ಅಧಿಷ್ಠಾನಂ ಸಮಸ್ತಸ್ಯ ಸ್ಥಾವರಸ್ಯ ಚರಸ್ಯ ಚ ।
ಜಗತೋ ಯದ್ಭವೇತ್ ತತ್ತ್ವಂ ತದ್ದಿವ್ಯಸ್ಥಲಮುಚ್ಯತೇ ॥

ಎಂದೆನಿಸುವ ಲಿಂಗವು ಮತ್ತಂ ಶಿವರಹಸ್ಯದಲ್ಲಿ

ಮಹಾಲಿಂಗಮಿದಂ ದೇವಿ ಮನೋಽತೀತಮಗೋಚರಮ್ ।
ನಿರ್ನಾಮಂ ನಿರ್ಗುಣಂ ನಿತ್ಯಂ ನಿರಂಜನಂ ನಿರಾಮಯಮ್ ॥

ಎಂದೆನಿಸುವ ಲಿಂಗವು ಮತ್ತಂ ಉತ್ತರವಾತೂಲದಲ್ಲಿ—

ಆದ್ಯಂತ ಶೂನ್ಯಮಮಲಂ ಪರಿಪೂರ್ಣ ಮೇಕಂ
ಸೂಕ್ಷ್ಮಂ ಪರಾತ್ಪರ ಮನಾಮಯಮಪ್ರಮೇಯಮ್ ॥
ಭಾವೈಕಗಮ್ಯಮಜಡಂ ಶಿವತತ್ವಮಾಹು ।
ಶ್ಚಿಚ್ಛಕ್ತಿಸಂಸ್ಫುರಣರೂಪಮಹಾತ್ಮಲಿಂಗಮ್ ॥

ಎಂದೆನಿಸುವ ಲಿಂಗವು ಮತ್ತಂ ಅಥರ್ವಣವೇದದಲ್ಲಿ—

ಶಿವಂ ಪರಾತ್ಪರಂ ಸೂಕ್ಷ್ಮಂ ನಿತ್ಯಂ ಸರ್ವಗತಾವ್ಯಯಮ್ ।
ಅನಿಂದಿತಮನೌಪಮ್ಯಮಪ್ರಮಾಣಮನಾಮಯಮ್ ॥
ಶುದ್ಧತ್ವಾಚ್ಛಿವ ಮುದ್ದಿಷ್ಟಂ ಪರಾದೂರ್ಧ್ವಂ ಪರಾತ್ಪರಮ್ ।

ಎಂದೆನಿಸುವ ಲಿಂಗವು ಮತ್ತಂ ಸಾಮವೇದದಲ್ಲಿ—

ಅನಂತಮವ್ಯಕ್ತಮಚಿಂತ್ಯಮೇಕಂ
ಹರಂ ತಮಾಕಾಂಬರಮಂಬರಾಂಗಮ್ ॥
ಲೋಕೈಕ ನಾಥಂ ಭುಜಗೇಂದ್ರಹಾರಂ
ಅಜಂ ಪುರಾಣಂ ಪ್ರಣಮಾಮಿ ನಿತ್ಯಮ್ ॥
ಅಣೋರಣೀಯಾನ್ ಮಹತೋ ಮಹೀಯಾನ್

ಎಂದೆನಿಸುವ ಲಿಂಗವು ಮತ್ತಂ ಶಿವಧರ್ಮ ಪುರಾಣದಲ್ಲಿ—

ಆಕಾಶಂ ಲಿಂಗಮಿತ್ಯಾಹುಃ ಪೃಥಿವೀ ತಸ್ಯಾದಿ ಪೀಠಿಕಾ ।
ಆಲಯಃ ಸರ್ವಭೂತಾನಾಂ ಲಯನಾಲ್ಲಿಂಗಮುಚ್ಯತೇ ॥

ಎಂದೆನಿಸುವ ಲಿಂಗವು ಮತ್ತಂ ಗಾರುಡ ಪುರಾಣದಲ್ಲಿ

ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಮ್ ।
ಲಿಂಗಬಾಹ್ಯಾತ್ಪರಂ ನಾಸ್ತಿ ತಸ್ಮಾಲ್ಲಿಂಗಂ ಪ್ರಪೂಜಯೇತ್ ॥

ಎಂದೆನಿಸಿರುವ ಲಿಂಗವು ಮತ್ತಂ ಯಜುರ್ವೇದದಲ್ಲಿ—

ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ ವಿಶ್ವತಃ ಪಾತ್ ।
ಸ ಬಾಹುಭ್ಯಾಂ ಧಮತಿ ಸಂಪತತ್ರೈರ್ದ್ಯಾವಾ ಭೂಮೀ ಜನಯನ್ನೇವ್ಯೈಕ ಏವ ॥

ಎಂದೆನಿಸುವ ಲಿಂಗವು ಮತ್ತಂ ಗಾಯತ್ರೀ—

ಓಂ ಭೂಃ ಓಂ ಭುವಃ ಓಂ ಸುವಃ ಓಂ ಮಹಃ
ಓಂ ಜನಃ ಓಂ ತಪಃ ಓಂ ಸತ್ಯಮ್ ॥
ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ
ಧಿಯೋ ನಃ ಪ್ರಚೋದಯಾತ್ ॥

ಎಂದೆನಿಸುವ ಲಿಂಗವು ಮತ್ತಂ ಸ್ಕಾಂದ ಪುರಾಣದಲ್ಲಿ—

ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಮ್ ।
ತದೇತಲ್ಲಿಂಗಮಿತ್ಯಾಹುರ್ಲಿಂಗತತ್ತ್ವಪರಾಯಣಾಃ ॥

ಎಂದೆನಿಸುವ ಲಿಂಗವು ಮತ್ತಂ ಜ್ಞಾನವೈಭವ ಖಂಡದಲ್ಲಿ—

ಲೀಯತೇ ಲಯಂ ಸಂಪ್ರೋಕ್ತಃ ಗಕಾರಃ ಸೃಷ್ಟಿರುಚ್ಯತೇ ।
ಲಯನಾದ್ಗಮನಾಚ್ಚೈವ ಲಿಂಗಶಬ್ದ ಇಹೋಚ್ಯತೇ ॥

ಎಂದೆನಿಸುವ ಲಿಂಗವು ಮತ್ತಂ ಮಹಿಮ್ನದಲ್ಲಿ—

“ ಚಕಿತಮಭಿಧತ್ತೇ ಶ್ರುತಿರಪಿ ”

ಎಂದೆನಿಸುವ ಲಿಂಗವು ಮತ್ತಂ ಶಿವಧರ್ಮೋತ್ತರದಲ್ಲಿ—

ನ ಜಾನಂತಿ ಪರಂ ಭಾವಂ ಯಸ್ಯ ಬ್ರಹ್ಮಸುರಾದಯಃ ।

ಎಂದೆನಿಸುವ ಲಿಂಗವು ಮತ್ತಂ ಪುರುಷ ಸೂಕ್ತದಲ್ಲಿ—

“ ಅತ್ಯತಿಷ್ಠದ್ದಶಾಂಗುಲಮ್ ”

ಎಂದೆನಿಸುವ ಲಿಂಗವು ಮತ್ತಂ ಉಪನಿಷತ್ತಿನಲ್ಲಿ—

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।

ಎಂದೆನಿಸುವ ಲಿಂಗವು ಮತ್ತಂ ಕೂರ್ಮ ಪುರಾಣದಲ್ಲಿ—

ವಾಚಾತೀತಂ ಮನೋತೀತಂ ಭಾವಾತೀತಂ ನಿರಂಜನಮ್ ।
ಅವರ್ಣಮಕ್ಷರಂ ಬ್ರಹ್ಮಸತ್ಯಂ ಧ್ಯಾಯಂತಿ ಯೋಗಿನಃ ॥

ಎಂದೆನಿಸುವ ಲಿಂಗವು ಮತ್ತಂ ಋಗ್ವೇದದಲ್ಲಿ—

ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ ।
ಅಯಂ ಮೇ ವಿಶ್ವಭೇಷಜಃ ಅಯಂ ಶಿವಾಭಿಮರ್ಶನಃ ॥
ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಗಮತ್ ।

ಎಂದೆನಿಸುವ ಲಿಂಗವು ಮತ್ತಂ ಉತ್ತರವಾತುಲದಲ್ಲಿ—

ಸ ಬಾಹ್ಯಾಂಭ್ಯಂತರಂ ಸಾಕ್ಷಾಲ್ಲಿಂಗಂ ಜ್ಯೋತಿ ಪರಂ ಸ್ವಕಮ್ ।
ತಿಲೇ ತೈಲಮಿವಾಭಾತಿ ಚಾರಣ್ಯಾಮಿವ ಪಾವಕಃ ॥
ಕ್ಷೀರೇ ಸರ್ಪಿರಿವ ಸ್ರೋತ್ರೇ ಜಂಭಃ ಸ್ಥಿರ ಆತ್ಮನಿ ।
ಏಕೋಽಯಂ ಪುರುಷೋ ವಿಶ್ವಸ್ತೈಜಸಃ ಪ್ರಾಜ್ಞರೂಪಕಃ ॥
ಸರ್ವೇಷ್ವಂಗೇಷು ಸಂಯುಕ್ತ ಉಪಾಸ್ತೇ ಲಿಂಗಮದ್ವಯಮ್ ।

ಎಂದೆನಿಸುವ ಲಿಂಗವು ಮತ್ತಂ ಶಿವರಹಸ್ಯದಲ್ಲಿ—

ಹರರೂಪಂ ಕಾಯಸಂಬಂಧಂ ಗುರುರೂಪಂ ಪ್ರಾಣಸಂಯುತಮ್ ।
ಅಶರೀರಾತ್ಮಸಂಬಂಧಂ ಗುರುಶಿಷ್ಯಾನುಗ್ರಹಂ ಮತಮ್ ॥

ಎಂದೆನಿಸುವ ಲಿಂಗವು ಮತ್ತಂ ಲೈಂಗ್ಯದಲ್ಲಿ—

ಅನಯೋರ್ದೃಕ್ಷಿ ಸಂಯೋಗಾಜ್ಜಾಯತೇ ಜ್ಞಪ್ತಿರೂಪಿಣೀ ।
ತಯೈವ ವೇದದೀಕ್ಷಾಸ್ಯಾನ್ಮಂತ್ರರೂಪೇಣ ತಾಂ ಶೃಣು ॥

ಎಂದೆನಿಸುವ ಲಿಂಗವು ಮತ್ತಂ ಸೌರಪುರಾಣದಲ್ಲಿ—

ಹಸ್ತಮಸ್ತಕ ಸಂಯೋಗಾತ್ಕಲಾವೇದೇತಿ ಗೀಯತೇ ।
ಗುರುಣೋದೀರಿತಾ ಕರ್ಣೇ ಯಾ ಸಾಮಾಂತ್ರೀತಿ ಕಥ್ಯತೇ ॥
ಶಿಷ್ಯ ಪಾಣಿತಲೇ ದತ್ತಾ ಯಾ ದೀಕ್ಷಾ ಸಾ ಕ್ರಿಯೋಚ್ಯತೇ ।

ಎಂದೆನಿಸುವ ಲಿಂಗವು ಮತ್ತಂ ಕಾಳಿಕಾ ಖಂಡದಲ್ಲಿ—

ಅಂಗಂ ಚ ಲಿಂಗಂ ಚ ಮುಖಂ ಚ ಹಸ್ತಃ ।
ಶಕ್ತಿಶ್ಚ ಭಕ್ತಿಶ್ಚ ತಥಾರ್ಪಣಂ ಚ ।
ಆನಂದ ಮೇವ ಸ್ವಯಮರ್ಪಣಂ ಚ
ಪ್ರಸಾದ ರೂಪೇಣ ಭವೇತ್ರಿ ತತ್ವವತ್ ॥

ಎಂದೆನಿಸುವ ಲಿಂಗವು ಮತ್ತಂ ಶಂಕರ ಸಂಹಿತೆಯಲ್ಲಿ—

ತವೇವ ಹಸ್ತಾಂಬುಜಪೀಠಮಧ್ಯೇ
ನಿಧಾಯ ಲಿಂಗಂ ಪರಮಾತ್ಮ ಚಿಸ್ವವತ್ ।
ಸಮರ್ಚಯೇದೇಕದಿಯೋಪಚಾರೈ ।
ರ್ನರಶ್ಚ ಬಾಹ್ಯಾಂತರ ಭೇದ ಭಿನ್ನವತ್ ॥

ಎಂದೆನಿಸುವ ಲಿಂಗವು ಮತ್ತಂ ವೀರಾಗಮದಲ್ಲಿ—

ಭಾವಸ್ಥಾನಂಗ ಲಿಂಗೇಷು ಪ್ರಾಣೇ ಲಿಂಗಾಂತರ ದ್ವಯವತ್ ।
ಸನ್ನಿಧಾನಾತ್ಪರಂ ಲಿಂಗಂ ಸ್ಥಾಪ್ಯಂ ತತ್ರೈವ ಧೀಮತಾ ॥

ಎಂದೆನಿಸುವ ಲಿಂಗವು ಮತ್ತಂ ಶಿವರಹಸ್ಯದಲ್ಲಿ—

ಕರ್ಣದ್ವಾರೇ ಯಥಾ ವಾಕ್ಯಂ ಗುರುಣಾ ಲಿಂಗಮೀರ್ಯತೇ ।
ಇಷ್ಟಃ ಪ್ರಾಣಸ್ತಥಾ ಭಾವಸ್ತ್ರಿಧಾಮೈಕ್ಯಂ ವರಾನನೇ ॥
ಏಕಮೂರ್ತಿಸ್ತ್ರಯೋ ಭಾಗಾ ಗುರುರ್ಲಿಂಗಂತು ಜಂಗಮಃ ।
ಜಂಗಮಂ ಚ ಗುರುರ್ಲಿಗಂ ತ್ರಿವಿಧಂ ಲಿಂಗ ಮುಚ್ಯತೇ ॥

ಎಂದೆನಿಸುವ ಲಿಂಗವು ಗುರುಲಿಂಗಜಂಗಮರೂಪಾಗಿ
ಎನ್ನ ಕರಸ್ಥಲಕ್ಕೆ ಬಿಜಯಂಗೈದು
ಕರತಲಾಮಲಕವಾಗಿ ತೋರುತ್ತೈದಾನೆ
ಆಹಾ ಎನ್ನ ಪುಣ್ಯವೇ ಅಹಾ ಎನ್ನ ಭಾಗ್ಯವೇ
ಅಹಾ ಎನ್ನ ಸತ್ಯವೇ ಅಹಾ ಎನ್ನ ನಿತ್ಯವೇ
ಶಿವ ಶಿವ ಮಹಾದೇವ ಮಹಾದೇವ ನಿನೇ ಬಲ್ಲೆ ನಿನೇ ಬಲ್ಲೆ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ಶಿವಲಿಂಗಾರ್ಚನ ಸ್ಥಲ ೮

ಇಂತೀ ಪ್ರಕಾರದಿಂ ಶ್ರೀಗುರು ಕೃಪೆಯಿಂದ ವ್ಯಕ್ತೀಕರಿಸಿಕೊಟ್ಟ ಲಿಂಗವೇ ಕೇವಲ ಬ್ರಹ್ಮವೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಶಿವಲಿಂಗಕ್ಕೆ ಅರ್ಚನೆ ಪೂಜನೆಯ ಮಾಡಬೇಕೆಂಬುದಂ ತಿಳುಪಲೋಸ್ಕರ ನುಡಿದ ವಚನಂಗಳು.

ಶಿವಧರ್ಮೇ—

> ಭಿತ್ವಾ ಭಿತ್ವಾ ಚ ಭೂತಾನಿ ಹತ್ವಾ ಸರ್ವಮಿದಂ ಜಗತ್ ।
> ಯಜೇದೇಕಂ ವಿರೂಪಾಕ್ಷಂ ಸ ಚ ಪಾಪೈರ್ನ ಲಿಪ್ಯತೇ ॥ ೧ ॥

ಪ್ರಾಣಿಗಳನ್ನು ಕತ್ತರಿಸಿದಾತ ಸೀಳಿದಾತ ಎಲ್ಲಾ ಜಗತ್ತನ್ನು ಕೊಂದಾತ ಒಬ್ಬ ಶಿವನನ್ನು ಪೂಜಿಸದರೆ ಪಾಪಗಳಿಂದ ಲೇಪಿಸುತ್ತಿರನು.

ಲೈಂಗೇ—

> ಕುರ್ವನ್ನಪಿ ಸದಾ ಪಾಪಂ ಸಕೃದೇವಾರ್ಚಯೇಚ್ಛಿವಮ್ ।
> ಲಿಪ್ಯತೇ ನ ಚ ಪಾಪೈಸ್ತು ಯಾತಿ ಮಾಹೇಶ್ವರಂ ಪದಮ್ ॥ ೨ ॥

ಆವನೊಬ್ಬನು ಆವಾಗಲೂ ಪಾಪವ ಮಾಡಿದಾತ ಒಂದು ಬಾರಿಯಾದರೂ ಶಿವಪೂಜೆಯ ಮಾಡುವಾತನು ಪಾಪಂಗಳಿಂದ ಲೇಪಿಸಲ್ಪಡನು. ಮಾಹೇಶ್ವರ ಸಂಬಂಧವಾದ ಪದವನ್ನೈದುವನು.

> ಯೇ ಸದಾ ಸಕೃದಪ್ಯತ್ರ ಪೂಜಯಂತಿ ತ್ರಿಲೋಚನಮ್ ।
> ತೇ ದನ್ಯಾಸ್ತೇ ಮಹಾತ್ಮಾನಸ್ತೇ ಕೃತಾರ್ಥಾಶ್ಚ ಪಂಡಿತಾಃ ॥ ೩ ॥

ಆರು ಒಂದು ಬಾರಿಯಾದರೂ ಶಿವನಂ ಪೂಜಿಸುವರೋ ಅವರೇ ಧನ್ಯರು ಅವರೇ ಮಹಾತ್ಮರು ಅವರೇ ಕೃತಾರ್ಥರು ಅವರೇ ವಿದ್ವಾಂಸರು.

> ಭವನಾನಿ ಮನೋಜ್ಞಾನಿ ವಿಭ್ರಮಾಭರಣಸ್ತ್ರಿಯಃ ।
> ಧನಂ ಚ ತೃಪ್ತಿಪರ್ಯಂತಂ ಶಿವಪೂಜಾವಿಧೇಃ ಫಲಮ್ ॥ ೪ ॥

ಮನೋಹರವಾದ ಮನೆಗಳು ವಿಲಾಸಾಭರಣವುಳ್ಳ ಸ್ತ್ರೀಯರುಗಳು ಸಾಕೆಂಬುವಷ್ಟು ದ್ರವ್ಯವು ಇಷ್ಟೂ ಶಿವಪೂಜೆಯ ಫಲಗಳು.

ಪೂಜಯಾಂ ಭಕ್ತಿಮಾಪ್ನೋತಿ ಪೂಜಯಾ ಮುಕ್ತಿಮಾಪ್ನುಯಾತ್ ।
ಪೂಜಯಾ ಸದೃಶಂ ಪುಣ್ಯಂ ನಾಸ್ತಿ ಲೋಕತ್ರಯೇಽಪಿ ॥ ೫ ॥

ಪೂಜೆಯಿಂದ ಭಕ್ತಿಯನ್ನೈದುವನು ಪೂಜೆಯಿಂದ ಮುಕ್ತಿಯನ್ನೈದುವನು ಪೂಜೆಯೊಡನೆ ಸರಿಯಾದ ಪುಣ್ಯವು ಮೂರು ಲೋಕಂಗಳಲ್ಲಿಯೂ ಇಲ್ಲ.

## ವಚನಗಳು

೧

ಶಿವಲಿಂಗದ ಮಹಾತ್ಮೆಯನು ಶಿವಲಿಂಗದ ಧರ್ಮವನು
ಶಿವಲಿಂಗದ ನಿಶ್ಚಯವನು ಆವಾರಯ್ಯಾ ಬಲ್ಲವರು
ಆವಾರಯ್ಯಾ ಅರಿವರು ಶ್ರೀಗುರುತೋರಿಕೊಡದನ್ನಕ್ಕರ

" ಸರ್ವೈಶ್ವರ್ಯ ಸುಸಂಪನ್ನ ಮಾದ್ಯಂ ತತ್ತ್ವಾಧಿಕಂ ಧ್ರುವಮ್ "
ಎಂದುದಾಗಿ

"ಅಣೋರಣೀಯಾನ್ ಮಹತೋ ಮಹೀಯಾನ್ " ಎಂದುದಾಗಿ

" ಯತೋ ವಾಚೋ ನಿವರ್ತಂತೇ " ಎಂದುದಾಗಿ

" ಅತ್ಯತಿಷ್ಠದ್ದಶಾಂಗುಲಮ್ " ಎಂದುದಾಗಿ

ಈ ಪ್ರಕಾರದಲ್ಲಿ ವೇದಾಗಮಂಗಳು ಸಾರುತ್ತಿರಲು
ಲಿಂಗವು ಹರಿಬ್ರಹ್ಮಾದಿದೇವ ದಾನವ ಮಾನವರಿಗೆಯೂ
ಅರಿಯಬಾರದು

" ಚಕಿತಮಭಿಧತ್ತೇ ಶ್ರುತಿರಪಿ " ಎಂದುದಾಗ

ವೇದ ಪುರುಷರಿಗೆಯೂ ಅರಿಯಬಾರದು
ಅರಿಯಬಾರದ ವಸ್ತುವ ರೂಪಿಸಬಾರದು
ರೂಪಿಸಬಾರದ ವಸ್ತುವ ಪೂಜಿಸಬಾರದು
ಪೂಜೆಗಿಲ್ಲವಾಗಿ ಭಕ್ತಿಗಿಲ್ಲ ಭಕ್ತಿಗಿಲ್ಲವಾಗಿ ಪ್ರಸಾದಕ್ಕಿಲ್ಲ
ಪ್ರಸಾದಕ್ಕಿಲ್ಲವಾಗಿ ಮುಕ್ತಿಗಿಲ್ಲ ಮುಕ್ತಿಗಿಲ್ಲದೇ

ಜೀವ ದಾನವಮಾನವರೆಲ್ಲರೂ ಕೆಡುವರು
ಕೆಡದಂತೆ ಮಾಡಿ ರಕ್ಷಿಸಿದನು ಶ್ರೀಗುರು ಸದ್ಗುರು ಮಹಾಗುರು

" ನಗುರೋರಧಿಕವರ್ " ಎಂದುದಾಗಿ

ಮಹಾಘನಗುರು ಶಾಂತಮೂರ್ತಿ ಕೃಪಾಮೂರ್ತಿ ಲಿಂಗ
ಪ್ರತಿಷ್ಠೆಯಂ ಮಾಡಿದನು

ಅದೆಂತೆನಲು ಕೇಳಿರೆ—

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ
ನಾದ ಬಿಂದು ಕಲಾತೀತಂ ಗುರುಣಾ ಲಿಂಗ ಮುದ್ಭವಮ್ ॥

ಎಂದುದಾಗಿ—ಸದ್ಗುರುರ್ಭಾವಲಿಂಗಂ ಚ ಸರ್ವ ಬ್ರಹ್ಮಾಂಡವಾಸಿನಾಮ್ ।
ಸರ್ವಲೋಕಸ್ಯ ವಾಸಸ್ಸ್ಯಾನ್ಮುಕ್ತಿ ಕ್ಷೇತ್ರಸು ವಾಸಿನಾಮ್ ।
ಎಂದುದಾಗಿ—ಗುರುಣಾ ದೀಯತೇ ಲಿಂಗಂ ಗುರುಣಾ ದೀಯತೇ ಕ್ರಿಯಾ ।
ಗುರುಣಾ ದೀಯತೇ ಮಂತ್ರಃ ಸದ್ಗುರುಃ ಸರ್ವಕಾರಣಮ್ ॥

ಎಂದುದಾಗಿ ಸರ್ವಲೋಕಕ್ಕೆಯೂ ಸರ್ವರಿಗೆಯೂ
ಲಿಂಗ ಪ್ರತಿಷ್ಠೆಯಂ ಮಾಡಿಕೊಟ್ಟನು

ಅರೂಪೋ ಭಾವನಂ ನಾಸ್ತಿ ಯದ್ದೃಷ್ಟಂ ತದ್ವಿನಶ್ಯತಿ ।
ದೃಷ್ಟ್ವಾದೃಷ್ಟ್ವಾ ಸ್ವರೂಪತ್ವಂ ತಥಾಪ್ಯೇವಂ ಸದಾಭ್ಯಸೇತ್ ॥

ಎಂದುದಾಗಿ ನಿಃಕಲ ಅರೂಪ ನಿರವಯ ಧ್ಯಾನಪೂಜೆಗನುವಲ್ಲ
ಸಕಲ ತತ್ವಸಾಮಾನ್ಯವೆಂದು
ಸಕಲ ನಿಃಕಲವನೊಂದಾಗಿ ಲಿಂಗವ ಮಾಡಿದನು

ಲಿಂಗಂ ತಾಪತ್ರಯಹರಂ ಲಿಂಗಂ ದಾರಿದ್ರ್ಯನಾಶನಮ್ ।
ಲಿಂಗಂ ಪಾಪ ವಿನಾಶಂ ಚ ಲಿಂಗಂ ಸರ್ವಾರ್ಥಸಾಧನಮ್ ॥

ಎಂದುದಾಗಿ ಲಿಂಗವು ಪರಂಜ್ಯೋತಿ
ಲಿಂಗವು ಪರಬ್ರಹ್ಮವೆಂದು ಲಿಂಗವನೆ ಪೂಜಿಸಿ
ಭಕ್ತಿ ಪ್ರಸಾದ ಮುಕ್ತಿಯ ಪಡೆಯಲೆಂದು
ಮಹಾಘನ ಗುರು ಲಿಂಗ ಪ್ರತಿಷ್ಠೆಯಂ ಮಾಡಿ ತೋರಿಕೊಟ್ಟನು.

ಅದೆಂತೆಂದಡೆ—

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ ।
ಸರ್ವೇ ಲಿಂಗಾರ್ಚನರತಾ ಜಾತಾಸ್ತೇ ಲಿಂಗಪೂಜಕಾಃ ॥

ಎಂದುದಾಗಿ ಮತ್ತಂ—

ಗೌರೀಪತಿರುಮಾನಾಥ ಅಂಬಿಕಾಪಾರ್ವತೀ ಪತಿಃ ।
ಗಂಗಾಪತಿರ್ಮಹಾದೇವೋ ಸತತಂ ಲಿಂಗಪೂಜಕಾಃ ॥

ಎಂದುದಾಗಿ ಈ ಮಹಾಪುರುಷರಪ್ಪ
ದೇವಗಣ ರುದ್ರಗಣ ಪ್ರಮಥಗಣಂಗಳು
ವಿಷ್ಣ್ವಾದಿ ದೇವದಾನವ ಮಾನವಾದಿಗಳು
ಮಹಾಲಿಂಗವನೇ ಧ್ಯಾನಿಸಿ ಪೂಜಿಸಿ
ಪರಮ ಸುಖ ಪರಿಣಾಮವಡೆದರೆಂದು
ಮಾಡಿದನು ಕೇವಲ ಸದ್ಭಕ್ತ ಜನಂಗಳಿಗೆ ಅದೆಂತೆಂದಡೆ—

"ಇಷ್ಟಃ ಪ್ರಾಣಸ್ತಥಾ ಭಾವಸ್ತ್ರೀಧಾಮೇಕಂ ಪರಾಸನೇ"

ಎಂದುದಾಗಿ ಆ ಸದ್ಗುರು ಆ ಪರಮಶಿವನ ತತ್ಪ್ರಾಣವನು ಏಕೀಭವಿಸಿ
ಸದ್ಭಾವದಿಂದ ಲಿಂಗಪ್ರತಿಷ್ಠೆಯಂ ಮಾಡಿ
ಪ್ರಾಣಲಿಂಗವಾಗಿ ಕರಸ್ಥಲದಲ್ಲಿ ಬಿಜಯಂಗೈದು
ಅಂತರಂಗ ಬಹಿರಂಗ ಭರಿತನಾಗಿ ಪೂಜೆಗೊಳಲೆಂದು ಕರುಣಿಸಿದನು
ಮತ್ತಂ "ಏಕಮೂರ್ತಿಸ್ತ್ರಿಧಾ ಭೇದಂ" ಎಂದುದಾಗಿ
ಗುರುಲಿಂಗ ಜಂಗಮಲಿಂಗ ಪರಶಿವಲಿಂಗ ಒಂದೇ

ದೇಶಿಕಶ್ಚರಲಿಂಗಂ ಚ ತ್ರಿವಿಧಂ ಲಿಂಗಮುಚ್ಯತೇ। ಎಂದುದಾಗಿ

ಲಿಂಗಧರ್ಮವನು ಲಿಂಗದ ಸ್ವರೂಪವನು ಲಿಂಗದ ನಿಶ್ಚಯವನು
ಆದಿಯಲ್ಲಿ ಧ್ಯಾನ ಪೂಜೆಯ ಮಾಡಿದವರನು
ಭಕ್ತಿಪ್ರಸಾದ ಮುಕ್ತಿಯ ಪಡೆದವರನು
ವೇದಶಾಸ್ತ್ರಪುರಾಣಾಗಮಂಗಳು ಹೇಳುತ್ತಿವೆ
ಶಿವನ ವಾಕ್ಯಂಗಳಿಗೆ ಇದೇ ದಿಟ

ಮನವೇ ನಂಬು ಕೆಡಬೇಡ ಕೆಡಬೇಡ
ಮಹಾ ಸದ್ಭಕ್ತರ ನಂಬುವುದು
ಶಿವಲಿಂಗಾರ್ಚನೆಯ ನಿರಂತರಂ ಮಾಡುವುದು
ಇದು ನಿಶ್ಚಯ ಶಿವನು ಬಲ್ಲನಯ್ಯಾ
ಈ ಕ್ರಿಯೆಯಲ್ಲಿ ಲಿಂಗಜಂಗಮವನರಿದು ವಿಶ್ವಾಸವಂ ಮಾಡಿ
ಕೇವಲ ಸದ್ಭಕ್ತಿ ಕ್ರಿಯೆಯ ಮರ್ಮವನರಿದು
ಸದ್ಭಾವದಿಂ ಲಿಂಗಾರ್ಚನೆಯ ಮಾಡುವುದಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ಲಿಂಗಾರ್ಪಿತ ಸ್ಥಲ ೯

ಈ ಪ್ರಕಾರದಿಂ ಲಿಂಗಾರ್ಚನೆಗೆ ಸಮವಾದ ಪುಣ್ಯವಿಲ್ಲೆಂಬುದನರಿದು ಶಿವಭಕ್ತರು ವಿಶ್ವಾಸದಿಂದ ಲಿಂಗಾರ್ಚನೆಯ ಮಾಡಬೇಕೆಂಬುದಂ ಪ್ರತಿಷ್ಠೆಯಿಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಶಿವಲಿಂಗಾರ್ಚನೆಯಿಂ ಮಾಡಿದಾತನು ಸಕಲ ದ್ರವ್ಯಂಗಳಂ ಲಿಂಗಕ್ಕೆ ಕೊಟ್ಟಲ್ಲದೆ ಕೊಳಬಾರದೆಂಬುದಂ ಅರುಪಲೋಸ್ಕರಂ ನುಡಿದ ವಚನಂಗಳು.

ವೀರಭದ್ರಪುರಾಣೇ—

> ಸ್ನಾನೋದಕಂ ಮುಖಸ್ನಾನಂ ಗಂಡೂಷಂ ಪೀತಮೇವ ಚ ।
> ನ ಗ್ರಾಹ್ಯಂ ಚ ಮನೋಗ್ರಾಹ್ಯಮನ್ಯಗ್ರಾಹ್ಯಂ ವಿವರ್ಜಯೇತ್ ॥೧॥

ಲಿಂಗಕ್ಕೆ ಮಜ್ಜನಕ್ಕೆರೆದುದಕವಂ ತಾನು ಜಳಕವಂ ಮಾಡುವುದು ಲಿಂಗಕ್ಕೆ ಮುಕ್ಕುಳಿಸ ಕೊಟ್ಟುದಕವಂ ತಾನು ಮುಕ್ಕುಳಿಸುವುದು ಲಿಂಗಕ್ಕೆ ಅರ್ಪಿಸಲು ಕೊಟ್ಟುದಂ ತಾನು ಕೊಂಬುದು ಉಳದವಂ ಕೊಳಲಾಗದು ಶಿವಭಕ್ತನು.

ಲಿಂಗಪುರಾಣೇ—

> ಲಿಂಗಾಭಿಷೇಕಕೃತ್ತ್ವೋಯಂ ಯತ್ತು ಲಿಂಗೋದಕಂ ಭವೇತ್ ।
> ತತ್ಪಿಬೆಲ್ಲಿಂಗ ಶರಣೋ ಹ್ಯನ್ಯಂ ತು ಮಧುಪಾನವತ್ ॥೨॥

ಲಿಂಗಕ್ಕೆ ಅಭಿಷೇಕವಂ ಮಾಡಿದುದು ಲಿಂಗತೀರ್ಥ ಲಿಂಗಶರಣನಾದಾತನು ಆ ಲಿಂಗತೀರ್ಥವನೆ ಕೊಂಬುದು ಮತ್ತೊಂದ ಕೊಂಡರೆ ಸುರಾಪಾನವಂ ಮಾಡಿದ ಸಮಾನವು

> ಸರ್ವಂ ಚ ತೃಣಕಾಷ್ಠಂ ಚ ಭಕ್ಷ ಭೋಜ್ಯಾನು ಲೇಪನವ್ ।
> ಲಿಂಗಾರ್ಪಿತ ಪ್ರಸಾದಂ ಚ ಅನ್ಯ ಮಾಂಸಂತು ಕೀಟಕವ್ ॥೩॥

ಹುಲ್ಲುಕಡ್ಡಿ ಮೊದಲಾಗಿ ಭಕ್ಷ್ಯಭೋಜ್ಯ ಮೊದಲಾಗಿ ಪೂಸಿಕೊಂಬ ಅನುಲೇಪನ ಮೊದಲಾಗಿ ಸಮಸ್ತವೆಲ್ಲವನು ಲಿಂಗಾರ್ಪಿತವ

ಮಾಡಿಕೊಂಬುದು ಅಲ್ಲದೆ ಕೊಂಡರೆ ಮಾಂಸವನು ಹುಳುವನು ಕೊಂಡ ಸಮಾನ.

ಕೂರ್ಮಪುರಾಣೇ—

ಪತ್ರಂ ಪುಷ್ಪಂ ಫಲ ತೋಯಂಯನ್ನ ಪಾನಾದ್ಯ ಮೌಷಧಮ್ ।
ಲಿಂಗಾರ್ಪಿತಂ ವಿನಾ ಭುಂಕ್ತೇ ಯಥಾಸ್ವಾದಂ ತು ಕಿಲ್ಬಿಷಮ್ ॥೪॥

ಪತ್ರಿಯಾಗಲಿ ಪುಷ್ಪವಾಗಲಿ ಹಣ್ಣಾಗಲಿ ಉದಕವಾಗಲಿ ಅನ್ನ ಪಾನಾದಿ ಔಷಧಿ ಮೊದಲಾಗಿ ಸಮಸ್ತ ಪದಾರ್ಥಂಗಳನ್ನು ತನ್ನ ಪ್ರಾಣ ಲಿಂಗಕ್ಕೆ ಅಥವಾ ಗುರು ಜಂಗಮಕ್ಕೆ ಸಮರ್ಪಿಸಿದಲ್ಲದೆ ಕೊಳಲಾಗದು. ಅಂತಲ್ಲದೆ ಕೊಂಡರೆ ಕಿಲ್ಬಿಷವ ಕೊಂಡ ಸಮಾನವು.

ಅಸಮರ್ಪ್ಯ ಯದೀಶಾಯ ವಸ್ತು ಕಿಂಚಿತ್ಕದಾಚನ ।
ಕಥಂಚಿನ್ನೋಽಪ ಭುಂಜೀಯಾಚ್ಛಿವ ಭಕ್ತಿಪರೋ ನರಃ ॥೫॥

ಲಿಂಗಾರ್ಪಿತವಂ ಮಾಡಿದಲ್ಲದೆ ಆವ ವಸ್ತುವಂ ಒಂದುವೇಳೆಯಾದರೂ ಕೊಳಲಾಗದು. ಶಿವಭಕ್ತನಾದಾತನು ಮರೆದಾದಡಂ ಕೊಳಲಾಗದು.

## ವಚನಗಳು

೧

ಶಿವಲಿಂಗಾರ್ಚನೆಯುಂ ಮಾಡದೆ ಶಿವಪೂಜೆಯುಂ ಮಾಡದೆ
ಲಿಂಗಾರ್ಪಿತವ ಮಾಡದೆ ಉಂಬುವರೆಲ್ಲರು
ಸತ್ತಹೆಣನನು ಮಲವನು ಒಂದಾಗಿ ತಿಂಬರಯ್ಯಾ
ಅಲ್ಲಿ ಏನೂ ಸಂದೇಹವಿಲ್ಲವಾಗಿ, ಅದಕ್ಕೆ ಶಿವಧರ್ಮ ಶಾಸ್ತ್ರೇ—

ಯಸ್ತು ಲಿಂಗಾರ್ಚನಂ ತ್ಯಕ್ತ್ವಾ ಭುಂಗ್ತೇ ವಿಟ್‌ಕ್ರಿಮಿ ಕೀಟಭುಕ್ ।
ನರೋ ನರಕಗಾಮೀಸ್ಯಾತ್ಸರ್ವಲೋಕ ಬಹಿಷ್ಕೃತಃ ॥
ಅಕೃತ್ವಾ ಪೂಜನಂ ಶಂಭೋ ರ್ಯೋ ಭುಂಗ್ತೇ ಪಾಪಕೃದ್ದ್ವಿಜಃ ।
ಕುಣಪಂ ಚ ಮಲಂಚೈವ ಸಮಶ್ನಾತಿ ದಿನೇ ದಿನೇ ॥

ಎಂದುದಾಗಿ ಲಿಗಾರ್ಪಿತವಿಲ್ಲದೆ ಕೊಂಬ ಕರ್ಮಿಗಳಿಗೆ
ಎಂದೆಂದಿಗೂ ನರಕ ತಪ್ಪದಯ್ಯಾ

ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ

೨

ಶಿವನ ಪಾದೋದಕವಲ್ಲದೆ ಕೊಳಲಾಗದೆಂದುದು ವೇದ
ಶಿವನ ಪ್ರಸಾದವಲ್ಲದೆ ಉಣಲಾಗದೆಂದುದು ವೇದ
ಜಾಬಾಲಶಾಖಾಯಾಂ—

ರುದ್ರೇಣಾತ್ತಮಶ್ನಂತಿ ರುದ್ರೇಣ ಪೀತಂ ಪಿಬಂತಿ
ರುದ್ರೇಣಾಘ್ರಾತಂ ಜಿಘ್ರಂತಿ ಬಸ್ಮಾದ್ಬ್ರಾಹ್ಮಣೋ
ವಿದ್ವಾನ್ನಿರ್ಮಾಲ್ಯಮೇವ ಸದಾಭಕ್ಷಯೇತ್ ।
ನಿರ್ಮಾಲ್ಯಮೇವಾಶ್ನೀಯಾತ್ । ಎಂದುದಾಗಿ

ಇದನರಿದು ಶಿವನ ಪಾದೋದಕ ಪ್ರಸಾದವ ಕೊಂಬಾತನೇ ಸದ್ಬ್ರಾಹ್ಮಣ
ಆತನೇ ವಿದ್ವಾಂಸನು ಆತನೇ ಎಲ್ಲವ ಬಲ್ಲ ಸರ್ವಜ್ಞನಯ್ಯಾ
ಇಂತಲ್ಲದೆ ಶಿವಪಾದೋದಕವಲ್ಲದೆ
ಉಳಿದಾದ ಉದಕವ ಕೊಂಡರೆ ಸುರಾಪಾನವ ಕೊಂಡ ಸಮಾನ
ಶಿವನ ಪ್ರಸಾದವಲ್ಲದೆ ಕೊಂಡರೆ ನಾಯ ಮಾಂಸವ ಕೊಂಡ ಸಮಾನ
ತಪ್ಪದು ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ

೩

ಶಿವಲಿಂಗಾರ್ಪಿತವಲ್ಲದೆ ಕೊಂಬ ಕರ್ಮಿಗಳು ನೀವು ಕೇಳಿ ಭೋ
ಅನರ್ಪಿತವು ಏನಮಾಡದು ಅನರ್ಪಿತವು ಏನಗ್ಗೆವುದೆಂದಡೆ
ಅದಕ್ಕೆ ಆಗಮವು ಹೇಳುತ್ತಿದೆ—

ಅಸಮರ್ಪ್ಯ ಪದೇ ಶಂಭೋ ಭುಂಕ್ತೇ ಖಾದತಿ ಪಾತಿ ಚ ॥
ಶ್ವಮಾಂಸ ಮಕ್ಷಿಮೂತ್ರಂ ಚ ಭುಂಕ್ತೇ ಖಾದತಿ ಪಾತಿ ಚ ॥

ಎಂದುದಾಗಿ ಇದನರಿದು ಮಹಾಲಿಂಗ ಕಲ್ಲೇಶ್ವರ ದೇವರಿಗೆ ಸಮರ್ಪಿಸದೆ ಕೊಂಡರೆ

ತನ್ನ ಮಾಂಸ ತನ್ನೆಲು ತನ್ನಮಲಮೂತ್ರವ ಕುಡಿದು
ನುಂಗಿದಂತೆ ಕಾಣಿರಣ್ಣಾ

೪

ತನ್ನ ಶ್ರೀಗುರುವಿಂಗೆ ಸಕಲ ಪದಾರ್ಥವ ಕೊಟ್ಟುಕೊಂಡರೆ
ಪ್ರಸಾದ
ತನ್ನ ಪ್ರಾಣಲಿಂಗಕ್ಕೆ ಸಕಲಪದಾರ್ಥವ ಕೊಟ್ಟು ಕೊಂಡರೆ
ಪ್ರಸಾದ
ಜಂಗಮಕ್ಕೆ ಸಕಲಪದಾರ್ಥಂಗಳ ಕೊಟ್ಟು ಕೊಂಡರೆ ಪ್ರಸಾದ
ಇದೇ ಪ್ರಸಾದದ ಆದಿಕಂಡಯ್ಯಾ
ಮುನ್ನಾದಿಯ ಪುರಾತನರು ನಡೆದ ಪಥವು ಕಂಡಯ್ಯಾ
ಇಂತೀ ಶ್ರೀಗುರುವಿಂಗೆ ಕೊಡದೆ ಲಿಂಗಕ್ಕೆ ಜಂಗಮಕ್ಕೆ ಕೊಡದೆ
ತಾನೇ ಉಂಡನಾದಡೆ ಹುಳುಗೊಂಡದಲ್ಲಿಕ್ಕುವ
ನಮ್ಮ ದೇವರಾಯಸೊಡ್ಡಳಾ

## ಪಾದೋದಕ ಮಾಹಾತ್ಮ್ಯ ಸ್ಥಲ ೧೦

ಇಂತೀ ಪ್ರಕಾರದಿಂ ಶಿವಭಕ್ತರು ಸಕಲ ದ್ರವ್ಯ ಪದಾರ್ಥಗಳನು ಶಿವಲಿಂಗಕ್ಕೆ ಕೊಟ್ಟು ಕೊಳಬೇಕೆಂಬುದಂ ಪ್ರತಿಷ್ಠೆಯಂ ಮಾಡಿನುಡಿದರ್ಮ ಹಾಪುರಾತನರು.

ಇಂತಹ ಲಿಂಗಾರ್ಪಿತವಂ ಮಾಡಿದಾತನು ಲಿಂಗಪಾದೋದಕವಲ್ಲದೆ ಕೊಳಲಾಗದೆಂಬುದಂ ಅರುವಲೋಸುಗ ನುಡಿದ ವಚನಂಗಳು,

ಶಿವಧರ್ಮೇ—

ಅಕಾಲ ಮೃತ್ಯುಮಥನಂ ಸರ್ವವ್ಯಾಧಿವಿನಾಶನಮ್ ।
ಸರ್ವಪಾಪೋಪಶಮನಂ ಶಂಭೋಃ ಪಾದೋದಕಂ ಶುಭಮ್ ॥೧॥

ಶಿವನ ಪಾದೋದಕವು ಅಕಾಲ ಮೃತ್ಯುವನು ಕೆಡಿಸುವುದು ಸಕಲ ರೋಗಂಗಳನು ಕೆಡಿಸುವುದು ಸಮಸ್ತ ಪಾಪಂಗಳನು ಕೆಡಿಸುವುದು.

ಲೈಂಗೇ—

ಸರ್ವೋತ್ಪಾತೋಪಶಮನಂ ಸರ್ವರೋಗ ಪ್ರಭೇದನಮ್ ।
ದುಷ್ಟಗ್ರಹೋಪ ಶಮನಂ ಇಷ್ಟಸಿದ್ಧಿ ಪ್ರಸಾದಕಮ್ ॥೨॥
ಅಗಮ್ಯ ಗಮನಂ ಚೈವ ಪಾಪಾಚಾರಶ್ಚ ಯೋಽಶುಭಾಃ ।
ತೇಽಪಿಪೂತಾ ಭವಂತ್ಯಾಶು ಸದ್ಯಃ ಪಾದಾಂಬುಧಾರಣಾತ್ ॥೩॥

ಶಿವನ ಪಾದತೀರ್ಥವನು ಧರಿಸುವುದರ ದಶೆಯಿಂದ ಆ ಕ್ಷಣವೇ ಸಮಸ್ತವಾದ ಉತ್ಪಾತಂಗಳನು ಕೆಡಿಸುವುದು ಸಮಸ್ತರೋಗಂಗಳಂ ಭೇದಿಸುವುದು ದುಷ್ಟಗ್ರಹಂಗಳ ಶಾಂತಿಯನ್ನೈದಿಸುವುದು ಇಷ್ಟಸಿದ್ಧಿಯಂ ಕೊಡುವುದು ಹೊದ್ದಬಾರದ ಸ್ತ್ರೀಯರ ಹೊದ್ದಿದರೆಯೂ ಆವಾವು ಕೆಲವು ಅಶುಭಂಗಳಾದ ವರ್ತನೆಗಳೆಲ್ಲವೂ ಶೀಘ್ರವೇ ಪುನೀತವಾಗುವವು.

ವೀರಾಗಮೇ—

ಪಾದೋದಕಂ ಪುರಭಿದಃ ಪಾಶಜಾಲಹರಂ ಪರಮ್ ।
ಪಾಣಿಶುಕ್ತಿಭಿರಾದಾಯ ಪಪುಃ ಕಾಮಂ ಗಣೇಶ್ವರಾಃ ॥೪॥

ಈ ಪಾದೋದಕವು ಭವಪಾಶಂಗಳೆಂಬ ಬಲೆಯ ಹರಿವುದಾಗಿ ಶಿವನ ಪಾದೋದಕವನು ಪ್ರಮಥರುಗಳು ಬೊಗಸೆಯಿಂದ ತೆಗೆದುಕೊಂಡು ಬೇಕಾದಹಾಗೆ ಕೊಂಡರು.

## ವಚನಗಳು

೧

ಗುರುಸ್ವಾಮಿ ಶಿಷ್ಯಂಗೆ ಅನುಗ್ರಹವ ಮಾಡುವಲ್ಲಿ
ಹಸ್ತಮಸ್ತಕ ಸಂಯೋಗದ ಕಾಲದಲ್ಲಿ
ಪಂಚಕಲಶದ ಉದಕದಲ್ಲಿ ನಿರ್ಮಲವಾಗಿ ಲಿಂಗವ ಗ್ರಹಿಸಿವಲ್ಲಿ
ಲಿಂಗಕ್ಕೆ ಮಜ್ಜನಕ್ಕೆರೆಯತೊಡಗಿ ಮಜ್ಜನೋದಕವನರಿದೆನು
ಲಿಂಗಸ್ಪರ್ಶನದಿಂದ ಪಾದೋದಕವನರಿದೆನು
ಲಿಂಗಾರ್ಪಿತ ಭೋಗೋಪ ಭೋಗದಲ್ಲಿ ಪ್ರಸಾದೋದಕವನರಿದೆನು

ಅದೆಂತೆಂದಡೆ—

> ಪಾದೋದಕಂ ಚ ತ್ರಿವಿಧಮಾರೋಪ್ಯಾಪ್ಯಾವಧಾರಿತನ್ ।
> ಲಿಂಗಾರ್ಪಿತ ಪ್ರಸಾದಂ ಚ ತಥಾ ಲಿಂಗೋದಕಂ ಭವೇತ್ ॥

ಎಂದುದಾಗಿ ಇಂತೀ ಮಜ್ಜನೋದಕ ಭೋಜನೋದಕ
ಅಭಿಷೇಕದಿಂದ ಪಾದೋದಕ ಇಂತೀ ತ್ರಿವಿಧೋದಕವನರಿವುದು
ಅನ್ಯೋದಕವಂ ಮರೆದು ನಿಮ್ಮಲ್ಲಿ ತದ್ಗತನಾದೆನಯ್ಯಾ
ಮಹಾಲಿಂಗ ಕಲ್ಲೇಶ್ವರಾ

೨

ಗುರು ಪಾದೋದಕವು ಪರಮಪಾವನವೆಂದರಿದು
ಗುರು ಪಾದೋದಕವನೆ ಧರಿಸುವುದು
ಧರಿಸಿದಾತಂಗೆ ಅಷ್ಟಷಷ್ಟಿ ತೀರ್ಥಂಗಳು ತನ್ನೊಳಡಗಿದವಯ್ಯಾ
ಅದೆಂತೆಂದಡೆ ಶಿವರಹಸ್ಯದಲ್ಲಿ—

> ಅಂಗುಷ್ಠಾಗ್ರೇ ಚಾಷ್ಟಷಷ್ಠಿ ತೀರ್ಥಂ ನಿತ್ಯಂ ವಸಂತಿ ವೈ ।
> ಸಪ್ತಸಾಗರ ಪಾದೋರ್ಧ್ವಂ ತದೂರ್ಧ್ವಂ ಕುಲಪರ್ವತಾಃ ॥

ಎಂದುದಾಗಿ ಗುರುವಿನ ಅಂಗುಷ್ಠದ ತುದಿಯಲ್ಲಿ
ಅಷ್ಟಾಷಷ್ಠಿತೀರ್ಥಂಗಳು ಇಪ್ಪವು
ಸಪ್ತ ಸಮುದ್ರಂಗಳು ಮೇಗಾಲಲ್ಲಿಪ್ಪವು
ಮೇಗಾಲೂರ್ಧ್ವದಲ್ಲಿ ಸಪ್ತಕುಲಪರ್ವತಂಗಳಿಪವು
ಇಂತಹ ಶ್ರೀಗುರುವಿನ ಪಾದೋದಕವ ಧರಿಸುವುದು
ಇದುಕಾರಣ ಗುರುಪಾದೋದಕದಿಂದ ಪರಮಪದ
ಸಿದ್ಧಿಯಪ್ಪುದಯ್ಯಾ
ಅಮರಗುಂಡ ಮಲ್ಲಿಕಾರ್ಜುನಾ

೩

ಅಂಗವ ಮುಟ್ಟಿ ಆಚಮನವ ಮಾಡುವರು
ಲಿಂಗಾಂಗಿಗಳಾದವರು ಮಾಡಿದರೂ ಮಾಡಲಿ
ಲಿಂಗ ಪಾದೋದಕವ ಧರಿಸಿ
ಮರಳಿ ಅಪವಿತ್ರತಂಕೆಯಿಂದ ಆಚಮನ ಮಾಡಿದರೆ
ಆ ಲಿಂಗ ಪಾದೋದಕವೇ ವಿಷವಾಗಿ
ಅಘೋರ ನರಕದಲ್ಲಿಕ್ಕುವುದಯ್ಯಾ ಅದೆಂತೆಂದಡೆ—

> ಶಂಭೋಃ ಪಾದೋದಕಂ ಪೀತ್ವಾ ಪಶ್ಚಾದಶುಚಿ ಶಂಕಾಯಾ ।
> ಯ ಆಚಮತಿ ಮಾಹೇಶಸ್ತಂ ವಿದ್ಯಾದ್ಬ್ರಹ್ಮ ಘಾತುಕಮ್ ॥

ಎಂದುದಾಗಿ ಇಂತೆಂಬಾಗಮವನರಿದು ನಂಬುವುದಯ್ಯಾ
ಪರಮ ಪಾವನಮಪ್ಪ ಲಿಂಗಪಾದೋದಕವ ನಂಬದವರು
ಬಸವ ಪ್ರಿಯ ಕೂಡಲ ಚೆನ್ನ ಸಂಗಯ್ಯಂಗೆ ದೂರ

೪

ಅಸರಿನ ಭಕ್ತಿಯ ಜಡರು ಬೇಸತ್ತು ಜಂಗಮಕ್ಕೆರಗಿ
ಪಾದಪ್ರಕ್ಷಾಲನೆಯಂ ಮಾಡಿ ಪಾದೋದಕವ ಧರಿಸುತ್ತಿಪ್ಪರು
ಆವುದು ಕ್ರಮವೆಂದರಿಯರು
ಅರಿದರೆ ಪಾದೋದಕ ಅರಿಯದಿರ್ದರೆ ಬರಿ ನೀರೆಂದರಿಯರು
ಅರಿದರಿದು ಬರುಮೊರೆಯಾದರು ಮಾನವರೆಲ್ಲರು

ಅರಿವು ಸಾಮಾನ್ಯವೇ ಅದೆಂತೆಂದಡೆ—

ಶಿವಾತ್ಮಕ ಪದದ್ವಂದ್ವ ಪ್ರಕ್ಷಾಲನ ಜಲಂ ನರಾಃ ।
ಯೋ ಪಿಬಂತಿ ಪುನಸ್ತನ್ಯಂ ನಪಿಬಂತಿ ಕದಾಚನ ॥

ಎಂಬುದಾಗಿ ಇದಕೇಳಿ ನಂಬುವುದು
ನಂಬದಿರ್ದಡೆ ಮುಂದೆ ಭವಘೋರನರಕ ತಪ್ಪದಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೫

ಸಮಯ ವಿರೋಧವಾದುದೆಂದು ಪಾದಾರ್ಚನೆಯ ಮಾಡುವರಯ್ಯಾ
ಜಂಗಮಲಿಂಗಕ್ಕೆ ಪಾದವಾವುದು ಅರ್ಚನೆಯಾವುದು-
ಎಂಬ ಕಡೆಮೊದಲನರಿಯರು
ಉದಾಸೀನದಿಂದ ಪಾದಾರ್ಚನೆಯ ಮಾಡಿಸದೆ
ಪಾದೋದಕವಂ ಧರಿಸಿದರೆ ಅದೇ ಪ್ರಳಯಕಾಲ ಜಲ-
ಮರ್ಮವನರಿದಡೆ ತನ್ನ ಭವಕ್ಕೆ ಪ್ರಳಯಕಾಲ ಜಲ
ಈ ಭೇದವ ಭೇದಿಸಿ ಸಂಸಾರ ಛೇದ ಮಲಿನವ ತೊಳೆಯಬಲ್ಲರೆ
ಕೂಡಲ ಚೆನ್ನಸಂಗಯ್ಯನಲ್ಲಿ ನಿಮ್ಮ ಶರಣ ಬಲ್ಲ

೬

ಕರುಣಜಲ ವಿನಯಜಲ ಸಮತೆಜಲ
ಕರುಣ ಜಲವೆಂದರೆ ಗುರು ಪಾದೋದಕ
ವಿನಯಜಲವೆಂದರೆ ಲಿಂಗ ಪಾದೋದಕ
ಸಮತೆ ಜಲವೆಂದರೆ ಜಂಗಮ ಪಾದೋದಕ
ಗುರುಪಾದೋದಕದಿಂದ ಸಂಚಿತ ಕರ್ಮನಾಸ್ತಿ
ಲಿಂಗಪಾದೋದಕದಿಂದ ಪ್ರಾರಬ್ಧ ಕರ್ಮನಾಸ್ತಿ
ಜಂಗಮಪಾದೋದಕದಿಂದ ಆಗಾಮಿ ಕರ್ಮನಾಸ್ತಿ
ಈ ತ್ರಿವಿಧ ಪಾದೋದಕದಲ್ಲಿ ತ್ರಿವಿಧ ಕರ್ಮನಾಸ್ತಿ
ಇದು ಕಾರಣ ಕೂಡಲಸಂಗಯ್ಯಾ
ಈ ತ್ರಿವಿಧಪಾದೋದಕವ ಕೊಂಡು
ಎನ್ನ ಭವಂ ನಾಸ್ತಿಯಾಯಿತ್ತಯ್ಯಾ

## ಪ್ರಸಾದ ಮಾಹಾತ್ಮ್ಯ ಸ್ಥಲ ೧೧

ಇಂತೀ ಪ್ರಕಾರದಿಂ ಪಾದತೀರ್ಥದೊಡನೆ ಸಮಸ್ತ ತೀರ್ಥಂಗಳು ಸಮಬಾರವೆಂಬುದನರಿದು ಶಿವಭಕ್ತರು ವಿಶ್ವಾಸದಿಂದ ಶಿವನ ಪಾದೋದಕವಂ ಕೊಳ್ಳಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಪಾದೋದಕವಂ ಕೊಂಬ ಶಿವಭಕ್ತರು ಶಿವಪ್ರಸಾದವ ಕೊಳಬೇಕೆಂಬುದನರುಪಲೋಸ್ಕರ ನುಡಿದ ವಚನಂಗಳು.

ದೀಕ್ಷಯಾ ಕಿಂ ತಪಸಾ ಕಿಂ ಧ್ಯಾನೇನ ಜಪೇನ ಕಿಮ್ ।
ಶೃಣು ದೇವಿ ವರಾರೋಹೇ ಮದ್ಭುಕ್ತಂ ಯದಿಭುಂಜತೇ ॥ ೧ ॥

ಎಲೆ ಪಾರ್ವತಿಯೇ ಕೇಳು ನನ್ನ ಪ್ರಸಾದವಂ ಭುಂಜಿಸಿದ್ದಾದರೆ ಯಾಗಸಂಕಲ್ಪದಿಂದೇನು ಪ್ರಯೋಜನವು ತಪಸ್ಸಿನಿಂದೇನು ಪ್ರಯೋಜನವು ಧ್ಯಾನದಿಂದೇನು ಪ್ರಯೋಜನವು ಜಪದಿಂದೇನು ಪ್ರಯೋಜನವು ಇವೆಲ್ಲವೂ ಕೂಡಿ ನನ್ನ ಪ್ರಸಾದಕ್ಕೆ ಸಮಬಾರವು.

ಬ್ರಹ್ಮಘ್ನೋಪಿ ಶುದ್ಧಾರ್ಥಂ ನಿರ್ಮಾಲ್ಯಸ್ಯತು ಭಕ್ಷಣಮ್ ।
ತಸ್ಯ ಪಾಪಮಹಂ ಶೀಘ್ರಂ ನಾಶಯಾಮಿ ವರಾನನೇ ॥ ೨ ॥

ಬ್ರಹ್ಮಹತ್ಯೆಯ ಮಾಡಿದಾತನು ಲಿಂಗಪ್ರಸಾದವ ಕೊಂಡಡೆ ಆಗಳೇ ನಿಮಿಷಮಾತ್ರದೊಳಗೆ ಆ ಪಾಪವು ತೊಲಗುವುದು.

ಲೈಂಗೇ—

ವಾಜಪೇಯ ಕ್ರತೂ ಕೋಟಿ ಅಶ್ವಮೇಧ ಸಹಸ್ರಕಮ್ ।
ಶೇಷಾಶ್ಚ ಬಹುಯಜ್ಞಾಶ್ಚ ರುದ್ರೋಚ್ಛಿಷ್ಟಸ್ಯ ನೋ ಸಮಮ್ ॥ ೩ ॥

ಅಜಪ ಯಜ್ಞಂಗಳ ಕೋಟಿ ಮಾಡಿದರೆಯೂ ಅಶ್ವಮೇಧ ಯಜ್ಞ ಸಹಸ್ರಮಂ ಮಾಡಿದರೂ ಇನ್ನುಳಿದ ಯಜ್ಞಂಗಳ ಅನೇಕವಂ ಮಾಡಿದರೆಯೂ ಶಿವನ ಪ್ರಸಾದಕ್ಕೆ ಇವೆಲ್ಲವು ಸಮಬಾರವು.

ತಿಲ ಷೋಡಶ ಭಾಗಂ ಚ ತೃಣಾಗ್ರಾಂಬು ಕರ್ಷೋಪಮಮ್ ।
ಪಾದೋದಕ ಪ್ರಸಾದಾನ್ನಂ ಸೇವನಾನ್ಮೋಕ್ಷಮಾಪ್ನುಯಾತ್ ॥ ೪ ॥

ಆ ಮಹಾದೇವನ ಪ್ರಸಾದವು ಎಳ್ಳಿನ ಬೀಜವೊಳಗಣ ಹದಿನಾರು ಭಾಗದೊಳಗೊಂದು ಭಾಗದಷ್ಟಾದರೂ ತೃಣದ ಕೊನೆಯಲ್ಲಿಯ ಜಲ ಬಿಂದುವಿನೊಡನೆ ಸರಿಯಾದ ಪಾದೋದಕವನ್ನು ಸೇವಿಸುವುದರಿಂದ ಮೋಕ್ಷವನ್ನೈದುವನು.

## ವಚನಗಳು

೧

ಶ್ರೀಗುರುವೇ ಕರ್ತನೆಂದು ಪ್ರಸಾದವಂ ಕೊಂಬ
ಪ್ರಸಾದ ದೇಹಿಗಳು ನೀವು ಕೇಳಿಭೋ
ಪ್ರಸಾದಕ್ಕೆ ಆಯತ ಅನಾಯತವೆಂಬ
ಅನಾಚಾರಿಗೆ ಸದಾಚಾರದ ಶುದ್ಧಿಯೆಲ್ಲಿಯದೋ
ಈ ತ್ರಿವಿಧ ಅಚೇತನಂಗೆ ಮುಕ್ತಿಯುಂಟೆಂಬ ಮೂಕೊರೆಯರ ನೋಡಾ
ಆ ಮಹಾ ದಿವ್ಯ ಪ್ರಸಾದದ ಸುಖವನರಿದು-
ಬಿಲ್ಲಮರಾಯನು ನವಲಕ್ಷದೇಶವ ಕೊಂಡೊಯ್ದ ಕೈಲಾಸಕ್ಕೆ
ಆ ಮಹಾ ದಿವ್ಯಪ್ರಸಾದ ಸುಖವನರಿದು
ಬಿಬ್ಬಿಬಾಚಯ್ಯ ಪರವಾದಿಗಳ ಪುರವ ಸುಟ್ಟ
ಆ ಮಹಾದಿವ್ಯ ಪ್ರಸಾದದ ಸುಖವನರಿದು
ಚೆನ್ನಬಸವೇಶ್ವರನುದ್ಭವಿಸಿದ
ಈ ಪ್ರಸಾದಕ್ಕೆ ಆಯತ ಅನಾಯತವೆಂಬ
ಅನಾಚಾರಿಯ ಮುಖವನೆಗೆ ತೋರದಿರಯ್ಯಾ
ಇಂತಪ್ಪ ಮಹಾಪ್ರಸಾದವ ಕೊಂಡು
ನಾನು ಬದುಕಿದೆನಯ್ಯಾ ಕಲಿದೇವರ ದೇವಾ

೨

ಭವರೋಗ ಮೊದಲಾದ ಎಲ್ಲ ರೋಗಗಳಿಗೆಯೂ
ಶಿವಲಿಂಗ ಪ್ರಸಾದವಲ್ಲದೆ ಮತ್ತೇನೂ ಇಲ್ಲವೆಂದುದು
ದ್ವಿಪಾದಿಗಳಿಗೆ ಚತುಃಪಾದಿ ಮೊದಲಾದ ಎಲ್ಲಾ ಪ್ರಾಣಿಗಳಿಗೆಯೂ
ಇದೇ ಔಷಧವೆಂದುದು ಯಜುರ್ವೇದ—

ಓಂ ಗವೇಷ್ಠಾಯ ಪುರುಷಾಯ ಭೇಷಜ ಮತೋಷ್ಠಾ
ಭ್ಯೋಽಂಗೇಷು ಭೇಷಜಾಂಗೇಷು ಭೇಷಜಮ್
ಯದಾಸತೀಸುತ ಮೇಷಾಯ ಮೇಷ್ಯಾಂ ಭವರುದ್ರಂ
ಮೇಧೀಮಹಿ ದೇವಂ ತ್ರಿಯಂಬಕಮ್ ॥ ಎಂದುದು ಶ್ರುತಿ

ಇದನರಿತು ಲಿಂಗಪ್ರಸಾದವ ಕೊಂಬಾತಂಗೆ
ಬ್ರಹ್ಮೇತಿ ಮೊದಲಾದ ಎಲ್ಲಾಪಾಪಂಗಳು ಕೆಟ್ಟು ಹೋಹವು ನೋಡಾ
ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ

೩

ಜಂಗಮ ಪ್ರಸಾದ ಸೋಂಕಿನಿಂದ
ಇರಿವೆಗೆ ರುದ್ರಪದವಾಯಿತ್ತು
ಜಂಗಮ ಪ್ರಸಾದ ಸೋಂಕಿನಿಂದ
ಬಿಬ್ಬಿ ಬಾಚಯ್ಯಗಳು ಪ್ರಸಾದವ ಮೆರೆದು ಸ್ವಯಂ ಲಿಂಗವಾದರು
ಜಂಗಮ ಪ್ರಸಾದ ಸೋಂಕಿನಿಂದ
ವಿಷವ ಅಮೃತವಮಾಡಿ ಮೆರೆದ ಬಸವಣ್ಣ
ಅದೆಂತೆಂದಡೆ ವೀರಾಗಮದಲ್ಲಿ—

ಜಂಗಮಪ್ರಸಾದಂ ಗ್ರಾಹ್ಯಂ ಸರ್ವ ದೇವೈರನುಷ್ಠಿತಮ್ ।
ತೇನೋಚ್ಛಿಷ್ಟಂ ನಸಂಪ್ರಾಪ್ಯ ಭವೋನ್ಮುಕ್ತಿಸ್ತಥಾ ಭವೇತ್ ॥

ಎಂದುದಾಗಿ ಕೂಡಲಚೆನ್ನಸಂಗಮದೇವಯ್ಯಾ
ನಿಮ್ಮ ಜಂಗಮ ಪ್ರಸಾದದ ಮಹಿಮೆ
ದೇವ ಕ್ರಿಯೆ ಮೀರಿದುದಕ್ಕೆ ನಾನು ನಮೋ ನಮಃ ಎಂಬೆನು

೪

ಅಗ್ನಿಮುಟ್ಟಲು ತೃಣವು ಅಗ್ನಿಯಪ್ಪುದು ತಪ್ಪದಯ್ಯಾ
ಶ್ರೀಗುರುವಿನ ಪ್ರಸಾದವು ಅಂಗವ ಸೋಂಕಿದಲ್ಲಿ
ಸರ್ವಾಂಗವು ಗುರುವಪ್ಪುದು ತಪ್ಪದಯ್ಯಾ
ಲಿಂಗಪ್ರಸಾದವು ಮನವ ಸೋಂಕಿದಲ್ಲಿ
ಲಿಂಗವಪ್ಪುದು ತಪ್ಪದಯ್ಯಾ
ಜಂಗಮ ಪ್ರಸಾದವು ಅರಿವ ಸೋಂಕಿದಲ್ಲಿ

ಅಖಂಡಿತ ಪ್ರಸನ್ನ ಪ್ರಸಾದಿಯಪ್ಪುದು ತಪ್ಪದಯ್ಯಾ
ಶಿವಶಿವಾ ಮಹಾಪ್ರಸಾದದ ಮಹಿಮೆಯನೇನೆಂದುಪ
ಮಿಸಬಹುದಯ್ಯಾ
ಪ್ರಸಾದವೇ ಗುರು ಪ್ರಸಾದವೇ ಲಿಂಗ ಪ್ರಸಾದವೇ ಜಂಗಮ
ಪ್ರಸಾದವೇ ಪರಾತ್ಪರ ಪ್ರಸಾದವೇ ಪರಮಾನಂದ
ಪ್ರಸಾದವೇ ಪರಮಾಮೃತ ಪ್ರಸಾದವೇ ಪರಜ್ಞಾನ
ಪ್ರಸಾದವೇ ವಾಙ್ಮನೋತೀತ ಪ್ರಸಾದವೇ ನಿತ್ಯ ಪರಿಪೂರ್ಣ
ಇಂತಪ್ಪ ಪ್ರಸಾದವ ಕೊಂಡು ನಾನು ಬದುಕಿದೆನಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ಸದ್ಭಕ್ತವರ್ಣಾಧಿಕ್ಯ ಸ್ಥಲ ೧೨

ಇಂತೀ ಪ್ರಕಾರದಿಂ ಸಹಜಗುರುವಿನ ಕೈಯಲ್ಲಿ ಕಾರುಣ್ಯವಂ ಪಡೆದು ವಿಭೂತಿ ರುದ್ರಾಕ್ಷೆಯಂ ಧರಿಸಿ ಪಂಚಾಕ್ಷರಿಯಂ ಜಪಿಸಿ ಲಿಂಗವಂ ಧರಿಸಿಕೊಂಡು ಲಿಂಗಾರ್ಚನೆಯಂ ಮಾಡಿ ಲಿಂಗಕ್ಕರ್ಪಿಸಿ ಪಾದೋದಕವಂ ಕೊಂಡು ಪ್ರಸಾದವಂ ಸ್ವೀಕರಿಸಿ ಶಿವಭಕ್ತಿಸಂಪನ್ನರಾದ ವೀರಮಾಹೇಶ್ವರರುಗಳೇ ಸಮಸ್ತವರ್ಣಂಗಳೊಳಧಿಕರು. ಶಿವಭಕ್ತಿ ಪರಾಙ್ಮುಖರಾದ ಬ್ರಾಹ್ಮಣಾದಿ ನಾನಾ ವರ್ಣಂಗಳೆಲ್ಲ ಕೀಳುಜಾತಿಗಳೆಂಬುದನರುಹಲೋಸ್ಕರ ಪ್ರತಿಷ್ಠೆಯಂ ಮಾಡಿ ನುಡಿದ ವಚನಂಗಳು.

ಸೂತಸಂಹಿತಾಯಾಂ—

> ಮಹಾಪಾತಕಕೋಟಿಘ್ನಃ ಶ್ವಪಚೋ ಲಿಂಗಪೂಜಕಃ ।
> ತತ್ಸಂಭಾಷಣತೋ ಮುಕ್ತೋ ಗಣಮುಖ್ಯಃ ಸುಖೀ ಭವೇತ್ ॥೧॥

ಲಿಂಗಭಕ್ತನಾದಲ್ಲಿ ಮಹಾಪಾತಕಕೋಟಿಯ ಮಾಡಿದ ಶ್ವಪಚನಾದರೆಯೂ ಆ ಪಾತಕವೆಲ್ಲವು ಕೆಟ್ಟುಹೋಹುದು. ಆತನೊಡನೆ ಸಂಭಾಷಣೆಯಂ ಮಾಡಿದರೆ ಮುಕ್ತಿಯುಂಟು. ಮೇಲೆ ಶಿವಗಣಂಗಳಿಗೆ ಮುಖ್ಯನಹನು.

ಲೈಂಗೇ—

> ಸ್ತ್ರೀ ವಾಥ ಪುರುಷಃ ಷಂಢೋ ಚಂಡಾಲೋ ದ್ವಿಜವಂಶಜಃ ।
> ನ ಜಾತಿಭೇದೋ ಲಿಂಗಾರ್ಚೇ ಸರ್ವೇ ರುದ್ರಗಣಾಃ ಸ್ಮೃತಾಃ ॥೨॥

ಸ್ತ್ರೀಯಾಗಲಿ ಪುರುಷನಾಗಲಿ ನಪುಂಸಕನಾಗಲಿ ಶ್ವಪಚನಾಗಲಿ ವಿಪ್ರನಾಗಲಿ ಇಂತಿವರು ಶಿವಲಿಂಗಾರ್ಚಕರಾದಬಳಿಕ ಅಲ್ಲಿ ಭೇದವಂ ಮಾಡಲಾಗದು. ಅವರೆಲ್ಲರು ರುದ್ರಗಣಂಗಳೆಂದು ಹೇಳಲ್ಪಟ್ಟಿತು.

ಶಿವರಹಸ್ಯೇ—

> ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯೋ ಶೂದ್ರೋವಾಪ್ಯಂತ್ಯಜಾತಿಜಃ ।
> ಶಿವಭಕ್ತಃ ಸದಾ ಪೂಜ್ಯಃ ಸರ್ವಾವಸ್ಥಾಗತೋಽಪಿ ವಾ ॥೩॥

ಬ್ರಾಹ್ಮಣನು ಕ್ಷತ್ರಿಯನು ವೈಶ್ಯನು ಶೂದ್ರನು ಅಂತ್ಯಜ

ಮೊದಲಾದ ಆವನೊಬ್ಬನಾದರೆಯೂ ಆಗಲಿ ಶಿವಭಕ್ತನಾದರೆ ಆತನೇದೂ ಮನುಷ್ಯನಲ್ಲ, ಶಿವನೇಮ ತಿಳಿವುದು.

ಮತ್ಸ್ಯಪುರಾಣೇ—

ಮ್ಲೇಚ್ಛೋऽಪಿ ವಾ ಯದಿ ಭವೇದ್ಭವ ಭಕ್ತಿಸಮನ್ವಿತಃ ।
ನ ತತ್ಸಮಶ್ಚತುರ್ವೇದೀ ಅಗ್ನಿಷ್ಟೋಮಾದಿ ಯಾಜ್ಞಿಕಃ ॥೪॥

ಮ್ಲೇಛನಾದರೆಯೂ ಶಿವಭಕ್ತಿಯುಳ್ಳವಂಗೆ ಚತುರ್ವೇದಿಯು ಸರಿಯಲ್ಲ. ಅಗ್ನಿಷ್ಟೋಮಾದಿ ಯಜ್ಞಂಗಳ ಮಾಡಿದವನೂ ಆ ಶಿವಭಕ್ತಂಗೆ ಸರಿಯಲ್ಲ.

ವಾಶಿಷ್ಠೇ—

ನಿಕೃಷ್ಟಾಚಾರ ಜನ್ಮಾನೋ ವಿರುದ್ಧಾ ಲೋಕವೃತ್ತಿಷು ।
ಕೋಟಿಭ್ಯೋವೇದವಿದುಷಾಂ ಶ್ರೇಷ್ಠಾ ಮದ್ಭಾವ ಭಾವಿತಾಃ ॥೫॥

ಕೆಟ್ಟ ಆಚಾರವ ನಡೆಯಲಿ ಲೋಕವಿರುದ್ಧವಾಗಲಿ ಎನ್ನ ಭಕ್ತನಾದಡೆ ಆತಂಗೆ ಕೋಟಿ ವೇದಪಾಠಕರು ಸಮವಲ್ಲ.

## ವಚನಗಳು

೧

ಶಿವ ತನ್ನ ನಿಜರೂಪವನ್ನು ಸದ್ಭಕ್ತರಿಗಲ್ಲದೆ ತೋರನೆಂದುದು ವೇದ
ಆ ಸದ್ಭಕ್ತನೇ ಬ್ರಾಹ್ಮಣ ಆ ಸದ್ಭಕ್ತನೇ ಸತ್ಕುಲಜ
ಆ ಸದ್ಭಕ್ತನೇ ಎನಗಿಂದಧಿಕನೆಂದು ಶ್ರೀ ರುದ್ರವೇದ ಬೊಬ್ಬಿಡುತ್ತಿದೆ

ಯಾತೇ ರುದ್ರ ಶಿವ ತನೂರಘೋರಾಪಾಪಕಾಶಿನಿ
ತಯಾನಸ್ತನುವಾ ಶಂತ ಮಯಾ ಗಿರಿಶಂ ತಾಭಿ ಚಾಕಶೀಃ ।
ಯಮಿಷುಂಗಿರಿಶಂ ತಹಸ್ತೇ ಬಿಭರ್ಷ್ಯಸ್ತವೇ

ಎಂದುದಾಗಿ ಶಿವಲಿಂಗ ಭಕ್ತನಲ್ಲದೆ ಅತಃಪರವೊಂದು ಇಲ್ಲ
ಕೇಳಿಭೊ
ನಿಮ್ಮ ಮನದೊಳಗೆ ಯಜುರ್ವೇದ ಶ್ರುತಿಯ
ವಿಚಾರಿಸಿ ನೋಡಿರಣ್ಣಾ

ಓಂ ಸಪದ ಸ್ತ್ರೈದ್ಯಾವಾಭೂಮೀ ಜನಯನ್ ದೇವಾ !

ಎಂದುದಾಗಿ ಶೈವ ಪುರಾಣೇ—

ಯಥಾ ಪಂಕೇ ಸರೋಜಂ ಚ ಯಥಾ ಕಾಷ್ಠೇ ಹುತಾಶನಃ ।
ಸುಪ್ರತಿಷ್ಠಿತಲಿಂಗೇ ತು ನಯಥಾ ಪೂರ್ವಭಾವನಂ ॥

ಮತ್ತಂ ಲೈಂಗೇ—

ಶಿವದೀಕ್ಷಾಭಿಜಾತಸ್ಯ ಪೂರ್ವಜಾತಿಂ ನ ಚಿಂತಯೇತ್ ।
ಯಥಾ ಸುವರ್ಣ ಪಾಷಾಣೇ ಭಕ್ತಶ್ಚಂಡಾಲವಂಶಜಃ ॥

ಇಂತೆಂದು ಪುರಾಣವಾಕ್ಯಂಗಳು ಸಾರುತ್ತಿವೆ
ಶಿವಲಿಂಗಭಕ್ತನೇ ಶ್ರೇಷ್ಠನು
ಶ್ವಪಚನಾದಡೆಯೂ ಆ ಲಿಂಗಭಕ್ತನೇ ಕುಲಜನು
ಆ ಲಿಂಗಭಕ್ತನೇ ಉತ್ತಮನಯ್ಯಾ ಮಹಾಲಿಂಗ ಕಲ್ಲೇಶ್ವರಾ

೨

ಬ್ರಾಹ್ಮಣ ದೇಹಿಕನಲ್ಲ ಕ್ಷತ್ರಿಯ ದೇಹಿಕನಲ್ಲ
ವೈಶ್ಯ ದೇಹಿಕನಲ್ಲ ಶೂದ್ರ ದೇಹಿಕನಲ್ಲ
ಭಕ್ತ ದೇಹಿಕ ದೇವನೆಂದು ಕೇಳಿಯೂ ಅರಿಯಿರೋ
ಶ್ವಪಚನಾದಡೆಯೂ ಲಿಂಗಭಕ್ತನೇ ಕುಲಜನೆಂದುದು
ಲೈಂಗ್ಯ ಪುರಾಣದಲ್ಲಿ—

ಅಲಿಂಗೀ ಸರ್ವದೇವಜ್ಞೋ ಯಃ ಸ ಚಾಂಡಾಲವದ್ಭುವಿ ।
ಲಿಂಗಾರ್ಚಕಶ್ಚ ಶ್ವಪಚೋ ದ್ವಿಜಕೋಟ್ಯಾವಿಶೇಷಿತಃ ॥

ಎಂದುದಾಗಿ ಅಂಗದಮೇಲೆ ಶಿವಲಿಂಗವಿದ್ದ
ಶ್ವಪಚನಾದರೆಯೂ ಆತನೇ ಬ್ರಾಹ್ಮಣನು
ಅಂಗದಮೇಲೆ ಲಿಂಗವಿಲ್ಲದ ಬ್ರಾಹ್ಮಣರೊಂದು
ಕೋಟಿಯಾದರೆಯೂ
ಶ್ವಪಚಗಿಂದ ಕರಕಷ್ಟ ನೋಡಾ ಕೂಡಲಚೆನ್ನಸಂಗಮದೇವಾ

೩

ಚಾಂಡಾಲನಾದರೆಯೂ ಶಿವಭಕ್ತನೇ ಕುಲಜನು
ಆತನೊಡನೆ ನುಡಿಗಡಣವ ಮಾಡಬೇಕೆಂದುದು ವೇದ
ಕುಲವ ನೋಡಲು ಬೇಡ ಛಲವ ನೋಡಲು ಬೇಡ

ಆತನೆಲ್ಲರಿಗೆಯೂ ಹಿರಿಯನು
ಆತನಿರುತ್ತಿದ್ದಲ್ಲಿ ಶಿವನಿರುತ್ತಿಹನೆಂದು ವೇದ ನುಡಿಯುತ್ತಿದೆ—

ಅಪಿವಾಯಶ್ಚ ಚಾಂಡಾಲಃ ಶಿವೇತಿ ವಾಚ್ಯಮವದತ್ತೇನ ।
ಸಹ ಸಂವಸೇತ್ತೇನ ಸಹ ಸಂವಿಸೇತ್ತೇನ ಸಹ ಭುಂಜೀತ ॥

ಹೀಗೆಂದು ಉಪನಿಷತ್ತು ನುಡಿಯುತ್ತಿದೆ
ಶಿವನೇ ನಿಮ್ಮ ಸದ್ಭಕ್ತರನು ಅವರಿವರೆಂದು ಕುಲವನೆತ್ತಿ
ನುಡಿದವಂಗೆ ಇಪ್ಪತ್ತೆಂಟುಕೋಟಿ ನರಕ ತಪ್ಪದು ನೋಡಯ್ಯ
ಬಸವಪ್ರಿಯ ಕೂಡಲಚೆನ್ನಸಂಗಮದೇವಾ

೬

ಸಂಕಲ್ಪ ವಿಕಲ್ಪವೆಂಬ ಉದಯಾಸ್ತಮಾನಗಳಿಗೆ ದೂರವಾದ
ಶಿವಶರಣರ ಅಕುಲಜರೆಂದು ಗಳಹುತಿಪ್ಪರು ನೋಡಾ
ಈ ಮರುಳು ವಿಪ್ರರು
ತಾವು ಮಾತಂಗಿಯ ಗರ್ಭಸಂಭವ ಜೇಷ್ಠಪುತ್ರರೆಂಬುದನರಿಯದೆ
ನಮ್ಮ ಶಿವಭಕ್ತರು ಅಂತಹ ಕುಲ ಇಂತಹ ಕುಲದವರೆಂದು ನಿಂದಿಸಿ
ನುಡಿವ ವಿಪ್ರಹೊಲೆಯರು ನೀವು ಕೇಳಿಭೋ ಅದೆಂತೆಂದಡೆ—

ಸ್ತ್ರೀ ವಾಥಪುರುಷಃ ಷಂಡಶ್ಚಂಡಾಲೋ ದ್ವಿಜವಂಶಜಃ ।
ನ ಜಾತಿಭೇದೋ ಲಿಂಗಾರ್ಚೇ ಸರ್ವೇ ರುದ್ರಗಣಾಃ ಸ್ಮೃತಾಃ ॥

ಇಂತೆಂಬ ಪುರಾಣವಾಕ್ಯವನರಿದು
ನಮ್ಮ ಶಿವಭಕ್ತನು ಹೊಲೆಯ ಮಾದಿಗ ಕಬ್ಬಿಲ ಕಮ್ಮಾರ
ಕಂಚುಗಾರ ಅಕ್ಕಸಾಲೆ ಕುಂಬಾರ ಅಗಸ ನಾವಿಂದ
ಜೆಂಡ ಬೇಡನೆಂದು ನುಡಿಯುತ್ತಿಪ್ಪರು
ನಿಮ್ಮ ಉತ್ತಮ ಸತ್ಕುಲಂಗಳ ನಾವು ಎತ್ತಿ ನುಡಿಯಬಹುದೇ
ಮಾರ್ಕಂಡೇಯ ಮಾದಿಗನೆಂದು ಸಾಂಖ್ಯ ಶ್ವಪಚನೆಂದು
ಕಾಶ್ಯಪ ಕಮ್ಮಾರನೆಂದೂ ರೋಮಜ ಕಂಚುಗಾರನೆಂದೂ
ಅಗಸ್ತ್ಯ ಕಬ್ಬಿಲನೆಂದೂ ನಾರದ ಅಗಸನೆಂದೂ
ವ್ಯಾಸ ಬೇಡನೆಂದೂ ವಶಿಷ್ಠ ಡೊಂಬನೆಂದೂ
ದುರ್ವಾಸ ಮಚ್ಚಿಗನೆಂದೂ ಕೌಂಡಿಲ್ಯ ನಾವಿಂದನೆಂದೂ

ಅದೆಂತೆಂದಡೆ ವಾಸಿಷ್ಠದಲ್ಲಿ—

ವಾಲ್ಮೀಕೀ ಚ ವಶಿಷ್ಠಶ್ಚ ಗಾರ್ಗ್ಯಮಾಂಡವ್ಯ ಗೌತಮಾಃ ।
ಪೂರ್ವಾಶ್ರಯೇ ಕಸಿಷ್ಠಾಸ್ಯು ದೀಕ್ಷಯಾ ಸ್ವರ್ಗಗಾಮಿನಃ ॥

ಎಂದುದಾಗಿ ಇದನರಿದು ಮರೆಮಿರಿ ನಿಮ್ಮ ಕುಲವನು
ಇನ್ನು ನಿಮ್ಮ ಕುಲದಲ್ಲಿ ಹಿರಿಯರುಳ್ಳರೆ ನೀವು ಹೇಳಿಭೋ
ನಿಮ್ಮ ಗೋತ್ರವನೋದಿ ನಿಮ್ಮ ಹಮ್ಮು ಬಿಡಿಭೋ
ಎಮ್ಮ ಸದ್ಭಕ್ತರೇ ಕುಲಜರು
ಇದ ನಂಬದಿರ್ದಡೆ ಓದಿನೋಡಿರಣ್ಣಾ ನಿಮ್ಮ
ವೇದವರ್ಗಂಗಳೊಳಗೆ
ಅದೆಂತೆಂದಡೆ ಅಥರ್ವಣವೇದದಲ್ಲಿ—

ಮಾತಂಗೀ ರೇಣುಕಾ ಗರ್ಭಸಂಭವಾತ್ ಇತಿ ಕಾರುಣ್ಯಂ
ಮೇಧಾವೀ ರುದ್ರಾಕ್ಷಿಣಾ ಲಿಂಗಧಾರಣಸ್ಯ ಪ್ರಸಾದಂ ಸ್ವೀಕುರ್ವನ್
ಋಷೀಣಾಂ ವರ್ಣಶ್ರೇಷ್ಠೋ ಘೋರ ಋಷಿಃ ಸಂಕರ್ಷಣಾತ್ ॥

ಇತ್ಯಾದಿ ವೇದವಚನ ಶ್ರುತಿಮಾರ್ಗೇಣ ಎಂದುದಾಗಿ
ಮತ್ತಂ ವಾಯವೀಯ ಸಂಹಿತಾಯಾಮ್—

ಬ್ರಾಹ್ಮಣೋ ವಾಪಿ ಚಾಂಡಾಲೋ ದುರ್ಗುಣಃ ಸುಗುಣೋಽಪಿ ವಾ ।
ಭಸ್ಮರುದ್ರಾಕ್ಷಕಂಠೋ ವಾ ದೇಹಾಂತೇ ಸ ಶಿವಂ ವ್ರಜೇತ್ ॥

ಎಂದುದಾಗಿ ಮತ್ತಂ ಶಿವರಹಸ್ಯದಲ್ಲಿ—

ಗ್ರಾಮೇಣ ಮಲಿನಂ ತೋಯಂ ಯಥಾ ಸಾಗರಸಂಗತಮ್ ।
ಶಿವಸಂಸ್ಕಾರಸಂಪನ್ನಂ ಜಾತಿ ಭೇದಂ ನ ಕಾರಯೇತ್ ॥

ಎಂದುದಾಗಿ ಇವರೆಲ್ಲರ ವರ್ಣಂಗಳು ಲಿಂಗಧಾರಣೆಯಿಂದ
ಮರೆಸಿ ಹೋದವು ಕೇಳಿರಣ್ಣಾ
ಇಂತಪ್ಪ ಋಷಿಜನಂಗಳೆಲ್ಲ ಶ್ರೀಗುರುವಿನ ಕಾರುಣ್ಯವಂ ಪಡೆದು
ವಿಭೂತಿ ರುದ್ರಾಕ್ಷೆಯುಂ ಧರಿಸಿ ಶಿವಲಿಂಗಾರ್ಚನೆಯುಂ ಮಾಡಿ
ಪಾದತೀರ್ಥ ಪ್ರಸಾದವಂ ಕೊಂಡು
ಉತ್ತಮ ವರ್ಣಶ್ರೇಷ್ಠರಾದವರು ಕಾಣಿರೇ
ಇದು ಕಾರಣ ನಮ್ಮ ಕೂಡಲ ಚೆನ್ನಸಂಗಯ್ಯನ

ಅರಿದು ಪೂಜಿಸುವಾತನೇ ಉತ್ತಮ ಸದ್ಭಕ್ತ ಬ್ರಾಹ್ಮಣನು
ಅರಿಯದವನೀಗಲೇ ಕೆಟ್ಟ ಹೊಲೆಯ ಕಾಣಿರಂಣಾ

೫

ವಶಿಷ್ಠಗೋತ್ರದಲ್ಲಿ ಹುಟ್ಟಿದವನನು ವಶಿಷ್ಠ ಗೋತ್ರದವನೆಂಬಂತೆ
ಭಾರದ್ವಾಜ ಗೋತ್ರದಲ್ಲಿ ಹುಟ್ಟಿದವನನು ಭಾರದ್ವಾಜ
ಗೋತ್ರದವನೆಂಬಂತೆ
ಕಾಶ್ಯಪಗೋತ್ರದಲ್ಲಿ ಹುಟ್ಟಿದವನನು ಕಾಶ್ಯಪ ಗೋತ್ರದವನೆಂಬಂತೆ
ವಿಶ್ವಾಮಿತ್ರ ಗೋತ್ರದಲ್ಲಿ ಹುಟ್ಟಿದವನನು ವಿಶ್ವಾಮಿತ್ರ
ಗೋತ್ರದವನೆಂಬಂತೆ
ಆಪರಿ ಆವಾವ ಗೋತ್ರದಲ್ಲಿ ಆವಾವ ಋುಷಿಗಳ ವಂಶದಲ್ಲಿ
ಜನಿಸಿದವರನು
ಆ ಗೋತ್ರ ಆ ಸಂತತಿ ಆ ಸುತನು ಎಂಬುದು ಉಪಚರ್ಯವೇ ?
ಅಸತ್ಯವೇ ? ಹೇಳಿರಂಣಾ ಅದು ತಾತ್ಪರ್ಯ ಅದು ಸತ್ಯ.
ಆಪರಿ ಬ್ರಾಹ್ಮಣನ ಮಗ ಬ್ರಾಹ್ಮಣನು ಕ್ಷತ್ರಿಯನ ಮಗ ಕ್ಷತ್ರಿಯನು
ವೈಶ್ಯನ ಮಗ ವೈಶ್ಯನು ಶೂದ್ರನ ಮಗ ಶೂದ್ರನು.
ಆಪರಿ ತಪ್ಪದು ದಿಟದಿಟ ವಿಚಾರಿಸಿ ನೋಡಿರೇ ಅದು ಹೇಗೆಂದರೆ—

> " ಮಹಾ ಬ್ರಾಹ್ಮಣ ಮೀಶಾನವ್ " ಎಂದುದಾಗಿ ಮತ್ತಂ
> " ವಿರೂಪಾಕ್ಷಂ ದ್ವಿಜೋತ್ತಮವ್ " ಎಂದುದಾಗಿ

ಮಹಾಬ್ರಾಹ್ಮಣನೇ ಮಹಾದೇವನು

ಇವಕ್ಕೆ ಮತ್ತಂ ಶಿವರಹಸ್ಯದಲ್ಲಿ—

> ಗುರುದೇವೊ ಮಹಾದೇವೋ ಗುರುದೇವಃ ಸದಾಶಿವಃ ।
> ಗುರುದ್ದೈವಾತ್ಪರಂ ನಾಸ್ತಿ ತಸ್ಮೈ ಶ್ರೀಗುರವೇನಮಃ ॥

ಎಂದುದಾಗಿ ಮಹಾದೇವನೇ ಶ್ರೀಗುರು ಕಾಣಿರಂಣಾ
ಆ ಶ್ರೀಗುರುವಿನ ಕರಕಮಲದಲ್ಲಿ ಉದ್ಭವಿಸಿದ ತಚ್ಛಿಷ್ಯನೇ
ಮಹಾಬ್ರಾಹ್ಮಣನು ಇಂತೆಂಬುದು ಹುಸಿಯಲ್ಲ
ಜಾತಿ ಅಜಾತಿಯೆಂದು ಅಷ್ಟಾದಶ ಜಾತಿಯೊಳಗೆ ಇಕ್ಕಲಾಗದು
ಅಷ್ಟಾದಶ ಜಾತಿಗಳೊಳಗೆಂದೂ ಭಾವಿಸಲಾಗದು

ಆ ಮಹಿಮನೇ ಸತ್ಕುಲಜನು ಇದಕ್ಕೆ ಮತ್ತಂ—

" ಬ್ರಹ್ಮಾಚರತಿ ಬ್ರಾಹ್ಮಣಃ " ಎಂದುದಾಗಿ

ಆ ಮಹಾಮಹಿಮನು ಬ್ರಹ್ಮನಾಚರಿಸುವನಾತ ಬ್ರಾಹ್ಮಣನು

ಮತ್ತಂ ಕೂರ್ಮ ಪುರಾಣದಲ್ಲಿ "ಸವದ ಭಸ್ಮ ಜ್ಯೋತಿಃ" ಎಂದುದಾಗಿ

ವಿಭೂತಿಯ ಧರಿಸಿಪ್ಪವನಾಗಿ ಆ ಮಹಾತ್ಮನೇ ಜ್ಯೋತಿರ್ಲಿಂಗವು.

ಮತ್ತಂ ಶಿವಧರ್ಮದಲ್ಲಿ—

ರುದ್ರಾಕ್ಷಂ ಧಾರಯನ್ನಿತ್ಯಂ ರುದ್ರಃ ಸಾಕ್ಷಾದಿವಸ್ಮೃತಃ ।

ಎಂದುದಾಗಿ ರುದ್ರಾಕ್ಷಿಯಂ ಧರಿಸಿಪ್ಪನಾಗಿ ಆ ಮಹಾಮಹಿಮನೇ ರುದ್ರನು

ಮತ್ತಂ ಕಾಳಿಕಾಗಮದಲ್ಲಿ—

ತಸ್ಮಿನ್ವೇದಾಶ್ಚ ಶಾಸ್ತ್ರಾಣಿ ಮಂತ್ರಃ ಪಂಚಾಕ್ಷರೀ ತಥಾ ।

ಎಂದುದಾಗಿ ಶ್ರೀಪಂಚಾಕ್ಷರಿಯಂ ಜಪಿಸುವನಾಗಿ

ಆ ಮಹಾಮಹಿಮನೇ ವೇದ ವಿತ್ತು ಶಾಸ್ತ್ರಜ್ಞನು

ಮತ್ತಂ ಲೈಂಗೇ—

ಮೂಢಾನಾಮಪ್ಯಯುಕ್ತಾನಾಂ ಪಾಪಿನಾಂ ಜಾಭಿ ಚಾರಿಣಾಮ್ ।

ಯಮಲೋಕೋ ನವಿದ್ಯೇತ ಸದಾಪ್ಯೆ ಲಿಂಗಧಾರಣಾತ್ ॥

ಎಂದುದಾಗಿ ಲಿಂಗಧರಿಸಿಪ್ಪನಾಗಿ ಆ ಮಹಾಮಹಿಮನೇ

ಲಿಂಗದೇಹಿ ಲಿಂಗಕಾಯನು ಲಿಂಗಪ್ರಾಣನು

ಶಿವಾರ್ಚನೆಯಂ ಮಾಡುವನಾಗಿ ಆ ಮಹಾಮಹಿಮನೇ ಶಿವನು

ಮತ್ತಂ ಆದಿತ್ಯ ಪುರಾಣೇ—

ಅಕೃತ್ವಾ ಪೂಜನಂ ಶಂಭೋರ್ಯೋಭುಂಕ್ತೇ ಪಾಪಕೃದ್ದ್ವಿಜಃ ।

ಕುಣಪಂ ಚ ಮಲಂ ಚೈವ ಸಮಶ್ನಾತಿ ದಿನೇ ದಿನೇ ॥

ಎಂದುದಾಗಿ ಶಿವಲಿಂಗಕ್ಕೆ ಅರ್ಪಿಸದೆ ಕೊಳ್ಳನಾಗಿ

ಆ ಮಹಾಮಹಿಮನೇ ರುದ್ರನು

ಮತ್ತಂ ಶಾಂಕರ ಸಂಹಿತೆಯಲ್ಲಿ—

ಷೋಡಶಭಾಗಂತು ತೃಣಾಗ್ರಾಂಬು ಕಣೋಪಮಮ್ ।

ಪಾದೋದಕ ಪ್ರಸಾದಾನಾಂ ಸೇವನಾನ್ಮೋಕ್ಷ ಮಾಪ್ನುಯಾತ್ ॥

ಎಂದುದಾಗಿ ಪಾದೋದಕ ಪ್ರಸಾದವಂ ಕೊಂಬನಾಗಿ

ಆ ಮಹಾತ್ಮನು ತಾನೇ ಲಿಂಗೈಕ್ಯನು
ಇನ್ನು ನಾನಾವೇದ ಶಾಸ್ತ್ರ ಪುರಾಣಾಗಮಂಗಳ ಸಮ್ಮತ
ದೃಷ್ಟವಾಕ್ಯಂಗಳಿಗೆ
ವಿಚಾರಿಸಿ ನೋಡಿದರೆಯೂ ಶಿವಭಕ್ತನೇ ಕುಲಜನು ಶಿವಭಕ್ತನೇ
ಉತ್ತಮನು
ಇಂತಹ ಶಿವಭಕ್ತನನು ಜಾತಿ ವಿಜಾತಿಯೆಂದು ಭಾವಿಸಿದರೆ
ಮರ್ತ್ಯನೆಂದು ಭಾವಿಸಿದರೆ ನರಕ ತಪ್ಪದು

ವಾಶಿಷ್ಠ ಪುರಾಣದಲ್ಲಿ ಕೇಳಿರೇ—

> ಮರ್ತ್ಯವನ್ಮನುತೇ ಯಸ್ತು ಶಿವನಿಷ್ಠಂ ದ್ವಿಜಂ ನರಃ ।
> ಕುಂಭೀ ಪಾಕೇಷು ಪಚ್ಯೇತ ನರಕೇ ಕಾಲಮುಕ್ಷಯಮ್ ॥

ಎಂದುದಾಗಿ ಇದು ಕಾರಣ ಅಷ್ಟಾದಶವಿದ್ಯಂಗಳನು ವಿಚಾರಿಸಿ
ತಿಳಿದುನೋಡಿದರೆ
ಋಷಿಪುತ್ರನ ಋಷಿಯೆಂಬಂತೆ
ಶ್ರೀಗುರುಪುತ್ರನನು ಶ್ರೀಗುರು ಎಂದುದಯ್ಯಾ
ಆ ಮಹಾಮಹಿಮನ ದರ್ಶನವ ಮಾಡಿ
ಪಾದೋದಕ ಪ್ರಸಾದವ ಕೊಂಡು ಮುಕ್ತರಪ್ಪುದಯ್ಯಾ
ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ

## ಪೂರ್ವಾಶ್ರಯ ನಿರಸನ ಸ್ಥಲ ೧೩

ಇಂತೀ ಪ್ರಕಾರದಿಂ ಶ್ರೀಗುರುಕಾರುಣ್ಯವಂ ಪಡೆದು ಸದ್ಭಕ್ತರಾದವರ ಕುಲವೇ ಮಹಾಘನತರ ಉಳ್ಳುದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದ ಮಹಾಪುರಾತನರು.

ಇಂತಹ ಶ್ರೀಗುರು ಹಸ್ತಸರೋಜ ಸಂಭವರಾದ ವೀರ ಮಾಹೇಶ್ವರರುಗಳೇ ಜಾತಿವರ್ಣ ರಹಿತರೆಂದು ನುಡಿದ ವಚನಂಗಳು.

ಶಿವಧರ್ಮೇ—

ಸಂಸ್ಕೃತಾಃ ಶಿವಭಕ್ತಾಶ್ಚ ಪಂಚಸೂತಕ ವರ್ಜಿತಾಃ ।
ಸಂಸ್ಕಾರೇಷು ಚ ಸರ್ವೇಷು ಗುರುಕಾರುಣ್ಯಧಾರಕಃ ॥ ೧ ॥

ಲಿಂಗ ಸನ್ನಿಹಿತ ಶಿವಭಕ್ತಂಗೆ ಜಾತಿಸೂತಕ ಪ್ರೇತಸೂತಕಾದಿಗಳಿಲ್ಲ ಗುರುಕಾರುಣ್ಯವ ಪಡೆದ ಬಳಿಕ ಮತ್ತಾವ ಸೂತಕವು ಇಲ್ಲ.

ಭೀಮಾಗಮೇ—

ಸರ್ವಾಚಾರ ವಿಹೀನೋಽಪಿ ವರ್ಣಾಶ್ರಮ ವಿವರ್ಜಿತಃ ।
ಭಕ್ತಿಲೇಶಯುತಃ ಸ್ಕಂದ ಮತ್ಪ್ರಿಯೋ ದ್ವಿಗುಣಾಧಿಕಃ ॥ ೨ ॥

ಲೋಕಾಚಾರಮಂ ಬಿಟ್ಟು ತನ್ನ ಕುಲಧರ್ಮವಂ ಬಿಟ್ಟು ಶಿವಭಕ್ತಿ ಮಾರ್ಗವುಳ್ಳಡೆ ಆತನೇ ಎನಗೆ ಪ್ರಿಯನು ಎಂದು ಸ್ಕಂದಂಗೆ ದೇವರು ಹೇಳಿದರು.

ಸ್ಕಾಂದೇ—

ಶಿವಸಂಸ್ಕಾರ ಸಂಪನ್ನೇ ನ ಚ ಶೂದ್ರೋಹ್ಯಯೋ ದ್ವಿಜಃ ।
ಲಿಂಗಭೇದಃ ಕೃತೋಸ್ತೇನ ರೌರವಂ ನರಕಂ ವ್ರಜೇತ್ ॥ ೩ ॥

ಶಿವಸಂಸ್ಕಾರ ಸಂಪನ್ನನಾದ ಬಳಿಕ ಶೂದ್ರನೆಂಬುದು ಮತ್ತೆ ಇಲ್ಲ ಬ್ರಾಹ್ಮಣನೆಂಬುದು ಮತ್ತೆ ಇಲ್ಲ ಆವರು ಸದ್ಭಕ್ತರು ಇಂತಲ್ಲದೆ ಅಲ್ಲಿ ಭೇದವ ಮಾಡಿ ಕಂಡಡೆ ಮಹಾನರಕ ತಪ್ಪದು.

ಶಿವಧರ್ಮೇ—

ನಗರೀ ನಿರ್ಝರಾಸ್ಸ್ವಂಬು ಗಂಗಾಂ ಪ್ರಾಪ್ಯೈಕತಾಂ ಗತವತ್ ।
ದೀಕ್ಷಾಯೋಗಾತ್ತಥಾ ಮರ್ತ್ಯಾಃ ವಿಪ್ರಾದಿಃ ಶಿವತಾಂ ವ್ರಜೇತ್ ॥ ೪ ॥

ಊರೊಳಗಣ ಗ್ರಾಮಸಾರದುದಕವು ಗಂಗೆಯ ಕೂಡಿ ಹೇಗೆ ಪಾವನವಾಯಿತ್ತೋ ಆ ಕ್ರಮದಿಂ ಶಿವಸಂಸ್ಕಾರವಂ ಪಡೆವ ಎಲ್ಲ ಜಾತಿಯವರು ಒಂದೇ ಸಮಾನವಾಗಿ ಶಿವನಂ ಕೂಡುವರು.

ವಾಶಿಷ್ಠೇ—

ಅಷ್ಟಾದಶಾದಿವರ್ಣಾನಾಂ ಶ್ರೇಷ್ಠಸ್ತು ಶಿವಪೂಜಕಃ ।
ಶಿವೋಪದೇಶಾತ್ಸಂಪೂತಃ ಕಿಂಪುನಸ್ತಸ್ಯ ಬಾಂಧವಾಃ ॥ ೫ ॥

ಹದಿನೆಂಟು ಜಾತಿಯೆಲ್ಲಕ್ಕೂ ಶಿವಭಕ್ತನೇ ಅಧಿಕನು ಅದುಕಾರಣ ಬೇರೆ ಬಂಧುಗಳಿಲ್ಲ ಶಿವಭಕ್ತಂಗೆ ಶಿವಶರಣರುಗಳೇ ಬಂಧುಗಳು.

## ವಚನಗಳು

೧

ಶ್ರೀಗುರುಸ್ವಾಮಿ ಪೂರ್ವಾಶ್ರಯಮಂ ಕಳೆದು ಪುನರ್ಜಾತನಂ
ಮಾಡಿದ ಬಳಿಕ
ಪಂಚಭೌತಿಕ ಕಾಯವ ಕಳೆದು ಪ್ರಸಾದ ಕಾಯವ ಮಾಡಿದ ಬಳಿಕ
ವಾಯು ಪ್ರಾಣಿಯ ಕಳೆದು ಲಿಂಗ ಪ್ರಾಣಿಯ ಮಾಡಿದ ಬಳಿಕ
ಎಲ್ಲಿಯ ಕುಲಸೂತಕ ಎಲ್ಲಿಯ ಛಲಸೂತಕ
ಎಲ್ಲಿಯ ತನುಸೂತಕ ಎಲ್ಲಿಯ ಮನಸೂತಕ
ಎಲ್ಲಿಯ ನೆನಹು ಸೂತಕ ಎಲ್ಲಿಯ ಭಾವಸೂತಕ
ಇವನೆಂತು ಹಿಡಿಯಲಾಗದು ಸದ್ಭಕ್ತನು
ಕುಲಸೂತಕವುಳ್ಳನ್ನಕ್ಕರ ಭಕ್ತನಲ್ಲ
ಛಲ ಸೂತಕವುಳ್ಳನ್ನಕ್ಕರ ಮಹೇಶ್ವರನಲ್ಲ
ತನು ಸೂತಕವುಳ್ಳನ್ನಕ್ಕರ ಪ್ರಸಾದಿಯಲ್ಲ
ಮನಸೂತಕವುಳ್ಳನ್ನಕ್ಕರ ಪ್ರಾಣಲಿಂಗಿಯಲ್ಲ
ನೆನಹು ಸೂತಕವುಳ್ಳನ್ನಕ್ಕರ ಶರಣನಲ್ಲ
ಭಾವಸೂತಕವುಳ್ಳನಕ್ಕರ ಐಕ್ಯನಲ್ಲ
ಇಂತೀ ಸೂತಕವ ಮುಂದುಗೊಂಡಿಪ್ಪವರ
ಮುಖವ ನೋಡಲಾಗದು ಗುಹೇಶ್ವರಾ

೨

ಜಾತಿಸೂತಕ ಬಿಡದು ಜನನ ಸೂತಕ ಬಿಡದು
ಪ್ರೇತ ಸೂತಕ ಬಿಡದು ರಜಃ ಸೂತಕ ಬಿಡದು
ಎಂಜಲ ಸೂತಕ ಬಿಡದು ಕುಲಸೂತಕ ಬಿಡದು
ಇವರನೆಂತು ಭಕ್ತರೆಂಬೆ ಇವರನೆಂತು ಯುಕ್ತರೆಂಬೆ
ಶ್ರೀಗುರುಸ್ವಾಮಿ ಶಿಷ್ಯನ ಪೂರ್ವಾಶ್ರಯವ ಕಳೆದು
ಹಸ್ತಮಸ್ತಕ ಸಂಯೋಗವಂ ಮಾಡಿ ಉಪದೇಶವಿತ್ತಬಳಿಕ
ಕಾಡಗಿಚ್ಚಿನ ಕೈಯ್ಯಲ್ಲಿ ಕರಡವ ಕೊಯಿಸಿದಂತಿರಬೇಕು ಭಕ್ತನು
ಹಿಂದೆ ಮುಂದೆ ನಿಲವಿಲ್ಲ ಇದು ಕಾರಣ
~~ಕೂಡಲ ಚೆನ್ನಸಂಗಮದೇವಯ್ಯಾ~~ ಸದ್‌ಭಕ್ತಂಗೆ ಸೂತಕವ
ಮಾಡಲಿಲ್ಲ

೩

ಉಂಬಲ್ಲಿ ಉಡುವಲ್ಲಿ ಕುಲವು ಅಳಿಯಿತೆಂಬಿರಿ
ಕೊಂಬಲ್ಲಿ ಕೊಡುವಲ್ಲಿ ಕುಲವನರಸುವ ಮಾದಿಗರನೇನೆಂಬೆನಯ್ಯಾ
ಇವರನೆಂತು ಭಕ್ತರೆಂಬೆನಯ್ಯಾ ಇವರನೆಂತು ಯುಕ್ತರೆಂಬೆನಯ್ಯಾ
ಇವರು ಬಿಚ್ಚೊಬಿಚ್ಚಿ ಭಕ್ತರು ಬಿಚ್ಚೊಬಿಚ್ಚಿ ಭವಿಗಳು
ಅದೆಂತೆಂದಡೆ ಲೈಂಗೇ—

ಸ್ತ್ರೀವಾಥ-ಪುರುಷಃ-ಷಂಡಶ್ಚಂಡಾಲೋ ದ್ವಿಜವಂಶಜಃ
ನ ಜಾತಿಭೇದೋ ಲಿಂಗಾರ್ಚೇ ಸರ್ವೇರುದ್ರ ಗಣಾಃ ಸ್ಮೃತಃ ॥

ಎಂದುದಾಗಿ ಇಂತೆಂಬ ಪುರಾಣವಾಕ್ಯವ ತಿಳಿದು ನೋಡಿರೇ
ಸರ್ವರು ರುದ್ರಗಣಂಗಳೆಂದೇ ಸರ್ವರು ಸದ್ಭಕ್ತರೆಂದೇ
ಅವರಲ್ಲಿ ಕುಲವನೋಡದೆ ಆಚಾರವ ನೋಡಿ
ಅವರಿಗೆ ಬೇಕಾದ ಹೆಣ್ಣು ಕೊಟ್ಟು ತನಗೆ ಬೇಕಾದ ಹೆಣ್ಣು
ತಂದುಕೊಂಬುದು
ಈ ಕ್ರಮವನರಿಯದವರ ಭಕ್ತಿ ಹೊಲತಿ ಶುದ್ಧನೀರ
ಮಿದಂತಾಯಿತ್ತು
ಕೂಡಲಸಂಗಮದೇವಾ

೪

ಮಂಣಮಡಕೆ ಮಂಣಾಗದು ಮರಳಿ ಕ್ರಿಯೆಯುಳಿದು
ಬೆಂಣೆ ಕರಗಿ ತುಪ್ಪವಾಗಿ ಮರಳಿ ಬೆಂಣೆಯಾಗದು ಕ್ರಿಯೆಯುಳಿದು
ಕಬ್ಬುನವು ಹೊನ್ನಾಗಿ ಮರಳಿ ಕಬ್ಬುನವಾಗದು ಕ್ರಿಯೆಯುಳಿದು
ಮುತ್ತು ನೀರಲ್ಲಿ ಹುಟ್ಟಿ ಮರಳಿ ಮುತ್ತು ನೀರಾಗದು ಕ್ರಿಯೆಯುಳಿದು
ಮಾನವನು ನಮ್ಮ ಕೂಡಲ ಸಂಗನ ಶರಣನಾಗಿ
ಮರಳಿ ಮಾನವನಾಗನು ಶರಣನು ಕ್ರಿಯೆಯುಳಿದು

೫

ಕರ್ಮ ಜಾತವ ಕಳೆದು ಶ್ರೀಗುರು ಲಿಂಗವು ಪುಣ್ಯ ಜಾತನ
ಮಾಡಿದ ಬಳಿಕ
ಶಿವಕುಲವಲ್ಲದೆ ಅನ್ಯಥಾ ಕುಲವುಂಟೇ ಶರಣರಿಗೆ
ಆವಕುಲವಾದಡೇನು ಶಿವಲಿಂಗವಿದ್ದಾತನೇ ಕುಲಜನು
ಕುಲವನರಸುವರೇ ಶರಣರಲ್ಲಿ ಆಚಾರವನರಸಬೇಕಲ್ಲದೇ!
ಜಾತಿ ಸಂಕರನಾದಬಳಿಕ ಅದೆಂತೆಂದಡೆ ಶಿವಧರ್ಮದಲ್ಲಿ—

ಶಿವೇ ಜಾತಕುಲೋಧರ್ಮಃ ಪೂರ್ವಜನ್ಮ ವಿವರ್ಜಿತಃ ।
ಉಮಾ ಮಾತಾ ಪಿತಾರುದ್ರ ಈಶ್ವರಃ ಕುಲಏವ ಚ ॥

ಎಂಬುದಾಗಿ ನಿಮ್ಮ ಶರಣರ ಕುಲಕ್ಕೆ ಪ್ರತಿಗಾಣೆನು
ನಿಮ್ಮ ಕುಲವಲ್ಲದೇ ಅವರು ನಿಮ್ಮ ಪುತ್ರರು
ನಿಮ್ಮ ಕುಲಕ್ಕೆ ಪ್ರತಿಯಿಲ್ಲವಾಗಿ
ಕೂಡಲಸಂಗಮದೇವಯ್ಯಾ ನಿಮ್ಮ ಶರಣರಲ್ಲಿ
ಸೂತಕವನರಸುವವರಿಗೆ ನಾಯಕನರಕ ತಪ್ಪದು

## ಗುರುಭಕ್ತಿ ಶುಶ್ರೂಷಾ ಸ್ಥಲ ೧೪

ಇಂತೀ ಪ್ರಕಾರದಿಂ ಗುರುಕಾರುಣ್ಯವ ಪಡೆದು ಸದ್ಭಕ್ತನಾದ ಬಳಿಕ ಜಾತಿ ಧರ್ಮಾಶ್ರಯವಿಲ್ಲವೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಪೂರ್ವಾಶ್ರಯವಂ ಬಿಟ್ಟ ಸದ್ಭಕ್ತನು ಶ್ರೀಗುರುವಿಂಗೆ ಸೇವೆಯಂ ಮಾಡಬೇಕೆಂದು ನುಡಿದ ವಚನಂಗಳು.

ಶಿವಧರ್ಮೇ—

ಯೋಜನಾನಾಂ ಶತೈರ್ವಾಪಿ ದ್ವಿತ್ರಿಪಂಚ ಶತೈರಪಿ ।
ಗುರೋರಾರಾಧನಂ ಕೃತ್ವಾ ದ್ರಷ್ಟವ್ಯೋ ಭಕ್ತವತ್ಸಲಃ ॥ ೧ ॥

ಗಾವುದ ನೂರಾಗಲಿ ಇನ್ನೂರಾಗಲಿ ಮುನ್ನೂರಾಗಲಿ ನಾನೂರಾಗಲಿ ಐನೂರಾಗಲಿ ಗುರುವಿನಲ್ಲಿಗೆ ತಾ ಹೋಗಿ ದರ್ಶನವಂ ಮಾಡಿದಲ್ಲದೆ ಒಂದು ವರ್ಷವಂ ಮೀರಿ ಲಿಂಗವಂ ಪೂಜಿಸಲಾಗದು.

ಶಿವಧರ್ಮೇ—

ಧಾನ್ಯ ಸ್ವರ್ಣ ಪಶುಕ್ಷೇತ್ರ ದಾಸೀ ದಾಸಾಂಬರಾಣಿ ಚ ।
ಪರ್ಯಂಕಾದ್ಯಾ ಸನಾನ್ಯತ್ರ ತ್ರಿಪಾದಿ ಚಷಕಾದಯಃ ॥ ೨ ॥

ಧಾನ್ಯವು ಸುವರ್ಣವು ಪಶುಗಳು ಕ್ಷೇತ್ರಂಗಳು ತೊತ್ತಿರು ಬಂಟರು ವಸ್ತ್ರಂಗಳು ಮಂಚ ಮೊದಲಾದವು ಅಡ್ಡಣಿಗೆ ಪರಿಯಾಣ ತಟ್ಟೆ ಬಟ್ಟಲು ಮೊದಲಾದವು ಇವುಗಳನ್ನು ಗುರುವಿಗೆ ಕೊಡಬೇಕೆಂದು ತಾತ್ಪರ್ಯವು

ಯಃ ಪಶ್ಯತಿ ಗುರುಂ ಶಿಷ್ಯಃ ಸಾಧಾರಣ ಮನುಷ್ಯವತ್ ।
ತಸ್ಯಭಕ್ತಿರ್ವೃಥಾಲೋಕೇ ಶೃಣು ನಾಸ್ತ್ಯತ್ರ ಸಂಶಯಃ ॥

ಆವನೊಬ್ಬ ಶಿಷ್ಯನು ತನ್ನ ಶ್ರೀಗುರುವನು ಅಲ್ಪ ಮನುಷ್ಯರ ಕಂಡ ಹಾಗೆ ಕಾಣುತ್ತಿಹನೋ ಆತನು ಶಿವಲಿಂಗದಲ್ಲಿ ಮಾಡಿದ ಭಕ್ತಿಯೆಲ್ಲವೂ ವ್ಯರ್ಥವಹುದು ಅಲ್ಲೇನೂ ಸಂಶಯವಿಲ್ಲ.

ದೂರತೋಽಪಿ ಗುರುಂ ದೃಷ್ಟ್ವಾ ಉದಾಸೀನೇನ ಯೋವ್ರಜೇತ್ ।
ಶ್ವಾನಯೋನಿ ಶತಂ ಗತ್ವಾ ಚಂಡಾಲ ಗೃಹಮಾ ಚರೇತ್ ॥ ೪ ॥

ಗುರುವಂ ದೂರದಿಂ ಕಂಡು ಹೋಗದೇ ಹತ್ತಿರ ಬಂದಲ್ಲಿ ಉದಾಸೀನದಲ್ಲಿ ಕಂಡರೆ ಹೊಲೆಯರ ಮನೆಯ ನಾಯಾಗಿ ನೂರುಬಾರಿ ಹುಟ್ಟುವನು.

ತ್ರಿಕಾಲಮೇಕಕಾಲಂ ವಾ ಯಥಾಶಕ್ತಿ ಸಮಾಚರೇತ್ ।
ಯೋ ದೀಕ್ಷಾಂತೇ ಗುರೋರ್ಭಕ್ತ್ಯಾ ತಥಾದದ್ಯಾದ್ಧನಾದಿಕಮ್ ॥೫॥
ಸರ್ವಪಾಪವಿನಿರ್ಮುಕ್ತಃ ಸರ್ವೈಶ್ವರ್ಯಸಮೃದ್ಧಿಮಾನ್ ।
ಬ್ರಹ್ಮಲೋಕಾದಿಲೋಕೇಷು ಯಥೇಷ್ಟಂ ವಿಚರೇತ್ಸದಾ ॥ ೬ ॥

ಹೊತ್ತಾರೆ ಮಧ್ಯಾಹ್ನ ಸಾಯಂಕಾಲವಾದರೂ ಒಂದು ಹೊತ್ತಾದರೂ ತನ್ನ ಶಕ್ತ್ಯಾನುಸಾರದಿಂದ ಗುರುಪೂಜೆಯಂ ಮಾಡುವುದು ಆವನೊಬ್ಬನು ಭಕ್ತಿಯಿಂದ ಗುರುವಂ ಪೂಜಿಸಿ ದೀಕ್ಷೆಯಾದನಂತರದಲ್ಲಿ ತನ್ನ ದ್ರವ್ಯವನು ಗುರುವಿಗೆ ಸಮರ್ಪಿಸುವನೋ ಆತನು ಸಮಸ್ತ ಪಾಪಂಗಳಿಂ ಬಿಡಲ್ಪಟ್ಟಾತನಾಗಿ ಎಲ್ಲಾ ಐಶ್ವರ್ಯದಿಂದ ಯುಕ್ತನಹನು. ಬ್ರಹ್ಮಲೋಕ ಮೊದಲಾದ ಲೋಕಂಗಳಲ್ಲಿ ತನ್ನ ಮನಸ್ಸಿಗೆ ಬಂದ ಹಾಗೆ ಸುಖವನನುಭವಿಸಿ ನನ್ನ ಲೋಕದಲ್ಲಿ ತನ್ನಿಷ್ಟ ಬಂದಂತೆ ಸಂಚರಿಸುವನು.

## ವಚನಗಳು

೧

ಗುರುಶಿಷ್ಯಸಂಬಂಧವೇನೆಂದುಪನಿಸುವೆನಯ್ಯಾ
ಗುರುವಿನ ಒಂದಾಗಿ ಹೋಗಲುಬಾರದು ಅದೇಕೆಂದರೆ
ಗುರುವಿನ ನೆಳಲ ಮೆಟ್ಟದ ಹಾಗೆ ಹೋಗಬೇಕು
ಗುರುವಿದ್ದ ಊರಲ್ಲಿರಬಾರದು ಅದೇಕೆಂದರೆ
ತ್ರಿಕಾಲದಲ್ಲಿ ನಮಸ್ಕರಿಸದಲ್ಲದೆ ಇರಬಾರದು
ಗುರುವಿನಿದಿರಿನಲ್ಲಿ ಆಸನವನಿಕ್ಕಿ ಕುಳ್ಳಿರಲಾಗದು
ಅದೇನು ಕಾರಣವೆಂದರೆ ಆಸನವನಿಲ್ಲದೆ ಭೃತ್ಯನಾಗಿ ಕುಳ್ಳಿರಬೇಕು
ಗುರುವಿನ ಸಮುಖಂಜ್ಯೋತಿಯಲ್ಲಿ ಲಿಂಗಾರ್ಚನೆಯಂ ಮಾಡಲಾಗದು.
ಅದೇನು ಕಾರಣವೆಂದರೆ ಗುರುವಿಂಗೆ ಆರೋಗಣೆಯ
ಮಾಡಿಸಿದ ಬಳಿಕ ಪ್ರಸಾದವಂ ಕೊಂಬುದು

ಗುರುವಂಥವರಿಂಥವರೆಂದು ಕನಸಿನಲ್ಲಿ ಮನಸಿನಲ್ಲಿ ನಿಂದ್ಯವ ಮಾಡಿದರೆ
ಅಘೋರ ನರಕದಲ್ಲಿಕ್ಕದೆ ಬಿಡುವನೇ ನಮ್ಮ ಕೂಡಲಸಂಗಮದೇವರು

೨

ಗುರುವಿನ ವಾಕ್ಯವನುದಾಸೀನವ ಮಾಡಿ
ಗುರುಲಿಂಗಕ್ಕೆ ತನುಮನಧನವನೊಂಚಿಸುವವನ
ಗುರುವಿನ ಒಂದೇ ಆಸನದಲ್ಲಿ ಕುಳ್ಳಿರುವವನ
ಗುರುವಿಗೆ ಕೊಟ್ಟಿಹೆನೆಂದು ಕೊಡದಿರ್ದವನ
ಗುರುವಿನ ಮುಂದೆ ಹುಸಿಯ ನುಡಿವವನ
ಇಂತಪ್ಪ ಪಾಪಿಯ ಮುಖವ ನೋಡೆ ನೋಡೆ
ಅವನೊಡನೆ ಮಾತನಾಡೆ ಮಾತನಾಡೆ
ಆ ಪಾಪಿಯಿದಿರಿನಲ್ಲಿ ನಿಂದಿರೆ ನಿಂದಿರೆ
ಅದೆಂತೆಂದರೆ "ನವದಂತಿ ನಪಸ್ಯಂತಿ" ಎಂದುದಾಗಿ
ಇದು ಕಾರಣ ಕೂಡಲಚೆನ್ನಸಂಗಯ್ಯನೆಂಬ ಗುರುವನಂಬಿ
ಸರ್ವಸೇವೆಯ ಮಾಡದವಂಗೆ ನಾಯಕ ನರಕ ತಪ್ಪದು

೩

ಗುರುವ ನರನೆಂದೆನಾದಡೆ ಹಿಂದಣಭವಮಾಲೆ ಹಿಂಗದು
ಗುರುತಬ್ದಕ್ಕೆ ದೋಷವ ತಾಳಿದೆನಾದರೆ ಶ್ವಾನಗರ್ಭದಲ್ಲಿ
ಬಪ್ಪುದು ತಪ್ಪದು
ಗುರೂಪದೇಶವ ಮೀರಿದೆನಾದಡೆ ಏಳೇಳು ಜನ್ಮದ ಕರ್ಮ ಹಿಂಗದು
ಇದು ಕಾರಣ ಗುರುಲಿಂಗವು ಭರ್ಗೋದೇವನೆಂಬೆನು
ಇದುಕಾರಣ ಕೂಡಲಚೆನ್ನಸಂಗಯ್ಯಾ
ಈ ಗುರುವ ನಂಬದಿರ್ದಡೆ ಭವಹಿಂಗದು

೪

ಗತಿಪಥವನರಿವಡೆ ದಿಟವ ಸುಯಿದಾನವ ಮಾಡಬೇಕು
ಬೇರೆಯಾಚಾರವೆಂಬುದೇನು ಮರುಳೇ
ಶ್ರೀಗುರುವೆ ಪರಬ್ರಹ್ಮವಸ್ತುವೆಂದರಿದು ನಂಬುವದು ಮರುಳೇ

ದೂರೇಽಪಿ ಸ್ವಗುರುಂ ದೃಷ್ಟ್ವಾ ಉದಾಸೀನೇನ ಯೋ ವ್ರಜೇತ್ ।
ಶ್ವಾನಯೋನಿ ಶತಂ ಗತ್ವಾ ಚಂಡಾಲ ಗೃಹಮಾಚರೇತ್ ॥

ಎಂದುದಾಗಿ ಇದನರಿದು ಗುರುವನುದಾಸೀನವಮಾಡಲಾಗದು
ಅದೆಂತೆಂದಡೆ—

ಶಿವೇ ಕ್ರುದ್ಧೇ ಗುರುಸ್ತ್ರಾತಾ ಗುರೌ ಕ್ರುದ್ಧೇ ನ ಕಶ್ಚನ ।
ತಸ್ಮಾದಿಷ್ಟಂ ಗುರೋಃ ಕುರ್ಯಾತ್ಕಾಯೇನ ಮನಸಾ ಗಿರಾ ॥

ಎಂದುದಾಗಿ ಇದುಕಾರಣ ಗುರುವನುದಾಸೀನವ ಮಾಡಲಾಗದು
ಬಸವಪ್ರಿಯ ಕೂಡಲಚೆನ್ನಸಂಗಮದೇವಾ
ಹರಮುನಿದಡೆ ತಿಳುಹಿಕೊಳಬಹುದು
ಗುರುಮುನಿದರೆ ಏಳೇಳು ಜನ್ಮ ನರಕ ತಪ್ಪದು

೫೫

ಗುರುಕಾರುಣ್ಯವ ಪಡೆದೆವೆಂಬರು ಒಬ್ಬ ನಾಗಾದೇವೆಂಬದು
ಒಬ್ಬ ನಾಗಾದೆನೆಂಬ ಭಕ್ತಂಗೆ ಹಾಗೂ ಇಲ್ಲ ಹೇಗೆಯೂ ಇಲ್ಲ
ತನ್ನ ಸಕಲ ದ್ರವ್ಯವನು ಗುರುವಿಗೆ ಸಮರ್ಪಿಸಿಹನಾಗಿ
ಅದೆಂತೆಂದಡೆ ಶಿವರಹಸ್ಯದಲ್ಲಿ—

ಕರ್ಮಣಾ ಮನಸಾ ವಾಚಾ ಗುರೂಣಾಂ ಭಕ್ತಿವತ್ಸಲಃ ।
ಶರೀರಮರ್ಥಪ್ರಾಣಾಂಶ್ಚ ಸದ್ಗುರುಭ್ಯೋ ನಿವೇದಯೇತ್ ॥

ಎಂದುದಾಗಿ ಇಂತಹ ಗುರುವಿಂಗೆ ಒಪ್ಪಿಸಿದ ದ್ರವ್ಯವನು
ಮರಳಿ ವಂಚಿಸಿಕೊಂಬ ಭಕ್ತನ ಪರಿಯುಂತುಂಟೆಂದರೆ—
ಶಿವರಹಸ್ಯದಲ್ಲಿ—

ಗುರುದ್ರವ್ಯಾಭಿಲಾಷೇಣ ಗುರುದ್ರವ್ಯಸ್ಯ ವಂಚನಂ ।
ಕುರುತೇ ಗುರುಭಕ್ತೋ ಯೋ ಭವತಿ ಬ್ರಹ್ಮರಾಕ್ಷಸಃ ॥

ಎಂದುದಾಗಿ ಇಂತಹ ಗುರುದ್ರವ್ಯವಾವುದೆಂದಡೆ
ದೇಹಿಕದ್ರವ್ಯ ಭೌತಿಕದ್ರವ್ಯ ಆತ್ಮದ್ರವ್ಯ
ಇಂದ್ರಿಯ ದ್ರವ್ಯ ಜ್ಞಾನದ್ರವ್ಯವೆಂಬ ಪಂಚದ್ರವ್ಯವನು
ಉಭಯವಳಿದು ಷೋಡಶೋಪಚಾರದಲ್ಲಿ ಅರ್ಪಿಸಬಲ್ಲಡೆ
ಕೂಡಲ ಸಂಗಯ್ಯನಲ್ಲಿ ಆತನೇ ಗುರುಭಕ್ತನು

## ಪಾತ್ರಾಪಾತ್ರ ವಿವರಣ ಸ್ಥಲ ೧೫

ಇಂತೀ ಪ್ರಕಾರದಿಂ ಸದ್ಭಕ್ತರು ಶ್ರೀಗುರುವಿಂಗೆ ವಿಶ್ವಾಸದಿಂ ಸಕಲ ಸೇವೆಯಂ ಮಾಡಬೇಕೆಂಬುದು ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಗುರುಭಕ್ತಿ ಸಂಪನ್ನರಾದ ವೀರಮಾಹೇಶ್ವರರು ಅಪಾತ್ರ ದಾನವ ಮಾಡುವುದು ಕ್ರಮವಲ್ಲೆಂದು ನುಡಿದ ವಚನಂಗಳು.

ಶಿವಧರ್ಮೇ—

ಕಿಂಚಿದ್ವೇದಮಯಂ ಪಾತ್ರಂ ಕಿಂಚಿತ್ಪಾತ್ರಂ ತಪೋಮಯಮ್ ।
ಆಗಮಜ್ಞಸ್ಯ ಯತ್ಪಾತ್ರಂ ತತ್ಪಾತ್ರಂ ಕಾರಯಿಷ್ಯತಿ ॥
ಸರ್ವೇಷಾಮೇವ ಪಾತ್ರಾಣಾಮತಿ ಪಾತ್ರಂ ಮಹೇಶ್ವರಃ ॥೧॥

ವೇದವ ಬಲ್ಲವರು ತಪಸ್ವಿಗಳು. ಆಗಮಂಗಳ ಬಲ್ಲವರು ಇವರು ಪಾತ್ರಂಗಳೆನಿಸಿಕೊಂಬರು. ಈ ಪಾತ್ರಂಗಳು ಸಾಮಾನ್ಯಂಗಳು ಎಲ್ಲ ಪಾತ್ರಂಗಳಿಗೆ ಶಿವಮಾಹೇಶ್ವರರು ಮಹಾಪಾತ್ರಂಗಳು.

ಚತುರ್ವೇದಧರೋ ವಿಪ್ರಃ ಶಿವಭಕ್ತಿವಿವರ್ಜಿತಃ ।
ತಸ್ಯ ಕನ್ಯಾ ಸುವರ್ಣಾದಿ ದಾನೇನ ನರಕಂ ವ್ರಜೇತ್ ॥೨॥

ನಾಲ್ಕು ವೇದವ ಬಲ್ಲ ವಿಪ್ರನಾದೊಡೂ ಶಿವಭಕ್ತಿಯಿಲ್ಲದವಂಗೆ ಕನ್ನಿಕೆ ಸುವರ್ಣ ಮೊದಲಾದ ದಾನಂಗಳಂ ಕೊಟ್ಟಡೆ ನಿಷ್ಫಲವು ಮೇಲೆ ನರಕತಪ್ಪದು.

ಸಕೃಲ್ಲಿಂಗಾರ್ಚಕೇ ದತ್ವಾ ಭಿಕ್ಷಾಮಾತ್ರಂ ಚ ಯೋ ನರಃ ।
ಪದ್ಮೋ ದಶಸಹಸ್ರಾಣಾಂ ಪಿತ್ರೂಣಾಂ ತೃಪ್ತಿರಕ್ಷಯಮ್ ॥೩॥

ಆವನೊಬ್ಬನು ಲಿಂಗಾರ್ಚಕರಿಗೆ ಒಂದು ಭಿಕ್ಷಮಾತ್ರವನಾದರೂ ನೀಡಿದರೆ ಹತ್ತು ಸಾವಿರ ಪದ್ಮ ಪಿತೃಗಳಿಗೆ ಅಕ್ಷಯ ತೃಪ್ತಿಯಹುದು.

## ವಚನಗಳು

೧

ದ್ವಿಜರಿಗೆ ಕೊಟ್ಟು ಹಲಬರು ಕೆಟ್ಟರು
ಉದ್ಧರಿಸುವನೊಬ್ಬ ಜಂಗಮಕ್ಕೆ ಕೊಡಿರಿ
ವಿಷ್ಣು ಬ್ರಾಹ್ಮಣನಾಗಿ ಬಂದು ಬಲಿಯ ಭೂದಾನವ ಬೇಡಿದ
ಕೊಟ್ಟ ಬಲಿಯು ಭವ ಬಂಧಕ್ಕೆ ಸಿಲುಕಿದ
ಈಶ್ವರ ಜಂಗಮನಾಗಿ ಬಂದು ದಾಸಿಮಯ್ಯನ ವಸ್ತ್ರದ ಬೇಡೆ
ಕೊಟ್ಟ ದಾಸಿಮಯ್ಯಗೆ ತನೆಸಿಥಿಯ ಸಿತ್ತ
ವಿಷ್ಣು ಕಪಟಹಾರುವನಾಗಿ ಬಂದು ಕರ್ಣನ ಕವಚವ ಬೇಡಿದ
ಕೊಟ್ಟ ಕರ್ಣ ಕಾಳಗದಲ್ಲಿಯೇ ಮಡಿದ
ಕಾಮಾರಿ ಜಂಗಮನಾಗಿ ಬಂದು ಸಿರಿಯಾಳಸೆಟ್ಟಿಯ ಮಗನ
ಬೇಡಿದರೆ
ಕೊಟ್ಟ ಸಿರಿಯಾಳ ಕಾಂಚಿಯಪುರವ ಕೈಲಾಸಕೊಯ್ದ
ವಿಷ್ಣುನಾರಾಯಣನಾಗಿ ಬಂದು ನಾಗಾರ್ಜುನನ ಶಿರವ ಬೇಡಿದ
ಕೊಟ್ಟ ನಾಗಾರ್ಜುನನ ಶಿರವು ಹೋಯಿತ್ತು
ಶಿವನು ಜಂಗಮನಾಗಿ ಬಂದು ಸಿಂಧುಬಲ್ಲಾಳನ ವಧುವ ಬೇಡಿದ
ಕೊಟ್ಟ ಬಲ್ಲಾಳನು ಸ್ವಯಂ ಲಿಂಗವಾದ
ಇಹದಲ್ಲಿ ಲೇಸು ಪರದಲ್ಲಿಯೂ ಲೇಸು
ಕೊಡಿರೇ ನಮ್ಮ ಕೂಡಲಸಂಗನ ಶರಣಂಗೆ

೨

ಹಣವ ಕೊಟ್ಟು ಹಾದರವ ಮಾಡುವುದರಿಂದ
ಶಾರವ ಕೊಟ್ಟು ಸೂಳೆಗೆಂತ್ಯಬಾರದೇ
ಧರ್ಮವ ಮಾಡುವಲ್ಲಿ ಕರ್ಮವುಂಟು
ಧರ್ಮ ಕರ್ಮದ ಭೇದವನರಿದು ಮಾಡಲರಿಯರು ನೋಡಾ
ಅಡಗ ತಿಂಬವಂಗೆ ಸುರೆಯ ಕುಡಿಯುವಂಗೆ ಕೊಟ್ಟರೆ
ಆ ಫಲ ತಪ್ಪದು ಕೂಡಲಸಂಗಮದೇವಾ

೧

ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದು
ನೋಡಯ್ಯಾ
ನಾಯಿಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದು
ನೋಡಯ್ಯಾ
ಭೂತದೇಹಿಗಳ ಧನವು ಭೂತಗಳಿಗಲ್ಲದೆ-
ಪರಂಜ್ಯೋತಿ ಸ್ವರೂಪವಾದ ಜಂಗಮಕ್ಕೆ ಸಲ್ಲದು ನೋಡಯ್ಯಾ
ಇದು ಕಾರಣ ನಮ್ಮ ಕೂಡಲಸಂಗನ ಶರಣರಿಗಲ್ಲದೆ-
ಅನ್ಯರಿಗೆ ಮಾಡುವ ಅರ್ಥವು ವ್ಯರ್ಥ ಕಾಣಿರೋ

೨

ಅನವರತ ಮಾಡಿಹೆನೆಂದು ಉಪ್ಪರ ಗುಡಿಯ ಕಟ್ಟಿ
ಮಾಡದ ಭಕ್ತನ ಮನೆ ಅದು ಅಂದಣಗಿತ್ತಿಯ ಮನೆ
ಸರ್ವಜೀವ ದಯಾಪರನೆಂದು ಭೂತ ದಯಕ್ಕಿಕ್ಕುವನ ಮನೆಯದು
ಸ್ವಯಂ ದಾನದ ಕೇಡು ಅದೆಂತೆಂದಡೆ—
ಸೂಳೆಯ ಮಗ ಮೇಳ ಮಾಡಿದಡೆ
ತಾಯ ಹೆಸರಾಯಿತ್ತು, ತಂದೆಯ ಹೆಸರಿಲ್ಲ
ಅಂತಲ್ಲ ಕೇಳಿರಣ್ಣಾ ಬಸವರಾಜದೇವರು ಮೊದಲಾದ
ಪುರಾತನರ ಚಾರಿತ್ರವು
ಜಂಗಮವೇ ಲಿಂಗವೆಂದು ಜಂಗಮವೇ ಪತಿಯಾಗಿ ತಾವೇ ಸತಿಯಾಗಿ
ಅರ್ಥ ಪ್ರಾಣಾಭಿಮಾನದಲ್ಲಿ ವಂಚನೆಯಿಲ್ಲದೆ
ಸಮರ್ಪಿಸಿ ನಿರಾಭಾರಿಗಳಾದರು
ಹೀಗಲ್ಲದೆ ಕೀರ್ತಿಗೆ ಖ್ಯಾತಿಗೆ ಭೂತದಯಕ್ಕೆ ನೆರಹಿ ಮಾಡುವನು
ಮುಂದೆ ಹೊಲೆಯರ ಮನೆಯ ಹುಳಿತನಾಯ ಬಸುರಲ್ಲಿ
ಶತ ಜನ್ಮ ಪರ್ಯಂತರ ಬಪ್ಪುದು ತಪ್ಪದು
ಕೂಡಲ ಚೆನ್ನಸಂಗಮದೇವಾ

## ಕಾಮುಕ ಭಕ್ತಿನಿರಸನ ಸ್ಥಲ ೧೬

ಇಂತೀ ಪ್ರಕಾರದಿಂ ಅಪಾತ್ರದಾನಂ ಸದ್ಭಕ್ತರು ಮಾಡಲಾಗದೆಂದು ಪ್ರತಿಷ್ಠೆಯಿಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಅಪಾತ್ರ ದಾನಂಗಳಂ ಬಿಟ್ಟ ವೀರಮಹೇಶ್ವರರು ಹಿಂದಣ ಕರ್ಮಂಗಳಂ ಮಾಡಿದರೆ ಅವರು ಭಕ್ತರಲ್ಲೆಂದು ನುಡಿದ ವಚನಗಳು.

ಸೌರ ಸಂಹಿತಾಯಾಮ್—

> ಅನೃತಂ ಪರದಾರಾಶ್ಚ ತಥಾಭಕ್ಷ್ಯಸ್ಯ ಭಕ್ಷಣಮ್ ।
> ಅಶ್ರೌತ ಧರ್ಮಾಚರಣಂ ಕ್ಷಿಪ್ರಂ ನಾಶಯತೇ ಕುಲಮ್ ॥೨॥
> ಪರಸ್ತ್ರಿಯಂ ತು ಸದ್ಭಕ್ತಸ್ತ್ಯಜೇನ್ಮದ್ಯವಿವಾಚಿರಾತ್ ।

ಹುಸಿಯ ನುಡಿವುದು ಹಾದರವ ಮಾಡುವುದು ಅಲ್ಲದ ಆಹಾರಂಗಳಂ ಭುಂಜಿಸುವುದು ವೇದೋಕ್ತವಲ್ಲದೆ ಜೈನ ಚಾರ್ವಾಕಾದಿ ಅನಾಚಾರಂಗಳಂ ನಡೆಯಪ್. ಇವುಗಳಿಂದ ಕುಲಕ್ಷಯಮಕ್ಕುಂ ಮುಂದೆ ಮಹಾನರಕ ತಪ್ಪದು ಅದುಕಾರಣ ಪರಸ್ತ್ರೀಯರ ಸಂಭಾಷಣ ಸಂಗಮುಗಳನ್ನು ಬಲ್ಲ ಭಕ್ತರು ಮಾಡಲಾಗದು.

> ತ್ರಿಪುಂಡ್ರಧಾರೀ ಸತತಂ ಶಾಂತೋ ರುದ್ರಾಕ್ಷಕಂಕಣಃ ।
> ನಿರ್ದಂಭಃ ಸತ್ಯಸಂಕಲ್ಪೋ ಭಕ್ತಃ ಸ್ಯಾದುತ್ತಮೋತ್ತಮಃ ॥೩॥

ನಿರಂತರವೂ ವಿಭೂತಿ ರುದ್ರಾಕ್ಷಗಳ ಭಕ್ತಿಯಿಂ ಧರಿಸುವಾತನು ಹುಸಿಯಾಡದೆ ಪ್ರಪಂಚಿಲ್ಲದೆ ಡಂಭವಿಲ್ಲದೆ ಶಾಂತನಾಗಿಹ ಲಿಂಗಾರ್ಚಕನು ಶಿವಭಕ್ತರೊಳಗೆ ಅತಿ ಉತ್ತಮನು.

ಶಿವಧರ್ಮೇ—

> ಬ್ರಹ್ಮಹತ್ಯಂ ಸುರಾಂ ಮಾಂಸಂ ಪರಸ್ತ್ರೀ ಗುರುತಲ್ಪಕಮ್ ।
> ಮಾನಂ ಮದಂ ತಥಾ ಶೋಕಂ ದ್ವೇಷಂ ಚ ಪರಿವರ್ಜಯೇತ್ ॥೪॥

ಬ್ರಹ್ಮಹತ್ಯವನು ಸುರಾಪಾನವನು ಮಾಂಸನವನು ಪರಸ್ತ್ರೀಯನು ಗುರುವಿಂಗೆ ತಪ್ಪುವುದೂ ಅಹಂಕಾರವನೂ ಮದವನೂ ದ್ವೇಷವನೂ ಇವಂ ಶಿವಭಕ್ತನು ಮಾಡಲಾಗದು. ಮಾಡಿದರೆ ಮಹಾನರಕ ತಪ್ಪದು.

## ವಚನಗಳು

### ೧

ಈರೇಳು ಭುವನವನು ಒಡಲೊಳಗೆ ಇಂಬಿಟ್ಟುಕೊಂಡು
ಲಿಂಗರೂಪಾಗಿ ಭಕ್ತನ ಕರಸ್ಥಲಕ್ಕೆ ಬಂದು ಪೂಜೆಗೊಂಡಿತ್ತು
ನೋಡಾ
ಅಂತಹ ಅಗಮ್ಯ ಅಗೋಚರ ಲಿಂಗವೆಂದರಿದು-
ಭಕ್ತನು ತಾನು ಹಿಂದೆ ನಡೆವ ಜೂಜು ಬೇಂಟೆ ಚದುರಂಗ
ಲೆತ್ತ ಪೊಗಡೆಯಾಟಂಗಳಂ ಪರಿಹಾಸಕರ ಕೂಡಿಕೊಂಡು-
ಕೆಲದಾಡುವದಂ ಬಿಟ್ಟು ಬಂಧುವತೊರೆದು ಮುಂದೆ ಶಿವಪಥವಲ್ಲಿ-
ನಡೆಯಬಲ್ಲಾತನೇ ಸದ್ಭಕ್ತನಲ್ಲದೆ
ಹಣದಾಶೆಗೆ ಹಂಗಿಗನಾಗಿ ಗುಣದಾಸೆಗೆ ಅಮೇಧ್ಯವ ತಿಂದು
ಬಂಧುಗಳ ಬಿಟ್ಟು ಭಕ್ತಿಯಿಲ್ಲವೇ ಉಂಟೇ
ಎಂಬ ಪಂಚಮಹಾಪಾತಕರ ಮುಖವ ನೋಡಲಾಗದು
ಅವರ ಮಾತ ಕೇಳಲಾಗದು ಅದೆಂತೆಂದಡೆ
ಕತ್ತೆ ಭಕ್ತನಾದರೆ ಕಿಸುಕುಳವ ತಿಂಬುದ ಮಾಂಬುದೇ
ಬೆಕ್ಕು ಭಕ್ತನಾದರೆ ಇಲಿಯ ತಿಂಬುವ ಮಾಂಬುದೇ
ಹಂದಿ ಭಕ್ತನಾದರೆ ಹಡಿಕೆಯ ತಿಂಬುವ ಮಾಂಬುದೇ
ಶುನಕ ಭಕ್ತನಾದರೆ ಮೂಳೆ ಮಾಂಸವ ತಿಂಬುವ ಮಾಂಬುದೇ
ಕೋಳಿಯ ತಂದು ಪಂಜರವ ಕೂಡಿ ಅಮೃತಾನ್ನವ ನಿಕ್ಕಿ
ಸಲಹಿದರೆ ಅದುತಾನೆ ಮತ್ತೆ ತಿಂಬ ಹಮುಳಿಂಗೆ ಚಿತ್ರವನಿಕ್ಕುವದು
ಮಾಂಬುದೇ
ಇಂತೀ ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ
ಅನಾಚಾರವ ಬಿಟ್ಟು ಸದಾಚಾರದಲ್ಲಿ ನಡೆಯಬೇಕು
ಗುರುವಾದಡೂ ಆಗಲಿ ಭಕ್ತನಾದಡೂ ಆಗಲಿ
ತಾನ ಹಿಂದೆ ಭವಿಯಾಗಿದ್ದಾಗ ಭುಂಜಿಸುತ್ತಿದ್ದ
ಸುರೆ ಮಾಂಸ ಭಂಗಿ ಭವಿಸಂಗ ಭವಿಪಾಕ-

ಇಂತಿವ ಬಿಡದಿರ್ದವರುಗಳು
ಆ ಕತ್ತೆ ಚಿಕ್ಕ ಸೂಕರ ಸೊಣಗ ಕೋಳಿಗಿಂದತ್ತತ್ತ ಕಡೆ
ನೋಡಿರೇ

ಅದೆಂತೆಂದರೆ ಅದಕ್ಕೆ ವೀರಾಗಮದಲ್ಲಿ—

> ಕಿಂ ಮಾಸಂ ಕಾ ಶಿವೇ ಭಕ್ತಿಃ ಕಿಂ ಮದ್ಯಂ ಕಃ ಶಿವಾರ್ಚಕಃ ।
> ಮದ್ಯ ಮಾಂಸ ರತಾನಾಂ ಚ ದೂರೇ ತಿಷ್ಠಾಮಿ ಶಾಂಕರೀ ।
> ಪಶುಂ ಹತ್ವಾ ಸುರಾಂ ಪೀತ್ವಾ ಕೃತ್ವಾ ಪಲಲಭೋಜನಮ್ ।
> ಯೋಸ್ಯೈವಂ ಗಮ್ಯತೇ ಸ್ವರ್ಗಂ ನರಕಂ ತೇನ ಗಮ್ಯತೇ ॥

ಎಂದುದಾಗಿ ಚಿನ್ನದ ಚಿಟ್ಟವನೇರಿದವನು ಕಂಣಕಾಣದಿಪ್ಪಂತೆ-
ಗಣೆಯನೇರಿದ ಡೊಂಬ ಮೈಮರದಿಪ್ಪಂತೆ
ಅಂಕಕ್ಕೆ ಹೋದ ಬಂಟ ಕೈಮರೆದಿಪ್ಪಂತೆ
ನಡುನೀರಿಗೆ ಹೋದ ಹರಗೋಲು ತಲೆ ಕೆಳಗಾದಂತೆ ಕಾಣಾ
ಕೂಡಲ ಸಂಗಮದೇವಾ

೩

ಸೂಳೆ ಸುರೆ ಚಿಕ್ಕ ನಾಯಿ ಅಸ್ಯೈವ
ಭವಿ ತಾಳಪಂಣು ಈಸೊಂದುಳ್ಳನ್ನಕ್ಕರ ಭಕ್ತನಲ್ಲ
ಶಿವದ್ರೋಹಿ ವ್ರತಗೇಡಿ ಈಸೊಂದುಳ್ಳನ್ನಕ್ಕರ ಯುಕ್ತನಲ್ಲ
ಅದೆಂತೆಂದಡೆ ವೀರತಂತ್ರದಲ್ಲಿ—

> ಮೃಗಯಾಮದ್ಯಪೋ ವೇಶ್ಯಾ ಅಸ್ಯೈವಸ. ಪೂಜಕಃ ।
> ತತ್ಸಂಗೀ ಚ ಮಹಾ ದ್ರೋಹೀ ಸಲಿಂಗೀ ಭವಿನಾ ಸಮಃ ॥

ಎಂದುದಾಗಿ ಸೂಕರನು ಅಶುದ್ಧವ ತಿಂದು
ಅದು ಬಂದರ ಮುಸುಡ ಬಂದು ಮೂಸಿ ನೋಡುವಂತೆ
ಅನಾಚಾರಂಗಳಂ ಬಿಡದವನು
ಆ ಸೂಕರನೋಪಾದಿ ಕಾಣಾ ಕಲಿದೇವರ ದೇವಾ

೪

ವಿಭೂತಿಯನಿಟ್ಟು ರುದ್ರಾಕ್ಷಿಯಂ ಧರಿಸಿ
ಪಂಚಾಕ್ಷರಿಯಂ ಜಪಿಸಿ ಕೃತಾರ್ಥರಾದೆವೆಂಬ

ಪಂಚ ಮಹಾ ಪಾತಕರು ನೀವು ಕೇಳಿರೋ ಅದೆಂತೆಂದಡೆ
ವಿಭೂತಿಯನಿಟ್ಟು ವಿಶ್ವಾಸವಿಲ್ಲವಾಗಿ
ರುದ್ರಾಕ್ಷಿಯ ಧರಿಸಿ ರುದ್ರಗಣಂಗಳನರಿಯದಾಗಿ
ಪಂಚಾಕ್ಷರಿಯ ಜಪಿಸಿ ಪಂಚಮಹಾಪಾತಕವ ಬಿಡದಾಗಿ
ಅವಾವವೆಂದಡೆ ಹುಸಿ ಕೊಲೆ ಕಳವು ಪರದಾರ
ತಾಮಸ ಭಕ್ತಸಂಗ ಇಂತಿವ ಬಿಡದನ್ನಕ್ಕರ
ಶಿವಭಕ್ತನೆನಿಸಿಕೊಳಬಾರದು ನೋಡಾ ಅದೆಂತೆಂದಡೆ—

> ಸರ್ವಾಚಾರ ಪರಿಭ್ರಷ್ಟಃ ಶಿವಾಚಾರಸ್ಯ ಮೇಲನಮ್ ।
> ಶಿವಾಚಾರ ಪರಿಭ್ರಷ್ಟೋ ನರಕೇ ಕಾಲಮಕ್ಷಯಮ್ ॥

ಎಂದುದಾಗಿ ಕಸಕೊಂಡ ಭೂಮಿಯಲ್ಲಿ ಸಸಿಪಲ್ಲವಿಸುವುದೇ
ಹುಸಿಯಿದ್ದಲ್ಲಿ ಶಿವಭಕ್ತಿನೆಲೆಗೊಂಬುದೇ
ಬಸವಗತಿಯೆನುತ ಹಿರಿದಾಗಿ ಭಸಿತವ ಪೂಸಿಕೊಂಡಿರ್ದ
ಕುನ್ನಿಗಳೆಲ್ಲರೂ ಸದ್ಭಕ್ತರಾಗಬಲ್ಲರೇ
ಆತನ ಭವಿಪಾಕ ತಿಂಬುದೆಲ್ಲವೂ ಅಸ್ಯತ್ಸೈವವೆಂಜಲು
ಮತ್ತೆ ಮರಳಿ ವ್ಯಸನಕ್ಕೆ ದಾಸಿ ವೇಸಿ ಹೊಲತಿ ಮಾದಗಿತ್ತಿ
ಡೊಂಬತಿ
ಮೊದಲಾದವರಿಗೆ ಹೇಸದೆ ಆಸೆಯ ಮಾಡುವವರ ಭಕ್ತಿಯು
ತೆರನೆಂತೆಂದಡೆ
ಸೂಕರನ ದೇಹವ ತೊಳೆದರೆ
ಅದು ಕೂಡ ಅಶುದ್ಧದೊಳಗೆ ಹೊರಳಿದ ತೆರನಾಯಿತ್ತೆಂದನು
ಕಲಿದೇವರದೇವಾ

## ತಾಮಸ ಮಾಹೇಶ ನಿರಸನ ಸ್ಥಲ ೧೭

ಇಂತೀ ಪ್ರಕಾರದಿಂ ಅಂಗದ ಮೇಲೆ ಲಿಂಗವಿದ್ದು ಶಿವಾಚಾರದ ಸಕೀಲವನರಿದಾಚರಿಸಲರಿಯದೆ ತಾಮಸಿಗಳಾಗಿರ್ಪವರು ಸದ್ಭಕ್ತಿ ಸ್ಥಲಕ್ಕೆ ಸಲ್ಲರೆಂಬುದಂ ಪ್ರತಿಷ್ಠೆಯಂ ಮಾಡಿನುಡಿದರ್ಮಹಾಪುರಾತನರು.

ಇಂತಹ ತಾಮಸ ಭಕ್ತಂಗೆ ಶಿವಭಕ್ತಿನಿಷ್ಠೆ ದೊರಕೊಳ್ಳದೆಂಬುದನರುಪಲೋಸ್ಕರ ನುಡಿದ ವಚನಂಗಳು.

ಶಿವಧರ್ಮೇ—

ಸ್ವಜಾತಿ ಕುಲಧರ್ಮಾಂಶ್ಚ ಲಿಂಗನಿಷ್ಠಾ ವಿರೋಧಿನಃ
ತ್ಯಜೇನ್ಮಾಹೇಶ್ವರೋ ಜ್ಞೇಯಃ ಪೂರ್ವಾಶ್ರಮ ನಿರಾಸಕಃ ॥೧॥

ಲಿಂಗ ನಿಷ್ಠೆಯಿಲ್ಲದವರು ತನ್ನ ಜಾತಿಯವರೆಂಬ ಭ್ರಾಂತಿಯನು ತನ್ನ ಕುಲವೆಂಬ ಆಚಾರ ಧರ್ಮವನು ಬಿಡುವುದೀಗಳೇ ಪೂರ್ವಾಶ್ರಮ ನಿರಸನವಾದ ಮಾಹೇಶ್ವರನೆಂದರಿವುದು.

ಯೋ ದೀಕ್ಷಿತಸ್ತು ಶ್ರಾದ್ಧಾದೌ ಸ್ವಪೂರ್ವ ವಿಧಿಮಾಚರೇತ್ ।
ನಿಷ್ಫಲಂ ತಸ್ಯ ಸರ್ವಂ ಚ ಸಮಯೇನ ಚ ಲಂಘ್ಯತೇ ॥೨॥

ಆವನೊಬ್ಬನು ಶಿವದೀಕ್ಷಿತನಾಗಿದ್ದು ಶ್ರಾದ್ಧ ಮೊದಲಾದ ಕೃತ್ಯದಲ್ಲಿ ತನ್ನ ಮುನ್ನಿನ ಕ್ರಿಯೆಯನ್ನು ಮಾಡುವನೋ ಆತನು ಭಕ್ತನಲ್ಲ ಆತನು ಮಾಡಿದ ಕೃತ್ಯವೆಲ್ಲವೂ ನಿಷ್ಫಲ ಶಿವಾಚಾರದಿಂದವನು ಬಿಡಲ್ಪಡುತ್ತಿಹನು.

ನ ಚಿಂತಯತಿ ಮಾಹೇಶಃ ಶಬ್ದಂ ತದ್ವರ್ತನಾಶುಭಾನ್ ।
ಪಪ್ರಾಪ್ಯಂ ನಪದ್ಯತೇ ಚಾನ್ಯಂವ್ಯತೇ ಭೂತೇಶ್ವರಾಲಯಾತ್ ॥೩॥

ಆ ವೀರಮಾಹೇಶ್ವರನು ಪರಮೇಶ್ವರನಿಂದ ಬೇರಾದ ಇತರ ದೇವತಾನಾಮವನು ಅಂಗೀಕರಿಸನು. ಶಿವಾಲಯಕಿಂ ಹೊರಗಾದ ಮತ್ತೊಂದು ದೇವಾಲಯವನು ಪಾದಂಗಳಿಂದಲ್ಲೈದುತ್ತಿರನು.

## ವಚನಗಳು

೧

ನಿಷ್ಠೆ ನಿಬ್ಬೆರಗು ಗಟ್ಟಿಗೊಂಡರೆ ಏಕೋಭಾವದಲ್ಲಿ
ಸೊಮ್ಮು ಸಂಬಂಧ ಆಹ್ವಾನ ವಿಸರ್ಜನ ದುರ್ಬುದ್ಧಿ-
ಲಯವಾದರೆ ಆತ ಮಾಹೇಶ್ವರನು
ಗುರುಮುಖದಲ್ಲಿ ಸರ್ವಶುದ್ಧನಾಗಿ
ಪಂಚಭೂತದ ಹಂಗಡಗಿದರೆ ಆತ ಮಾಹೇಶ್ವರನು
ಪರದೈವ ಮಾನವಸೇವೆ ಪರಸ್ತ್ರೀ ಪರಧನವಂ ಬಿಟ್ಟು
ಏಕಲಿಂಗ ನಿಷ್ಠಾಪರನಾದಡೆ ಆತ ಮಾಹೇಶ್ವರನು
ಅದೆಂತೆಂದಡೆ ವೀರಾಗಮದಲ್ಲಿ—

ಸ್ವಾಮಿ ಭೃತ್ಯ ಸಮೋಪೇತಂ ಪರದೈವ ವಿವರ್ಜಿತಮ್ ।
ಮದ್ಭಕ್ತಿಕಾಂಕ್ಷಿತಂ ಚಿತ್ತಂ ವೀರದಾಸತ್ವ ಸಜ್ಜನಮ್ ॥

ಇಂತೆಂಬ ಶ್ರುತ್ಯರ್ಥದಲ್ಲಿ ನಿಹಿತನಾಗಬಲ್ಲಡೆ ಆತ ಮಾಹೇಶ್ವರನು
ಗುರುಮಾರ್ಗವೇ ತನಗೆ ಸಮ್ಮತವಾಗಿ
ತನ್ನಮಾರ್ಗವೇ ಗುರುವಿನಲ್ಲಿ ಸಮ್ಮತವಾಗಿರಬಲ್ಲಡೆ ಆತ
ಮಾಹೇಶ್ವರನು
ಈ ಪಥವನರಿಯದೆ ನಾನು ಮಾಹೇಶ್ವರನೆಂಬ
ಮೂಕೊರೆಯನ ಮೆಚ್ಚುವನೇ ನಮ್ಮ ಕೂಡಲಸಂಗಮದೇವಾ

೨

ಹಾದರು ಸೂಳೆಗೆ ಕಟಕಿ ವಿದ್ಯಾಸಂಗೆ ಮದ್ದುಮಂತ್ರ ಹಾವಡಿಗಂಗೆ
ಗೆಲ್ಲ ಸೋಲು ಮಚ್ಚರ ಕೋಲಾಟಕರಿಗಲ್ಲದೆ ಶಿವಭಕ್ತರಿಗುಂಟೇ
ಅಯ್ಯಾ
ಒಬ್ಬರಿಗೊಬ್ಬರು ಮಚ್ಚರಿಸಿ ನರಕಕ್ಕಿಳಿಯಬೇಕೆಂದು-
ಕೊಟ್ಟನೇ ಶ್ರೀಗುರು ಲಿಂಗವನು ಇಲ್ಲವಾಗಿ
ಗುರುಲಿಂಗ ಜಂಗಮವೇ ಶಿವನೆಂದರಿದು
ಅರ್ಥಪ್ರಾಣಾಭಿಮಾನಂಗಳಂ ಕೊಟ್ಟ ಸದ್ಭಕ್ತನಂ ಕಂಡು
ನಿಂದಿಸಿದರೆ

ಒಂದು ಬಾರಿಯಾದರೂ ಆ ಭೋಗ ಮೂರ್ತಿಯಾದ-
ಜಂಗಮಲಿಂಗವ ನಿಂದಿಸಿದರೆ
ಕೋಟಿಯುಗ ಪರ್ಯಂತರ ಅಮೇಧ್ಯದೊಳಗಣ ಹುಳುವಾಗಿ-
ಹುಟ್ಟುತ್ತ ಸಾವುತ್ತಲಿಹನು ಅದೆಂತೆಂದಡೆ

ಶಿವರಹಸ್ಯದಲ್ಲಿ—

ಲಿಂಗಭಕ್ತಂ ಸಕೃದ್ದ್ವೇಷೀ ಸಕೃಲ್ಲಿಂಗಸ್ಯ ದೂಷಕಃ ।
ಯುಗ ಕೋಟಿ ಕ್ರಿಮಿಂ ಭುಕ್ತ್ವಾ ವಿಷ್ಠಾಯಾಂ ಜಾಯತೇ ಪುನಃ ॥

ಎಂದುದಾಗಿ ಇದನರಿದು ಶಿವಭಕ್ತರು ಮದಮತ್ಸರವ ಬಿಟ್ಟು
ಗುರುಲಿಂಗ ಜಂಗಮಕ್ಕೆ ಅರಿದು ದಾಸೋಹವ ಮಾಡುವ
ಸದ್ಭಕ್ತನನು ಶಿವನೆಂದು ಕಾಣದಿರ್ದಡೆ
ಅಘೋರ ನರಕದಲ್ಲಿಕ್ಕನೆ ಮಾಬನೆ ನಮ್ಮ ಕೂಡಲ
ಚೆನ್ನಸಂಗಮದೇವಾ

೨

ಗುರುಲಿಂಗ ಜಂಗಮವೇ ಶಿವನೆಂದರಿದು ಮರೆದವನು
ಶಿವಭಕ್ತನೇ ? ಅಲ್ಲ ಶಿವಭಕ್ತನು ಅರಿದ ಬಳಿಕ ಮರೆಯನು
ಅರಿದು ಮರೆದವನು ಮದ್ದುಗುಣಿಕೆಯ ಮೆದ್ದವನು
ಮದ್ಯಮಾಂಸವನು ಸೇವಿಸಿದವನು
ಅರಿದು ಮರೆದವನು ಅಜ್ಞಾನಿಗಳ ಸಂಗವ ಮಾಡಿದವನು
ಶ್ವಾನನ ಮಿತ್ರನು
ಅವಂದಿರುಗಳಿಗೆ ಅರಿವೂ ಮರವೆಯೂ ಸಹಜವಾದ ಕಾರಣ
ಅರಿದು ಮರೆವವನಲ್ಲ ಶಿವಭಕ್ತನು
ಮರೆದು ಅರಿವವನಲ್ಲ ಶಿವಭಕ್ತನು
ನಂಬುವವನಲ್ಲ ಶಿವಭಕ್ತನು ನಂಬಿಗೆಗೆಡುವವನಲ್ಲ ಶಿವಭಕ್ತನು
ವಿಶ್ವಾಸವ ಮಾಡುವವನಲ್ಲ ಶಿವಭಕ್ತನು
ಅವಿಶ್ವಾಸವ ಮಾಡುವವನಲ್ಲ ಶಿವಭಕ್ತನು
ಮರೆದಡೆ ಆ ಮರೆದವರಂತೆ ಅರಿದಡೆ ಶಿವನಂತೆ ಕಾಣಾ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

೬

ಕೃತಯುಗ ತ್ರೇತಾಯುಗ ದ್ವಾಪರಯುಗ ಕಲಿಯುಗವೆಂಬ
ನಾಲ್ಕುಯುಗಂಗಳಿಗೆ
ಸತ್ಯಲೋಕ ತಪೋಲೋಕ ಜನಲೋಕ ಸ್ವರ್ಗಲೋಕಕ್ಕೆ
ಅತಿಶಯವೆನಿಪ
ರುದ್ರಲೋಕವನೆ ಮರ್ತ್ಯಕ್ಕೆ ತಂದು ಕಲ್ಯಾಣವಂ ಮಾಡಿ
ಮಹಾಘನತರಮಪ್ಪ ಭಕ್ತಿಯುಂ ಪುಟ್ಟಿಸಿದ
ಬಸವರಾಜದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ
ದಿವ್ಯ ಶ್ರೀಪಾದ ಪದ್ಮಾರಾಧಕನಾಗಿ ನಾನು ಬಲ್ಲೆನೆಂಬ ಗರ್ವವಿಲ್ಲದೆ
ನೀವು ಕೊಟ್ಟ ಅನುಗ್ರಹದ ಬಿನ್ನಪವನವಧರಿಸುವುದು
ಭಕ್ತಿಸೂಕ್ಷ್ಮ ಭಕ್ತಿಕಟ್ಟಳೆಯ ಕ್ರಮವನು
ಶರಣಸತಿ ಲಿಂಗಪತಿಯಾದ ಸಂಬಂಧವನು
ಪಾದೋದಕ ಪ್ರಸಾದವಂ ಕೊಂಬ ನಿರ್ಣಯವನು
ಇಂತೀ ಶಿವಾದ್ವೈತ ಸತ್ಕ್ರಿಯಾಚಾರವನು
ನಾನು ಬಿಲ್ಲಿಪ್ಪನು ಬಾಲನ ತೊದಲು ನುಡಿಯಿಂದ
ವಿಸ್ತರಿಸಿ ಪೇಳ್ವೆನು ಮಹಾಮಹಿಮರು ಕೇಳಿರಯ್ಯಾ
ಶೈವ ಸ್ವೈರೆಗಾದ ಪಾಶುಪತಿ ಪಥವನರಿಯು
ಕಾಳಾಮುಖ ಕಂಗೆಟ್ಟ ಮಹಾವ್ರತಿ ಮದವೇರಿದ
ಸನ್ಯಾಸಿ ಪಾಷಂಡಿಯಾದ ಕಾಪಾಲಿ ಮರುಳಾಗಿ ತಿರುಗಿದ
ಈ ಆರುದರ್ಶನಂಗಳು ಸದ್ಭಕ್ತಿಯ ಪಥಕ್ಕೆ ಸಲ್ಲವು ಕೇಳಿರಣ್ಣಾ
ಏಳೇಳು ಭವದಲ್ಲಿ ಭವಿಂತಾಗಿ ಬಂದು
ಶ್ರೀಗುರುವಿನ ಕರುಣಾ ಕಟಾಕ್ಷ ನಿರೀಕ್ಷಣೆಯಿಂದ
ಅಂಗದ ಮೇಲೆ ಲಿಂಗ ಪ್ರತಿಷ್ಠೆಯುಂ ಮಾಡಿಕೊಂಡು
ಆರುದರ್ಶನಂಗಳಂ ಮೀರಿದ ಸ್ಥಲವಿಟ್ಟು
ವೀರ ಮಾಹೇಶ್ವರತ್ವಮುಂ ಪಡೆದು
ಮರಳಿ ತನ್ನ ಪೂರ್ವದ ಕುಲವಂ ಬೆರಸಿದಡೆ
ಒಡೆದ ಮಡಿಕೆಯ ಓಡಿನಂತಹರು ಕೇಳಿರಣ್ಣಾ

ಮತ್ತೆ ತನ್ನ ಬಂಧುಗಳೆಂದು ಪ್ರಾಣಸ್ನೇಹವಂ ಮಾಡಿ
ಮಾಯಾ ಮೋಹದಿಂ ಕಿಂಚಿನ್ಮಾತ್ರ ಬೆರಸಿದಡೆ
ಅವ ಪಂಚಮಹಾ ಪಾತಕ ರೌರವನರಕಿ
ಅವ ಭಕ್ತನೆಂದು ನೋಡಿದಡೆ ನುಡಿಸಿದಡೆ ಸಮಪಙ್ಕ್ತಿಯಲ್ಲಿ ಕುಳ್ಳಿತ್ತರೆ
ಅವನಿಗೆ ಕುಂಭೀ ಪಾತಕ ನಾಯಕನರಕ ತಪ್ಪದು ಕೇಳಿರಣ್ಣಾ
ಅದೆಂತೆಂದಡೆ ಭಕ್ತಂಗೆ ಭವಿನೇಮಸ್ಥರು ಸಲ್ಲರಾಗಿ
ಅದೇನು ಕಾರಣವೆಂದಡೆ ಭವಿಯೋ ಶ್ವಪಚ ನಿಯಮಸ್ಥನೇ ಸಮ್ಯಗಾರ
ಅದೆಂತೆಂದಡೆ ಲೈಂಗೇ—

> ಶ್ವಪಚೋಽಪಿ ಮುನಿಶ್ರೇಷ್ಠಃ ಶಿವಭಕ್ತೋ ದ್ವಿಜಾಧಿಕಃ ।
> ಶಿವಭಕ್ತಿ ವಿಹೀನಸ್ತು ದ್ವಿಜೋಽಪಿ ಶ್ವಪಚಾಧಮಃ ॥

ಎಂದುದಾಗಿ ಇವರಿಬ್ಬರನು ಸತಿಸುತ ಮಿತ್ರರೆಂದು
ಮತವ ಹೋಗಿಸಿದರೆ ಅನ್ನವನಿಕ್ಕದಡೆ
ಸುರೆಯ ಮಡಿಕೆಯಲ್ಲಿ ಘೃತವ ತುಂಬಿ
ಶ್ವಾನನ ತಂದು ತಿನ್ನಿಸಿ ಮಿಕ್ಕುದ ತಾ ತಿಂದಂತೆ ಕೇಳಿರಣ್ಣಾ
ಭಕ್ತನು ಆರೋಗಣೆಯ ಮಾಡಿದ ಪತ್ರಭಾಜನವ
ಶ್ವಾನ ಸೂಕರ ಕುಕ್ಕುಟ ಮಾರ್ಜಾಲಂಗಳು ಮುಟ್ಟಿದಡೆ
ಅವರ ಕೂಡ ತಾನು ಸಹಭೋಜನವ ಮಾಡಿದಂತೆ ಕೇಳಿರಣ್ಣಾ
ಗುರುಲಿಂಗಜಂಗಮಕ್ಕೆ ಎರಡು ಪಾದಂಗಳಂ ಚನ್ನಾಗಿ ಪ್ರಕ್ಷಾಲಿಸಿ
ಗಂಧಾಕ್ಷತೆ ಪುಷ್ಪಂಗಳಿಂ ಪೂಜಿಸಿದ ಬಳಿಕ
ಅರಿವುಳ್ಳ ಶಿವಭಕ್ತನು ಪಾದೋದಕಮಂ ಕೊಂಬುದು
ಗುರುಲಿಂಗ ಜಂಗಮಕ್ಕೆ ಅರ್ಪಿತವಂ ಮಾಡಿ
ವಕ್ಕ ಮಿಕ್ಕ ಪ್ರಸಾದಮಂ ಭೋಗಿಸುವಲ್ಲಿ
ಪದಾರ್ಥವೆಂದು ಭಾವಿಸಿದಡೆ ಅದೇ ಪ್ರಸಾದದ್ರೋಹ

> ಪ್ರಸಾದಂ ದ್ರವ್ಯಭಾವೇನ ರೌರವಂ ನರಕಂ ವ್ರಜೇತ್ ।

ಎಂದುದಾಗಿ ಇನ್ನು ಸದ್ಭಕ್ತನು ಅನೃತ ಅಸ್ಥಿರವಾಕ್ಯ
ವಂಚನೆ ಪಙ್ಕ್ತಿಭೇದ ಉದಾಸೀನ ನಿರ್ದಯ ಇಷ್ಟನು

ಜಂಗಮದಲ್ಲಿ ಮಾಡಿದರೆ ಜಂಗಮದ್ರೋಹ
ಇನ್ನು ಲಿಂಗದಲ್ಲಿ ತ್ರಿಕಾಲಪೂಜೆ ಪ್ರೀತಿ ಪ್ರೇಮ ಸ್ನೇಹ ಮೋಹ
ಇಷ್ಟನು ಲಿಂಗದಲ್ಲಿ ಮಾಡದಿರ್ದಡೆ ಲಿಂಗದ್ರೋಹ
ಇನ್ನು ಗುರುವಿನಲ್ಲಿ ಅಹಂಕಾರ ಭಯವಿಲ್ಲದಿರುವುದು
ಸಮಪಜ್ತಿಯಲ್ಲಿ ಕುಳ್ಳಿರುವುದು
ಕುತರ್ಕ ಸಂಭಾಷಣೆಯಂ ಮಾಡುವುದು
ಕೈಯೊಡ್ಡಿ ಬೇಡುವುದು ಇಷ್ಟು ಗುರುದ್ರೋಹ
ಇದು ಕಾರಣ ಗುರುಲಿಂಗಜಂಗಮಕ್ಕೆ
ತನುಮನಧನಮಂ ಸಮರ್ಪಿಸಿ
ಏಕ ಲಿಂಗ ನಿಷ್ಠಾಪರನಾದಡೆ ಆತನೇ ಮಹೇಶ್ವರನು
ಆ ಕೂಡಲಚೆನ್ನಸಂಗಮದೇವಾ

## ತಾಮಸ ಪ್ರಸಾದಿ ನಿರಸನ ಸ್ಥಲ ೧೮

ಈ ಪ್ರಕಾರದಿಂ ಗುರುಕಾರುಣ್ಯಮಂ ಪಡೆದು ಶಿವಭಕ್ತಿನಿಷ್ಠೆಯನರಿದು ಚರಿಸಲರಿಯದೆ ತಾಮಸಿಗಳಾಗಿರ್ದವರು ಮಹೇಶ್ವರ ಸ್ಥಲಕ್ಕೆ ಸಲ್ಲರೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ತಾಮಸ ಮಹೇಶ್ವರಂಗೆ ಪ್ರಸಾದನಿಷ್ಠೆ ದೊರಕೊಳ್ಳದೆಂಬುವ ನದುಪಶೋಭಿಸುಗ ನುಡಿದ ವಚನಂಗಳು.

ಶಿವಧರ್ಮೇ—

ಸ್ವೇಷ್ಟಲಿಂಗಾಯ ಯದ್ದತ್ತಂ ಚರುಕಂ ತು ನ ಸಂಶಯಃ ।
ತದೇವಾಶ್ನೀಯಾತ್ಸ್ವಯಂ ಚ ಪ್ರಾಜ್ಞಸ್ತ್ವನ್ಯಂ ನ ಸೇವಯೇತ್ ॥೧॥

ತನ್ನ ಇಷ್ಟಲಿಂಗಕ್ಕೋಸ್ಕರ ಆವುದಾನೊಂದು ನೈವೇದ್ಯವು ಸಮರ್ಪಿಸಲ್ಪಟ್ಟಿತ್ತೋ ಬುದ್ಧಿವಂತನಾದಾತನು ಅದನ್ನೇ ಭುಂಜಿಸುವುದು ಮತ್ತೆ ದೇವತಾಂತರ ಪ್ರಸಾದವನು ಭುಂಜಿಸಲಾಗದು.

ನಿರ್ಮಾಲ್ಯಭೋಕ್ತ್ರೂನ್ನಿಂದಂತಿ ಯೇ ಸದಾ ಭಕ್ತಿಸಂಯುತಾನ್ ।
ತೇ ಯಾಂತಿ ಪಿತೃಭಿಃ ಸಾರ್ಧಂ ನರಕಂ ನಾತ್ರ ಸಂಶಯಃ ॥ ೨ ॥

ಆರು ಕೆಲಂಬರು ನಿರಂತರವೂ ಭಕ್ತಿಯುಕ್ತರಾಗಿ ಶಿವಪ್ರಸಾದವಂ ಭುಂಜಿಸುವವರುಗಳಂ ನಿಂದಿಸುವರೋ ಅವರುಗಳು ತಮ್ಮ ಪಿತೃಗಳು ಸಹವಾಗಿ ನರಕವನ್ನೈದುವರು ಸಂಶಯವಿಲ್ಲವು.

ಶಿವಧರ್ಮೋತ್ತರೇ—

ಬಹ್ವಪಿ ಸ್ತೋಕಮೇವಾಪಿ ಶಿಷ್ಟಾನ್ನೇನ ವಿಮಿಶ್ರಿತಮ್ ।
ಅನರ್ಪಿತಂ ಚ ಭುಂಜಾನಸ್ತದ್ದೇವದ್ರೋಹಕಿಲ್ಬಿಷಮ್ ॥ ೩ ॥

ಶಿವನಲ್ಲಿ ಅರ್ಪಿಸಲ್ಪಟ್ಟ ಪ್ರಸಾದವನು ಬಹಳವನಾದಡೆಯೂ ಅಲ್ಪವನಾದಡೆಯೂ ಆ ಪ್ರಸಾದವನೇ ಕೊಂಡು ಭೋಗಿಸುವುದು ಅನರ್ಪಿತವೇ ಅಧಿಕವಾದಾನ್ನವು ಅದುಂ ಭುಂಜಿಸಿದಾತನು ಶಿವಪದದ್ರೋಹಿಯಹನು.

ಭೋಜ್ಯಂ ಲೇಹ್ಯಂ ಚ ಚೋಷ್ಯಂ ಚ ಯಚ್ಚ ಲಿಂಗಾರ್ಪಿತಂ ಶುಭಮ್ ।
ನೋಚ್ಛಿಷ್ಟಾನ್ನೇನ ಮಿಶ್ರಂ ತು ಪ್ರಸಾದಂ ನಿಷ್ಫಲಂ ಭವೇತ್ ॥ ೪ ॥

ಆವುದಾನೊಂದು ಊಣತಕ್ಕ ಪದಾರ್ಥವು ಲೇಹನಯೋಗ್ಯ ಪದಾರ್ಥವು ಸುರಿಯುತಕ್ಕ ಪದಾರ್ಥವು. ಇವು ಲಿಂಗದಲ್ಲಿ ಅರ್ಪಿಸಲ್ಪಟ್ಟಿದ್ದರೆ ಶುಭಪ್ರದ್ಯವು. ಅರ್ಪಣವಿಲ್ಲದೆ ಶಿವಾರ್ಪಿತವವುದೊಡನೆ ಉಚ್ಛಿಷ್ಟಾನ್ನವನು ಮಿಶ್ರವ ಮಾಡಿ ಕೊಂಡಾತಂಗೆ ಶಿವಪ್ರಸಾದವು ನಿಷ್ಫಲವು.

ಪ್ರಸಾದ ಮಿಶ್ರಿತಂ ಭೋಜ್ಯಂ ಗಣತ್ವಂ ಚ ನಿಯುಜ್ಯತೇ ।
ಯಾವಚ್ಛೇಷಂ ತು ಭುಂಜೀಯಾನ್ಮಿಶ್ರಿತಂ ನಿಷ್ಫಲಂ ಭವೇತ್ ॥ ೫ ॥

ಆ ಪ್ರಸಾದವಿಲ್ಲದೆ ಬೇಡಿಕೊಂಡೊಡೆ ಆತ ಭಕ್ತನಲ್ಲಿ ಬಾಳುವನ್ನೆಸು ಕಾಲ ಪ್ರಸಾದವ ಕೊಂಬುದು. ಮಿಶ್ರಮಾಡಿದ ಪ್ರಸಾದವ ಸ್ವೀಕರಿಸಿದರೆ ನಡೆವಂತಹ ಆಚಾರವು ನಿಷ್ಫಲವಹುದು.

## ವಚನಗಳು

೧

ಮಾಂಸಕ್ಕೆ ಮೆಚ್ಚಿದ ಅರಸುಗಳು
ನಾಯಿಯುಂಬಲ ತಿಂದು ನರಕಕ್ಕಿಳಿದು ಪೋಪರು
ಸೂಳೆಯ ಮೆಚ್ಚಿದವರು
ಸೂಳೆಯ ಮಿಂಡನೆಂಜಲುತಿಂದು ನರಕಕ್ಕಿಳಿದು ಪೋಪರು
ಇದು ಲೋಕಪ್ರಸಿದ್ಧವಾಗಿ ಅರಿಯಲುಂಟು
ಲಿಂಗವ ಮೆಚ್ಚಿದ ಸದ್ಭಕ್ತರು ಗುರುಲಿಂಗ ಜಂಗಮದ
ಒಕ್ಕು ಮಿಕ್ಕ ಶೇಷಪ್ರಸಾದವ ಕೊಂಡು
ಆಗಳಂತೆ ಮೋಕ್ಷವ ಸೈದರೆಂಬುದು
ಶಿವರಹಸ್ಯದಲ್ಲಿ ಶಿವನ ವಾಕ್ಯವ ಕೇಳಿರೇ—

ಶ್ವಾನೋಚ್ಛಿಷ್ಟಂ ಯಥಾ ರಾಜಾ ವೇಶ್ಯೋಚ್ಛಿಷ್ಟಂ ಜಗತ್ತ್ರಯಮ್ ।
ನ ತಥಾ ಜಂಗಮೋಚ್ಛಿಷ್ಟಂ ಸದ್ಯೋ ಮೋಕ್ಷಂ ನ ಸಂಶಯಃ ॥

ಎಂಬುದಾಗಿ ಇದನರಿತು ಗುರುಲಿಂಗ ಜಂಗಮದ
ಪ್ರಸಾದವ ಕೊಂಬುದ ಕಂಡು ನಿಂದಿಸುವವರ ಬಾಯಲ್ಲಿ

ಬಾಲಹುಳಗಳು ಸುರಿಯದೆ ಮಾಂಬವೇ
ಕೂಡಲ ಚೆನ್ನಸಂಗಮದೇವಾ

೭

ಸಿರಿವಂತನೆಂದು ಅಡಿಗಡಿಗೆ ಸಿರಿಯುಳ್ಳವರ ನೋಡಿ
ಕೊಂಬುದು ಉಪಜೀವಿತ ಪ್ರಸಾದ
ಬಡವರು ಬಗ್ಗರೆಂದು ಮರೆಸುಗ್ಗಿಯಲ್ಲಿ ಕೊಂಬುದು ತುಡುಗಣೆ
ಪ್ರಸಾದ
ಭೀತಿಯಿಲ್ಲದೆ ಸೆಳೆದುಕೊಂಬುದು ದಳವುಳ ಪ್ರಸಾದ
ಇಕ್ಕದವರ ಅಂಜಿಸಿಕೊಂಡುಂಬುದು ಬಾಯಿಕಾರ ಪ್ರಸಾದ
ಇಕ್ಕುವಾತನು ಮನದಲ್ಲಿ ಅಳುಕುಮುಳುಕಿಲ್ಲದೆ ಇಕ್ಕುವುದು
ಕೊಂಬಾತನು ಮನದಲ್ಲಿ ಗುಡಿಗಟ್ಟಿಕೊಂಬುದು ಸಮಯ ಪ್ರಸಾದ
ಇದು ಕಾರಣ ಕೂಡಲ ಚೆನ್ನಸಂಗಯ್ಯ ನಿಮ್ಮ ಪ್ರಸಾದಿಗಳು
[illegible]

೮

ಬೆಕ್ಕು ನಾಯಿ ಶಿವಭಕ್ತರ ಒಕ್ಕುಮಿಕ್ಕುದ ಕೊಂಡರೆ
ಸದಾಚಾರಿಯಾಗಬಲ್ಲವೇ ಭೃತ್ಯಾಚಾರಿಯಾಗಬಲ್ಲವೇ
ಜಂಗಮಲಿಂಗದಲ್ಲಿ ನಂಬುಗೆಯಿಲ್ಲದವನು ಕೊಂಡ ಪ್ರಸಾದ
ಬೆಕ್ಕು ನಾಯಿ ತಿಂದಂತೆ ಕಾಣಾ ರಾಮನಾಥಾ

೯

ನಂಬಿಕೊಂಡೊಡೆ ಪ್ರಸಾದ ನಂಬದಿರ್ದಡೆ ವಿಷಕಾಣಿರೋ
ತುಡುಕಬಾರದು ನೋಡಾ ಗುರುಲಿಂಗ ಜಂಗಮದ ಪ್ರಸಾದವನು
ಕೂಡಲ ಸಂಗನ ಪ್ರಸಾದವು ಸಿಂಗಿಕಾಳಕೂಟ ವಿಷವು ನೋಡಾ

೧೦

ಹುತ್ತವ ಮೇಲಣ ರಜ್ಜು ಮುಟ್ಟಿದರೆ ಸಾಯರು ಶಂಕಿತರಾದವರು
ಸರ್ಪದಷ್ಟವಾದರೂ ಸಾಯರು ನಿಶ್ಶಂಕಿತರು
ಕೂಡಲ ಸಂಗಮದೇವಯ್ಯಾ
ಶಂಕಿತಂಗೆ ಪ್ರಸಾದವು ಸಿಂಗಿ ಕಾಳಕೂಟದ ವಿಷವು ನೋಡಾ

## ತಾಮಸ ಪ್ರಾಣಲಿಂಗಿ ನಿರಸನ ಸ್ಥಲ ೧೯

ಇಂತೀ ಪ್ರಕಾರದಿಂ ಸದ್ಭಕ್ತರು ಗುರುಲಿಂಗ ಜಂಗಮದ ಪ್ರಸಾದವಲ್ಲಿ ವಿಶ್ವಾಸವನರಿತು ಆಚರಿಸಲರಿಯದೆ ತಾಮಸಿಗಳಾಗಿರ್ದವರು ಪ್ರಸಾದಿಯ ಸ್ಥಲಕ್ಕೆ ಸಲ್ಲರೆಂದು ಪ್ರತಿಷ್ಠೆಯಂ ಮಾಡಿ ನುಡಿದಿರ್ದಾರಾ ಪುರಾತನರು.

ಇಂತಹ ತಾಮಸ ಪ್ರಸಾದಿಗೆ ಪ್ರಾಣಲಿಂಗನಿಷ್ಠೆ ದೊರಕೊಳ್ಳದೆಂಬುವನರುಹಲೋಸ್ಕರ ನುಡಿದ ವಚನಂಗಳು.

ಶಿವಧರ್ಮೇ—

ಲೋಕಾಚಾರ ನಿಬದ್ಧೇನ ಲೋಕಾಚಾರ ವಿವರ್ಜಿತಃ ।
ಲೋಕಾಚಾರಃ ಪರಿತ್ಯಾಜ್ಯೋ ಪ್ರಾಣಲಿಂಗಿ ಸ್ಥಲಂ ಭವೇತ್ ॥ ೧ ॥

ಲೋಕವವರುಗಳ ಆಚಾರವ ಬಿಡತಕ್ಕದ್ದು. ಆ ಲೋಕಾಚಾರವನ್ನು ಬಿಡುವುದೀಗ ಪ್ರಾಣಲಿಂಗಿಸ್ಥಲವಹುದು.

ಅಂಗೇನ ಲಿಂಗಸಂಬಂಧಂ ಲಿಂಗಂ ಪ್ರಾಣೇನ ಸಂಯುತಮ್ ।
ನಿಮಿಷಾರ್ಧ ವಿಯೋಗೇನ ನರಕೇ ಕಾಲಮಕ್ಷಯಮ್ ॥ ೨ ॥

ಅಂಗಕ್ಕೆ ಲಿಂಗಮೊಡನೆ ಸಂಬಂಧವಾಗಬೇಕು ಲಿಂಗಕ್ಕೆ ಪ್ರಾಣಮೊಡನೆ ಸಂಬಂಧವಾಗಬೇಕು ನಿಮಿಷಾರ್ಧಮಾದರೂ ಅಂಗದಿಂದ ಲಿಂಗವು ಹಿಂಗಿದಡೆ ಆ ಭಕ್ತನು ನರಕವಲ್ಲಿ ಅನೇಕ ಕಾಲವಿರುವನು.

### ವಚನಗಳು

೧

ಪ್ರಾಣಲಿಂಗ ಸ್ವಾಯತವಾದ ಸದ್ಭಕ್ತಂಗೆ
ಸದ್ಭಕ್ತಿಮಾರ್ಗವೇ ಕ್ರಿಯೆ ನೋಡಾ
ಲೋಕಾಚಾರ ಮಾಡಲಾಗದು
ಲೋಕದ ಬಳಕೆಯ ಬಳಸಲಾಗದು
ಲೋಕ ಲೌಕಿಕದಲ್ಲಿ ವರ್ತಿಸಲಾಗದು
ಲೋಕಾಚಾರ ಮಾರ್ಗವೆಲ್ಲವನು ಬಿಡಬೇಕು

ಲೋಕಾಚಾರವನು ಬಿಟ್ಟು ಶಿವಾಚಾರ ಸನ್ಮಾರ್ಗದಲ್ಲಿ
ಪಂಚಾಚಾರ ನಿಯತಾತ್ಮನಾದ ಸದ್ಭಕ್ತನೇ ಪ್ರಾಣಲಿಂಗಿ
ಆತನೇ ಕಾಯಲಿಂಗಿ ಆ ಸದಾಚಾರಿಯೇ ಸರ್ವಾಂಗಲಿಂಗಿಯಯ್ಯಾ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

೨

ಹಸಿವು ತೃಷೆ ವಿಷಯ ವ್ಯಸನ ಕಾಮ ಕ್ರೋಧ
ಲೋಭ ಮೋಹ ಮದ ಮತ್ಸರಾದಿಯಾದ ತನುಗುಣಂಗಳು
ದೇವದಾನವ ಮಾನವರಂತಾದರೆ ಲಿಂಗವಂತನಾದ ಪರಿಯೆಂತಯ್ಯಾ
ತನುಗುಣಂಗಳು ಭೂತದೇಹಿಯಂತಾದಡೆ
ಲಿಂಗದೇಹಿಯಾದ ಪರಿಯೆಂತಯ್ಯಾ
ಲಿಂಗಗುಣ ಲಿಂಗ ಚಿಹ್ನೆಯಿಲ್ಲದಿರ್ದಡೆ
ಲಿಂಗದೇಹಿಯಾದ ಪರಿಯೆಂತಯ್ಯಾ
ಹಸಿವು ತೃಷೆ ವಿಷಯ ವ್ಯಸನವರ್ಗವಡೆ ಲಿಂಗ ಚಿಹ್ನ
ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವಾದಿಯಾದ
ದೇಹಗುಣಂಗಳಳಿದರೆ ಲಿಂಗ ಚಿಹ್ನ
ಇಂತಲ್ಲದೆ ದೇಹಗುಣಂಗಳು ತನ್ನ ಬಿಡದೆ
ತಾನವ ಕೂಡಿಕೊಂಡು ಬಿಡದಿರ್ದು ತಾ ಲಿಂಗದೇಹಿಯೆಂಬಡೆ
ಆ ಲಿಂಗವೆಂತು ಒಲಿವುದು ಸದ್ಭಕ್ತರೆಂತು ಮೆಚ್ಚುವರಯ್ಯಾ
ಇಂತಹ ಅವ ಗುಣಂಗಳೆಲ್ಲವ ಅಳಿದು
ಗುರುಲಿಂಗ ಜಂಗಮದಲ್ಲಿ ತನು ಮನ ಧನವ ಲೀಯವ ಮಾಡಿದರೆ
ಆತನೇ ಸರ್ವಾಂಗಲಿಂಗಿಯಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ತಾಮಸ ಶರಣ ನಿರಸನ ಸ್ಥಲ ೨೦

ಇಂತೀ ಪ್ರಕಾರದಿಂ ಪ್ರಾಣಲಿಂಗದಲ್ಲಿ ವಿಶ್ವಾಸವನಿಟ್ಟು ಆಚರಿಸಲರಿಯದೆ ತಾಮಸಿಗರಾಗಿದ್ದವರು ಪ್ರಾಣಲಿಂಗಿ ಸ್ಥಲಕ್ಕೆ ಸಲ್ಲರೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರು ಮಹಾ ಪುರಾತನರು.

ಇಂತಹ ತಾಮಸ ಪ್ರಾಣಲಿಂಗಿಗೆ ಶರಣಸ್ಥಲ ನೆಲೆಗೊಳ್ಳದೆಂಬುದಂ ತೋರಲೀಶ್ವರ ನುಡಿದ ವಚನಂಗಳು..

ಸ್ಥಾವರಂ ಭಿನ್ನದೋಷೇಣ ವ್ರತಭ್ರಂಶೇನ ಜಂಗಮಃ ।
ಉಭಯೋರ್ಭಿನ್ನ ಭಾವೇನ ನಚಾರ್ಚನಂ ನಚ ವಂದನಮ್ ॥ ೧ ॥

ಸ್ಥಾವರ ಲಿಂಗವು ಭಿನ್ನವಾಯಿತೆಂಬ ದೋಷದಿಂದ ಪೂಜ್ಯವಲ್ಲ. ಜಂಗಮವು ಸದಾಚಾರ ವ್ರತದಿಂದ ಭ್ರಷ್ಟವಾದರೆ ಪೂಜ್ಯವಲ್ಲ. ಸ್ಥಾವರ ಜಂಗಮವೆರಡೆಂಬವಕ್ಕೆ ಭಿನ್ನತ್ವವೆಂಬ ದೋಷವಿರಲಾಗಿ ಪೂಜೆಯೂ ಸಲ್ಲದು ನಮಸ್ಕಾರವೂ ಸಲ್ಲದು.

ಜಂಗಮಸ್ಯ ಗಮೋನಾಸ್ತಿ ಭಕ್ತಸ್ಯ ಗೃಹಮಾಚರೇತ್ ।
ಅನ್ಯಂ ಗೃಹಂ ಗಮಿಷ್ಯೇಚ್ಚೇತ್ ಸದ್ಯೋಗೋಮಾಂಸ ಭಕ್ಷವತ್ ॥ ೨ ॥

ಜಂಗಮಕ್ಕೆ ಗಮನವಿಲ್ಲ. ಭಕ್ತರ ಗೃಹವನೇ ಆಚರಿಸುವುದು. ಉಳಿದವರುಗಳ ಗೃಹವನೆ ಇಚ್ಛಿಸಿದನಾದರೆ ಆ ಕ್ಷಣದಲ್ಲಿ ಗೋಮಾಂಸವ ಕೊಂಡ ಸಮಾನ. ಭಕ್ತಿಯೆಂದರೆ ತಾತ್ಪರ್ಯದ ನಾಮ ತಾತ್ಪರ್ಯವುಳ್ಳಲ್ಲಿಗೆ ಹೋಗಬೇಕಲ್ಲದೆ ತಾತ್ಪರ್ಯವಿಲ್ಲದವರುಗಳ ಗೃಹಕ್ಕೆ ಹೋಗಲಾಗದೆಂಬುದರ್ಥ.

ಭಕ್ತಾನಾಂ ಸುಖಗೋಷ್ಠಿಸ್ತು ಧನಂ ಭಕ್ತ ಪರಿಗ್ರಹಮ್ ।
ಭಕ್ತಾನಾಂ ಸಂಗತಿರ್ನಿತ್ಯಂ ಭಕ್ತಾನಾಂ ಗೃಹಮಾಚರೇತ್ ॥ ೩ ॥

ಭಕ್ತರುಗಳಿಗೆ ಸುಖವಹ ಗೋಷ್ಠಿಪ್ರಸಂಗವ ಮಾಡುವುದು. ಭಕ್ತರು ಕೊಟ್ಟ ದ್ರವ್ಯವನು ಪರಿಗ್ರಹಿಸುವುದು. ಭಕ್ತರುಗಳ ಸಂಸರ್ಗವ ಮಾಡುವುದು. ಭಕ್ತರುಗಳ ಗೃಹವನಾಚರಿಸುವುದು—ಇದೀಗ ಜಂಗಮ ಲಕ್ಷಣವು.

**ಶಿವಶಾಸ್ತ್ರಂ ಶಿವಜ್ಞಾನಂ ಶಿವಭಕ್ತಸ್ಯ ಮೇಲನಮ್ ।**
**ಶಿವಪೂಜಾ ಶಿವಧ್ಯಾನಂ ಜಂಗಮಾನಾಂ ಚ ಲಕ್ಷಣಮ್ ॥ ೪ ॥**

ಶಿವ ಶಾಸ್ತ್ರಂಗಳನರಿವುದು ಶಿವಜ್ಞಾನವಳ್ಳಿರುವುದು ಶಿವಭಕ್ತರ ಕೂಡಿರುವುದು ಶಿವಪೂಜೆಯ ಮಾಡುವುದು ಶಿವಧ್ಯಾನವುಳ್ಳಿರುವುದು ಇಷ್ಟು ಗುಣವುಳ್ಳಾತನೀಗ ಜಂಗಮವು.

**ನಿಷ್ಕಲಂಕೋ ನಿರಾಪೇಕ್ಷೋ ನಿರ್ಮೋಹೀ ನಿಸ್ಪೃಹಸ್ತಥಾ ।**
**ಸತ್ಯವಾಕ್ಯೋ ದಯಾಶಾಂತಿ ಸ್ತಸ್ಯ ಜಂಗಮ ಲಕ್ಷಣಮ್ ॥ ೫ ॥**

ಕಲಂಕಿಲ್ಲದಿಹುದು ಅಪೇಕ್ಷೆಯಿಲ್ಲದಿಹುದು ಮೋಹವಿಲ್ಲದಿಹುದು ಇಚ್ಛೆಯಿಲ್ಲದಿಹುದು ಹಾಗು ಸತ್ಯ ವಾಕ್ಯ ದಯೆ ಶಾಂತಿ ಇವುಗಳುಳ್ಳುದೀಗ ಜಂಗಮ ಲಕ್ಷಣವು.

## ವಚನಗಳು

೧

ಮನದಲ್ಲಿ ಮರವನರಿದು ಮನ ನಿರ್ಮಳನಾಗಿ ದೇಶಾಂತರಿಯಾಗದೆ
ವನವಾಸಿಕನಾಗಿ ಹೊರಹೊಂಟುದು ದೇಶಾಂತರವನಯ್ದು
ಕಂಡವರ ಕಾಡಿ ನಿಂದವರ ಬೇಡಿ ಜಾತಿಯೆನ್ನದೆ ಅಜಾತಿಯೆನ್ನದೆ
ಆಚಾರವೆನ್ನದೆ ಅನಾಚಾರವೆನ್ನದೆ ತಿರಿದುಂಡು
ವೇಷಡಂಭಕತ್ವದಿಂ ಲಾಂಛನವ ಹೊತ್ತು ಕಂಡಲ್ಲಿ ಲಜ್ಜೆಗೆಡುವುದು
ತನ್ನ ಮುನ್ನಿನ ದುಷ್ಕೃತ ಪೂರ್ವ ಕರ್ಮದ ಫಲವಯ್ಯಾ
ಮತ್ತಂತೆಂದಡೆ ಮನನಿರ್ವಾಣವಾಗಿ
ವಿವೇಕಜ್ಞಾನ ಪರಮಾರ್ಥದಲ್ಲಿ ಪರಿಣಾಮಿಯಾಗಿ
ಸುಳಿದು ಸೂತಕಿಯಲ್ಲದೆ ನಿಂದು ಬದ್ಧನಲ್ಲದೆ
ಸುಜ್ಞಾನದಲ್ಲಿ ಸುಳಿದು ನಿರ್ಮಲದಲ್ಲಿ ನಿಂದವರು
ಅವರು ಪರದೇಶಾಂತರಿಗಳು ಅವರು ನಿಜನಿವಾಸಿಗಳು
ಅವರುಗಳಿಗೆ ನಮೋ ನಮೋ ಎಂಬೆ ಉರಿಲಿಂಗ ಪೆದ್ದಿಪ್ರಿಯ
ವಿಶ್ವೇಶ್ವರಾ

೨

ಜ್ಞಾನದಲ್ಲಿ ಸುಳಿವ ಜಂಗಮ ಸ್ಥಲದ ಇರವು ಹೇಗಿರಬೇಕೆಂದಡೆ
ಅಂಬುಧಿಯ ಕೂಡಿದ ಸಂಭಾವದಂತಿರಬೇಕು
ಮುಕು ಶಿರ ಬೋಳಾದಡೇನು
ಹುಸಿ ಕೊಲೆ ಕಳವು ಪರದಾರ ತಾಮಸ ಭಕ್ತಸಂಗ
ಇಂತಿವ ಬಿಡದನ್ನಕ್ಕರ
ಗಡ್ಡ ಜಡೆ ಕಂಥೆ ಲಾಂಛನವ ತೊಟ್ಟಿರುವ ಬೈರೂಪದಂತೆ
ಜಗದಲ್ಲಿ ಸುಳಿವ ಒದ್ದುಕತನದಲ್ಲಿ ದ್ರವ್ಯಕ್ಕೆ ಗೊಡ್ಡೆರಗಿರುವ
ದೊಡ್ಡ ಮುಪ್ರಿಂಡು ಕಳ್ಳರು ತುರುಬು ಚಿಮ್ಮುರಿಗಳ ಕಟ್ಟಿಕೊಂಡು
ಸಿರಿಗುರುಳ ಬಾಲೆಯರ ಮುಂದೆ
ತಿರುಗುತ್ತಿಪ್ಪ ಒರುಬಾಯು ಭುಂಜಕರುಗಳು
ಅರಿವುಳ್ಳವರೆಂದು ಬೀಗಿ ಬಿರಿವುತ್ತಿಪ್ಪರು
ಅರಿವಿನ ತುಷ್ಟಿಯನರಿದ ಮಹಾತ್ಮಂಗೆ ಹೇಳಬೇಕಯ್ಯಾ
ಮೊಲೆಯ ಕಾಣದ ಹಸುಳೆಯಂತೆ
ಅರಿವಿನ ತುಷ್ಟಿ ಕರಿಗೊಂಡವಂಗೆ ನರಗುರಿಗಳ ಭವನವ ಕಾಯಲೇಕೋ
ಅರಿವೇ ಅಂಗವಾಗಿದ್ದ ಲಿಂಗಾಂಗಿಗೆ ಒರುವರೆಯ ಭ್ರಾಂತರ ಸಂಗವೇಕೆ
ಇದು ಕಾರಣ ತುರುಬಿಂದಡಿಲ್ಲ ಜಡೆಯಿಂದಡಿಲ್ಲ ಬೋಳಿಂದಡಿಲ್ಲ
ಅರಿವು ಕುರುಹಿಂಗೆ ಸಿಕ್ಕದು ಅರಿದುದು ಮರೆಯದಾಗಿ
ಮರೆದುದನರಿದುದಕ್ಕೆ ಕುರುಹಿಲ್ಲವಾಗಿ
ಇಂತೀ ಸಂಚಿತ ಆಗಾಮಿ ಪ್ರಾರಬ್ಧಕ್ಕೆ
ಹೊರಗಾದುದು ಜ್ಞಾನಜಂಗಮ ಸ್ಥಲವು
ಹೀಗಲ್ಲದೆ ಗೆಲ್ಲ ಸೋಲಕ್ಕೆ ಹೋರಿ ಬಲ್ಲವರಾದವೆಂಬರ
ವಲ್ಲಭ ನಿಃಕಲಂಕ ಮಲ್ಲಿಕಾರ್ಜುನನವರ ಬಲ್ಲವನಾಗಿ ಬಲ್ಲನು

೩

ಭಕ್ತಿಯ ಮಂದಿರದಲ್ಲಿ ಪೂಜಿಸಿಕೊಂಬ ಜಂಗಮವ ನೋಡಿರೇ ಅಯ್ಯಾ

ಜಂಗಮವೆಂಬುದಕ್ಕೆ ನೀವು ನಾಚಿರೇ ಅಯ್ಯಾ
ಭಕ್ತನ ಮನೆಗೆ ಹೂ ಕಾಯಿ ಹಣ್ಣು ಹುಲ್ಲುಹೊರೆ
ಒಕ್ಕಸಪಹರಿ ಪಾಡಿತನ ಬಾಗಿಲು ಮುಂತಾದ ಶಿಶ್ರೂಷೆಯಂ ಮಾಡಿ
ಉಂಬಾಗ ಒಡೆಯರೆನಿಸಿಕೊಂಬ
ತುಡುಗಣಿಗೆಲ್ಲಿಯದೋ ನಿಜಜಂಗಮಸ್ಥಲ
ಹೊಟ್ಟೆಯ ಕಕ್ಕುಲತೆಗೆ ಕಷ್ಟಜೀವನ ಹೊರೆವ ಹೆಬ್ಬೊಟ್ಟೆಯ ಡೊಂಬರ ಕಂಡು
ಬಟ್ಟೆ ಬಯಲಾದೆಯೋ ನಿಃಕಳಂಕ ಮಲ್ಲಿಕಾರ್ಜುನಾ

೪

ಮುನಿಯದಿರಿ ಮುನಿಯದಿರಿ ನಿಮಗೊಂದು ಯುಕ್ತಿಯ ಹೇಳುವೆನು
ಅದೆಂತೆಂದರೆ ನೀವೆನ್ನವಂಶೀಭೂತರಾದ ಕಾರಣ
ನಿಮ್ಮ ಹೆಚ್ಚು ಕುಂದು ಎನ್ನದಾಗಿ ನಿಮ್ಮ ಅಸ್ತಿನಾಸ್ತಿ ಎನ್ನದಾಗಿ
ನಿಮ್ಮ ಹಾನಿವೃದ್ಧಿ ಎನ್ನದಾಗಿ
ಹಾವ ಹಿಡಿದವರು ಬೇಲಿಯ ಹೊಗನೆ ಹೋಹುದೇ ಅಯ್ಯಾ
ವ್ಯಾಧನು ಸೂಸಲ ಚಲ್ಲಿ ಜಂತ್ರವ ಹೂಣೆ ಅದಿಗಲ್ಲನೊಡ್ಡಿ ಹೋದ ಬಳಿಕ
ಸೂಸಲ ಕಂಪಿಗೆ ಹೆಗ್ಗಣ ಒಂದು ಬಿದ್ದಂತೆ ಬಿದ್ದಿರಲ್ಲಾ ಮಾಯದ ಬಲೆಯಲ್ಲಿ
ಕೋಪವೆಂಬ ರಾದನೊಡ್ಡಿ ತಾಪವೆಂಬ ಅರೆಗಲ್ಲನಿರಿಸಿ
ಹುಸಿಯೆಂಬ ಮೀಟುಗವಣೆಯ ಜಂತ್ರಿಸಿ
ಹೊನ್ನು ಹೆಣ್ಣು ಮಣ್ಣೆಂಬ ಅದಿಗಲ್ಲನೊಡ್ಡಿ
ಕೆಡಹಿದನೆಲ್ಲಾ ನಿಃಕರುಣಿ ಮುಕ್ಕಂಣ ವ್ಯಾಧನು

ಅದೆಂತೆಂದಡೆ ಶಿವರಹಸ್ಯದಲ್ಲಿ—

> ನಿಃಸಂಗತ್ವಂ ನಿರಾಭಾರಿ ನಿಸ್ಸೀಮಂ ನಿರುಪಾಧಿಕಮ್ ।
> ನಿರ್ದೇಹಂ ನಿರ್ಮಲಂ ನಿತ್ಯಂ ಸತ್ಯಂ ಜಂಗಮ ಲಕ್ಷಣಮ್ ॥

ಇಂತೆಂಬ ಶ್ರುತ್ಯರ್ಥವ ಕೇಳದೇ ಜಂಗಮವಾಗಿ ಸುಳಿವ ಮರಳುಗಳಿರಾ

ಇದಕ್ಕೆ ಮತ್ತೆಯೂ—

ಸುಖಂ ಚ ಬಿಂದು ಮಾತ್ರೇಣ ದುಃಖಂ ಪರ್ವತ ಏವ ಚ ।
ಹರಿಣೀಪಾದ ಮಾತ್ರೇಣ ಬಂಧನಂ ಚ ಜಗತ್ರಯಮ್ ॥

ಇಂತೆಂಬ ಶ್ರುತಿಗೊಳಗಾಗದೇ ಹೊನ್ನು ಹೆಣ್ಣು ಮಣ್ಣಿನಾಶೆಯುಂ ಬಿಟ್ಟು
ಕೋಪ ತಾಪಮುಂ ಬಿಟ್ಟು ಭ್ರಾಂತಿ ಭ್ರಮೆಯುಂ ಬಿಟ್ಟು
ಜಂಗಮವಾಗಬೇಕು ಕಾಣಿರೇ ಮರುಳುಗಳಿರಾ
ಇಂತೀ ಷಡುಲೋಭದ ರುಚಿ ಹಿಂಗಿ
ಜಂಗಮವಾದಲ್ಲದೇ ಭವಹಿಂಗದು ಕಾಣಾ ಗುಹೇಶ್ವರಾ

೫

ಹೊನ್ನು ಬಿಟ್ಟು ಹೆಣ್ಣು ಬಿಟ್ಟು ಮಣ್ಣು ಬಿಟ್ಟು
ಬ್ರಹ್ಮಚಾರಿಗಳಾಗಬೇಕೆಂದು
ಬಣ್ಣವಿಟ್ಟು ನುಡಿವ ಅಣ್ಣಗಳ ಪರಿಯ ನೋಡಿರೇ
ಹೆಣ್ಣ ಬಿಟ್ಟಡೆಯೂ ಹೊನ್ನ ಬಿಡಿರಿ
ಹೊನ್ನ ಬಿಟ್ಟಡೆಯೂ ಮಣ್ಣು ಬಿಡಿರಿ
ಒಂದು ಬಿಟ್ಟಡೆಯೂ ಒಂದು ಬಿಡಿರಿ
ಬ್ರಹ್ಮಚಾರಿಗಳೆಂತಪ್ಪಿರಿ ಹೇಳಿರಣ್ಣಾ
ಹೆಣ್ಣು ಬಿಟ್ಟು ಬ್ರಹ್ಮಚಾರಿಗಳಾಗಬೇಕೆಂದು ಅವರೆಂತು ಹೇಳಿದರು
ನೀವೆಂತು ಕೇಳಿವಿರಿ ಹೆಣ್ಣನು ಹೆಣ್ಣೆಂದರಿವಿರಿ
ಹೊನ್ನನು ಹೊನ್ನೆಂದರಿವಿರಿ ಮಣ್ಣನು ಮಣ್ಣೆಂದರಿವಿರಿ
ಬ್ರಹ್ಮಚಾರಿಗಳೆಂತಪ್ಪಿರಣ್ಣಾ
ಬಿಟ್ಟಡೆ ಹೆಣ್ಣು ಹೊನ್ನು ಮಣ್ಣು ಈ ಮೂರನು ಬಿಟ್ಟು
ನಿರಾಭಾರಿ ಜಂಗಮವಾಗಿ ಜ್ಞಾನದಲ್ಲಿ ಸುಳಿಯಬಲ್ಲಡೆ ಭವಂ ನಾಸ್ತಿ ತಪ್ಪದು
ಹಿಡಿದಡೆ ಹೆಣ್ಣು ಹೊನ್ನು ಮಣ್ಣು ಈ ಮೂರನು ಹಿಡಿದು
ಗುರುಲಿಂಗ ಜಂಗಮಕ್ಕೆ ಸದ್ಭಕ್ತಿಯಿಂದ

ದಾಸೋಹವ ಮಾಡಬಲ್ಲಡೆ ಭವಂ ನಾಸ್ತಿ ತಪ್ಪದು

ಅದೆಂತೆಂದಡೆ ವೀರಾಗಮದಲ್ಲಿ—

> ಮಾತರಃ ಪಿತರಶ್ಚೈವ ಸ್ವಪತ್ನೀ ಬಾಲಕಾಂ ಸ್ತಥಾ ।
> ಹೇಮ ಭೂಮೀ ವಿನಾಶಂ ಚ ನ ದುಃಖೀ ಬ್ರಹ್ಮಚಾರಿಣಾಮ್ ॥

ಎಂದುದಾಗಿ ಇಂತಹ ಹೆಣ್ಣು ಹೊನ್ನು ಮಣ್ಣು ಈ ಮೂರನು ಹಿಡಿದು
ಗುರುಲಿಂಗ ಜಂಗಮಕ್ಕೆ ಸದ್ಭಕ್ತಿಯಿಂದ
ದಾಸೋಹವ ಮಾಡಬಲ್ಲಡೆ ಭವಂ ನಾಸ್ತಿ
ಅಲ್ಲಿದ್ದರೆಯೂ ನೀರತಾವರೆಯಂತಿಪ್ಪರು
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ ನಿಮ್ಮ ಶರಣರು

## ತಾಮಸೈಕ್ಯ ನಿರಸನ ಸ್ಥಲ ೨೧

ಇಂತೀ ಪ್ರಕಾರದಿಂ ಅಂಗದ ಮೇಲೆ ಲಾಂಛನವಿದ್ದು ಶಿವಾಚಾರ ಮಾರ್ಗವನರಿದು ಚರಿಸಲರಿಯದಿರ್ಪ ತಾಮಸಿಗಳಾಗಿರ್ದವರುಗಳು ಶರಣ ಸ್ಥಲಕ್ಕೆ ಸಲ್ಲರೆಂಬುದು ಪ್ರತಿಷ್ಠೆಯಂ ಮಾಡಿ ನುಡಿದರ್ಪುದಾ ಪುರಾತನರು.

ಇಂತಹ ತಾಮಸ ಶರಣಂಗೆ ಐಕ್ಯಸ್ಥಲವಳವಡದೆಂಬುವ ತೋರ ಲೋಸ್ವರ ನುಡಿದ ವಚನಂಗಳು.

ಶಿವರಹಸ್ಯೇ—

ಭಯರೂಪಂತು ಭಕ್ತಾನಾಂ ಕ್ಷಮಾರೂಪಸ್ತು ಜಂಗಮಃ ।
ಉಭಯೋರೇಕರೂಪಂ ತು ಮಮರೂಪಂ ತು ಪಾರ್ವತಿ ॥ ೧ ॥

ಭಕ್ತನೇ ಭಯರೂಪದಲ್ಲಿಹನು; ಜಂಗಮವು ಶಾಂತರೂಪದಲ್ಲಿಹನು. ಈ ಉಭಯವು ಏಕರೂಪವಾಗಿ ನನ್ನ ರೂಪವಾಗಿಹುದು ಕೇಳಾ ಪಾರ್ವತಿ ಎಂದು ದೇವರು ಬೆಸಸಿದನು.

ಪಕ್ಷೇ ಜಂಗಮ ಲಕ್ಷಣಂ ಶೃಣುತಥಾ ಭಕ್ತಸ್ಯ ಚಿಹ್ನಂ ಕ್ರಮಾತ್
ತ್ವೇತೌ ಸೋಽಹಮಿಹ ತಾವದು ಪಾಸ್ಯಕಸ್ಯ ನಿಜದಾಸೋಽಹಮಿತ್ಯ
ಹಿತೌ ಪಾಸಕಪತೇ ।
ತುಲ್ಯಂ ಜಂಗಮ ಭಕ್ತಯೋಸ್ತು ಗುಣಂ ತ್ರೇಧಾನಗತ್ವಂ ಸ್ಮೃತಃ
ಖಲ್ವೇತೌ ಭವದೋಷಸಂಗರಹಿತೌ ಸಾಕ್ಷಾಜ್ಜಗತ್ಪಾವನೌ ॥ ೨ ॥

ಜಂಗಮ ಮತ್ತು ಭಕ್ತರ ಲಕ್ಷಣವನ್ನು ಹೇಳುವೆನು ಕೇಳು ಜಂಗಮ ಮತ್ತು ಭಕ್ತರು ತಮ್ಮ ಗುಣಗಳಿಂದ ಸಮಾನವಾಗಿ ಕಂಡವರಾದಡೂ ಜಂಗಮನು ಸೋಽಹಂ ಭಾವನೆಯಿಂದ ಉಪಾಸ್ಯತ್ವವನ್ನೂ ಭಕ್ತನು ದಾಸೋಽಹಂ ಭಾವವುಳ್ಳವನಾಗಿ ಉಪಾಸಕತ್ವವನ್ನೂ ಉಳ್ಳವರಹರು ಜಗದವರ ಹಾಗೆ ವಿಷಯಾದಿಗಳನ್ನು ಹೊದ್ದದೆ ಇರುವ ಕಾರಣ ಜಗತ್ತಿನಲ್ಲಿ ಪವಿತ್ರವಾಗಿಹರು.

ಭಿಕ್ಷುಕಃ ಕೃಪಯಾ ಯುಕ್ತೋ ದಾತಾ ವಂಚನವರ್ಜಿತಃ ।
ಉಭಯೋರ್ಬ್ರಹ್ಮ ಪೂಜಾಯಾಂ ಸ್ವಾತ್ಮಾನಂದಂ ಚ ರಾಘವ ॥ ೩ ॥

ಜಂಗಮನು ಕೃಪೆಯುಳ್ಳವನೂ ಭಕ್ತನು ವಂಚನೆಯಿಲ್ಲದವನೂ ಇದ್ದವರಾಗಿ ಪೂಜೆಯಲ್ಲಿ ಆತ್ಮಾನಂದವನು ಪಡೆಯತಕ್ಕವರಹದು ಎಂದು ಶಿವನು ರಾಮನಿಗೆ ಬೆಸಸಿದನು.

ವೀರಾಗಮೇ—

> ಪುಷ್ಪರೂಪಸ್ತು ಭಕ್ತಸ್ಯ ಅಲಿರೂಪಸ್ತು ಜಂಗಮಃ ।
> ಉಭಯೋರೇಕ ರೂಪಂ ಚ ಮಮರೂಪಂ ತು ಪಾರ್ವತಿ ॥ ೪ ॥

ಎಲೈ ಪಾರ್ವತಿಯೇ ಭಕ್ತನು ಪುಷ್ಪಸ್ವರೂಪನು, ಜಂಗಮನು ಭ್ರಮರ ಸ್ವರೂಪನು, ಈ ಎರಡು ಒಂದಾದದ್ದು ನನ್ನ ಸ್ವರೂಪವು.

## ವಚನಗಳು

೧

ಜಂಗಮಕ್ಕೆ ಲಕ್ಷಣವಾವುದೆಂದರೆ
ಲಿಂಗರೂಪಾಗಿ ಪಾದಾರ್ಚನೆಯ ಮಾಡಿಸಿಕೊಳ್ಳಬೇಕು
ಭಕ್ತಂಗೆ ಲಕ್ಷಣವಾವುದೆಂದರೆ
ಭೃತ್ಯನಾಗಿ ಪಾದಾರ್ಚನೆಯ ಮಾಡಬೇಕು
ಜಂಗಮವು ಲಿಂಗರೂಪವಹ ವಿವರವೆಂತೆಂದಡೆ
ಮಾತಿನಲ್ಲಿ ತಾನು ಲಿಂಗರೂಪೆಂದಡೆ ಹರಿಯದು
ತನು ಮನ ಧನ ತ್ರಯಂಗಳಂ ಹಿಡಿಯದೆ
ಮಾಡಿಸಿಕೊಂಬುದೀಗ ಜಂಗಮಕ್ಕೆ ಲಕ್ಷಣವು
ಆ ಸುಳುಹಿಂಗೆ ಭವಂ ನಾಸ್ತಿ
ಭಕ್ತನು ಭೃತ್ಯರೂಪವಹ ವಿವರವೆಂತೆಂದಡೆ
ಮಾತಿನಲ್ಲಿ ಭೃತ್ಯರೂಪೆಂದರೆ ಹರಿಯದು
ತನು ಮನಧನತ್ರಯಂಗಳಂ ಜೀವನಗುಣಕ್ಕೆಯಿಕ್ಕದೆ
ಗುರುಲಿಂಗ ಜಂಗಮಕ್ಕೆ ಸಂದಳಿದು
ದಾಸೋಹವ ಮಾಡುವುದೀಗ ಭಕ್ತಂಗೆ ಲಕ್ಷಣವು
ಆ ನಿಲವಿಂಗೆ ಭವಂ ನಾಸ್ತಿ

ಇಂತೀ ಉಭಯ ಕುಳಸ್ಥಳದ ಸಂದಳಿದು
ಒಂದಾಗಿ ನಿಂದ ನಿಜವು ಗುಹೇಶ್ವರ ಲಿಂಗದಲ್ಲಿ ಐಕ್ಯವು

೨

ಗತಿಪಥಮುಕ್ತಿಯ ಬಯಸಿ ಮಾಡುವಾತ ಭಕ್ತನಲ್ಲ
ಜೀವನೋಪಾಯಕ್ಕೆ ಬಯಸಿ ಬೇಡುವಾತ ಲಿಂಗ ಜಂಗಮವಲ್ಲ
ಗತಿಪಥ ಮುಕ್ತಿ ಸೂತಕ ವಿರಹಿತ ಭಕ್ತ
ಆಶಾಪಾತ ವಿರಹಿತ ಜಂಗಮ ಅದೆಂತೆಂದಡೆ

ಸಾಲೋಕ್ಯಮಪಿ ಸಾಮೀಪ್ಯಂ ಸಾರೂಪ್ಯಂ ಚ ಸಯುಜ್ಯತಾಮ್ ।
ಸಕೃದಾಪೇಕ್ಷುಭಕ್ತಾನಾಂ ನಾಸ್ತಿ ಮೋಕ್ಷೋ ವರಾನನೇ ॥

ಎಂದುದಾಗಿ ಇದೀಗ ಭಕ್ತಸ್ಥಲ
ಇನ್ನು ಸುಳಿವ ಜಂಗಮಕ್ಕೆ ಉಪಾಧಿಯಿಲ್ಲದಿರಬೇಕು

ಅದೆಂತೆಂದಡೆ—

ಜ್ಞಾನಾಗಮಂ ಜ್ಞಾನರೂಪಿ ಮುಪಾಧಿ ನಿರುಪಾಧಿಕಮ್ ।
ಭಕ್ತಪ್ರಾಣ ಸಮಾಯುಕ್ತ ಮಿತ್ಯೇತಲ್ಲಿಂಗ ಜಂಗಮಮ್ ॥

ಎಂದುದಾಗಿ ಇದೀಗ ಜಂಗಮಸ್ಥಲ
ಮಾಡಿದರೆ ಮಾಟದೊಳಗಿಲ್ಲದಿರಬೇಕು ಭಕ್ತ
ಮಾಡಿಸಿಕೊಂಬುದರೊಳಗಿಲ್ಲದಿರಬೇಕು ಜಂಗಮ
ದೇಹಗುಣವಿಲ್ಲದಾತ ಭಕ್ತ ಜೀವಗುಣವಿಲ್ಲದಾತ ಜಂಗಮ
ಈ ಉಭಯ ಕುಳದ ಸಂದಳಿದು ಒಂದಾಗಿನಿಂದ ನಿಜದ ನಿಲವು
ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು

೩

ಭಕ್ತಂಗೆ ಕ್ರಿಯೆ ಜಂಗಮಕ್ಕೆ ನಿಷ್ಕ್ರಿಯೆಯನ್ನಬಾರದು ನೋಡಾ
ಜಂಗಮವಾದರೆ ಸದ್ಭಕ್ತಿ ಸದಾಚಾರ ಸತ್ಕ್ರಿಯೆಗಳಲ್ಲಿರಬೇಕು
ಅದೆಂತೆಂದರೆ ಪುರುಷನ ಆಚಾರ ಸತಿಗೆ ಕಟ್ಟು
ಜಂಗಮದ ಆಚಾರವು ಭಕ್ತನ ಸಂಪದದ ಬೆಳೆ
ಅವತಾರಕ್ಕೆ ವೇಷ ಅರಿವಿಂಗೆ ಆಚಾರ

ಆ ಜಂಗಮ ಆ ಭಕ್ತ ಈ ಉಭಯದ ಇರವು
ಅಂಗ ಪ್ರಾಣದಂತೆ ಭಿನ್ನವಿಲ್ಲ ಕಾಣಾ ಸದಾಶಿವ ಮೂರ್ತಿ
ಲಿಂಗವು ತಾನೆ

೬

ಸಾಕಾರ ಹದಿನೆಂಟು ಸ್ಥಲ ಅಂಗದಲ್ಲಿ ಆಚರಿಸುತ್ತ
ಅಲ್ಲಲ್ಲಿಗೆ ಭಕ್ತ ಅಲ್ಲಲ್ಲಿಗೆ ಮಹೇಶ ಅಲ್ಲಲ್ಲಿಗೆ ಪ್ರಸಾದಿಯಾಗಿಪ್ಪ
ಆ ಸಾಕಾರವನೇನೆಂದುಪಮಿಸುವೆನಯ್ಯಾ
ನಿರಾಕಾರ ಹದಿನೆಂಟು ಸ್ಥಲವ ಆತ್ಮನಲ್ಲಿ ಆಚರಿಸುತ್ತ
ಅಲ್ಲಲ್ಲಿಗೆ ಪ್ರಾಣಲಿಂಗಿ ಅಲ್ಲಲ್ಲಿಗೆ ಶರಣ ಅಲ್ಲಲ್ಲಿಗೆ ಐಕ್ಯನಾಗಿಪ್ಪ
ಆ ನಿರಾಕಾರವನೇನೆಂದುಪಮಿಸುವೆನಯ್ಯಾ
ಆ ಸಾಕಾರ ಹದಿನೆಂಟು ಸ್ಥಲವ ಅಂಗದಲ್ಲಿ ಆಚರಿಸುವುದು ಭಕ್ತಸ್ಥಲ
ಆ ನಿರಾಕಾರ ಹದಿನೆಂಟು ಸ್ಥಲವ ಆತ್ಮನಲ್ಲಿ ಆಚರಿಸುವುದು
ಜಂಗಮಸ್ಥಲ
ಇಂತೀ ಉಭಯಸ್ಥಲವೊಂದಾಗಿ ನಿಂದ ನಿಜದ ನಿಲವು
ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು

## ಸ್ಥಾವರಲಿಂಗ ಪೂಜಾ ನಿರಸನ ಸ್ಥಲ ೨೨

ಇಂತೀ ಪ್ರಕಾರದಲ್ಲಿ ಮಹಾಘನಲಿಂಗದಲ್ಲಿ ಬೆರೆಸುವ ವಿವರವನ ರಿದು ಆಚರಿಸಲರಿಯದೆ ತಾಮಸಿಗಳಾಗಿರ್ದವರುಗಳು ಐಕ್ಯಸ್ಥಲಕ್ಕೆ ಸಲ್ಲರೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಪುರಹಾ ಪುರಾತನರು.

ಇಂತಹ ಐಕ್ಯನ ಏಕಲಿಂಗನಿಷ್ಠಾಪರತ್ವವು ದೃಢೀಕರಿಸಬೇಕಾಗಿ ಕ್ಷೇತ್ರಲಿಂಗಂಗಳನರ್ಚಿಸಲಾಗದೆಂದು ನುಡಿದ ವಚನಂಗಳು.

ವೀರಾಗಮೇ—

> ಪತಿವ್ರತಾ ಸ್ವಭಾವೇನ ವಿಹಾಯಾನ್ಯಾಂಶ್ಚ ದೇವತಾಮ್ ।
> ಶಿವಮೇಕಂ ಭಜೇದ್ಭಕ್ತಃ ಸರ್ವಶಾಂತಿಕರಂ ಪರಮ್ ॥ ೧ ॥

ಪತಿವ್ರತೆಯು ಹೇಗೆ ತನ್ನ ಗಂಡನಲ್ಲವೆ ಮತ್ತೊಬ್ಬ ಪುರುಷನನ್ನು ಎಲ್ಲಾ ವಿಷಯಂಗಳಲ್ಲಿ ಅರಿಯಳೋ ಹಾಗೆ ಸದ್ಭಕ್ತನಪ್ಪ ಲಿಂಗವಂತನು ಶಿವನೊಬ್ಬನಲ್ಲದೆ ಸ್ಥಾವರ ಲಿಂಗಗಳನು ಎಲ್ಲ ವಿಷಯಂಗಳಲ್ಲಿಯೂ ಬಿಡುವುದು.

> ಪ್ರಾಣಲಿಂಗೀ ಸ್ವತಂತ್ರೋಽನ್ಯಂ ಲಿಂಗಾಗಂ ಸಂಕರಸ್ತಥಾ ।
> ಪ್ರಸಾದ ಸಂಕರಶ್ಚೈವ ರೌರವಂ ನರಕಂ ವ್ರಜೇತ್ ॥ ೨ ॥

ಸ್ವತಂತ್ರನಾಗಿ ಪ್ರಾಣಲಿಂಗಿಯಾದಾತನು ಮತ್ತೊಂದು ಲಿಂಗ ಸಂಪರ್ಕವ ಮಾಡಿ ಆ ಲಿಂಗಪ್ರಸಾದವ ಕೊಂಡಡೆ ಅವಂಗೆ ರೌರವ ನರಕ ತಪ್ಪದು.

> ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।
> ಶಿವಲಿಂಗೇ ವಸಂತೀವ ತಾನಿ ಸರ್ವಾಣಿ ನಾರದ ॥ ೩ ॥

ಎಲೈ ನಾರದನೇ ಭೂಮಿಯಲ್ಲಿ ಸಮುದ್ರ ಪರ್ಯಂತವಾಗಿ ಆವವು ಕೆಲವು ತೀರ್ಥಗಳುಂಟು. ಆವವು ಕೆಲವು ಪುಣ್ಯ ಕ್ಷೇತ್ರಗಳುಂಟು. ಅವೆಲ್ಲವೂ ಶಿವಲಿಂಗದಲ್ಲಿಯೇ ಇಹವು.

## ವಚನಗಳು

೧

ಪತಿವ್ರತೆಯಾದರೆ ಪರಪುರುಷರ ಸಂಗವೇತಕ್ಕೆ
ಲಿಂಗಸಂಗಿಯಾದಡೆ ಸ್ಥಾವರಲಿಂಗದ ಭಜನೆಯೇತಕ್ಕೆ
ಕಂಡ ಕಂಡವರ ಹಿಂದೆ ಹರಿವ ಚಾಂಡಾಲಗಿತ್ತಿಯಂತೆ
ಒಬ್ಬನ ಕೈವಿಡಿದು ಒಬ್ಬನಿಗೆ ಮಾತಕೊಟ್ಟು
ಒಬ್ಬನಿಗೆ ಸನ್ನೆಯ ಮಾಡಿ ಮತ್ತೊಬ್ಬನ ಸಂಗವ ಮಾಡುವ
ಹಾದರಗಿತ್ತಿಯಂತೆ
ಪ್ರಾಣಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಹರಸಿ
ಪೊಡಮಡುವ ಕೋಟಲೆ ಯೇತಕೋ

ಅದೆಂತೆಂದಡೆ ಲೈಂಗೇ—

ಬಹುಲಿಂಗಾರ್ಚಕಶ್ಚೈವ ಬಹುಭಾವ ಗುರುಸ್ತಥಾ ।
ಬಹು ಪ್ರಸಾದಂ ಭುಂಜೀಯಾದ್ವೇಶ್ಯಾ ಪುತ್ರಸ್ತಥೈವ ಚ ॥

ಎಂದುದಾಗಿ ಇದುಕಾರಣ ಕೂಡಲ ಚೆನ್ನಸಂಗಮದೇವಾ
ಇಂತಪ್ಪ ಪಾತಕರ ಮುಖವನೆನಗೆ ತೋರದಿರಯ್ಯಾ

೨

ಅಂಗದ ಮೇಲಣ ಲಿಂಗವ ಹಿಂಗಿ
ಸ್ಥಾವರಲಿಂಗಕ್ಕೆರಗುವ ಈ ಭಂಗಿತರ ಮುಖವ ನೋಡಲಾಗದು
ಅದೆಂತೆಂದಡೆ ತನ್ನ ಗಂಡನ ಬಿಟ್ಟು ಅನ್ಯಗಂಡರಿಗೆರಗುವ
ಹಾದರಗಿತ್ತಿಯಂತೆ ಅವಂದಿರ ಭಕ್ತಿ
ಅಂತಪ್ಪ ಪಂಚ ಮಹಾಪಾತಕರ ಮುಖದತ್ತ ತೋರದಿರಾ
ಗುಹೇಶ್ವರಾ

೩

ಲಿಂಗವೊಂದೇ ನಾಮಂಗಳು ಬೇರಾಗಿಹವಯ್ಯಾ
ಪರಮ ಪತಿವ್ರತೆಗೆ ಗಂಡನೊಬ್ಬನೇ

ಮತ್ತೊಬ್ಬರ ಬಳಿಗೆ ಹೋದರೆ ತನ್ನ ಗಂಡ ಕಿವಿಮೂಗ
ಕೊಯ್ಯದೇ ಮಾಂಬನೇ
ಹಲವುಲಿಂಗ ಪ್ರಸಾದವ ಹಂಚಿಕೊಂಡು ತಿಂಬ
ಈ ಕುನ್ನಿ ಮಾನವರ ಕೂಗಿಡೆ ಕೂಗಿಡೆ ನರಕದಲ್ಲಿಕ್ಕದೆ ಮಾಂಬನೆ
ನಮ್ಮ ಕೂಡಸಂಗಮದೇವರು

೪

ಹಾಲಹಿಡಿದು ಬೆಣ್ಣೆಯ ನರಸಲುಂಟೇ
ಲಿಂಗವ ಹಿಡಿದು ಪುಣ್ಯತೀರ್ಥಕ್ಕೆ ಹೋಗಲುಂಟೇ
ಲಿಂಗದ ಪಾದತೀರ್ಥ ಪ್ರಸಾದವ ಕೊಂಡು
ಅನ್ಯಬೋಧೆ ಅನ್ಯಶಾಸ್ತ್ರಕ್ಕೆ ಹಾರೈಸಲೇತಕ್ಕೆ
ಇಷ್ಟಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಶರಣೆಂದಡೆ
ತಪ್ಪದೆ ಹುಟ್ಟಿಸುವ ಶ್ವಾನಗರ್ಭದಲ್ಲಿ ಅದೆಂತೆಂದಡೆ

ಶಿವಧರ್ಮ ಪುರಾಣದಲ್ಲಿ—

> ಇಷ್ಟಲಿಂಗಮವಿಶ್ವಸ್ಯ ತೀರ್ಥಲಿಂಗಮುಪಸ್ಮೃತಃ ।
> ಶ್ವಾನಯೋನಿ ಶತಂಗತ್ವಾ ಚಾಂಡಾಲ ಗೃಹಮಾಚರೇತ್ ॥

ಇದನರಿದು ಗುರಕೊಟ್ಟ ಲಿಂಗದಲ್ಲಿಯೇ ಎಲ್ಲಾತೀರ್ಥಂಗಳು
ಎಲ್ಲಾಕ್ಷೇತ್ರಂಗಳು ಇದ್ದಾವೆಂದು ಭಾವಿಸಿ ಮುಕ್ತರಪ್ಪುದಯ್ಯಾ
ಇಂತಲ್ಲದೆ ಗುರುಕೊಟ್ಟಲಿಂಗವ ಕಿರಿದುಮಾಡಿ
ತೀರ್ಥಲಿಂಗವ ಹಿರಿದುಮಾಡಿ ಹೋದಾತಂಗೆ
ಅಘೋರ ನರಕ ತಪ್ಪದು ಕಾಣಾ ಚೆನ್ನಮಲ್ಲಿಕಾರ್ಜುನಾ

೫

ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ
ಗ್ರಾಮಲಿಂಗದ ಪೂಜೆಯು ಮಾಡಲಾಗದು
ಅದೇನು ಕಾರಣವೆಂದರೆ ಅಂಗದ ಲಿಂಗವು ರಂಗದ
ಕಲ್ಲತಾಗುವುದಾಗಿ

ಆವುದು ಘನವೆಂಬೆ ಆವುದು ಕಿರಿದೆಂಬೆ
ತಾಳಸಂಪುಟಕ್ಕೆ ಬಾರದ ಘುಲವು

ಅದೆಂತೆಂದಡೆ ಶಿವಧರ್ಮೆ—

ಪ್ರಾಣಲಿಂಗವು ವಿಶ್ವಸ್ಯ ಗ್ರಾಮಲಿಂಗಂ ಸಮಾಚರೇತ್ ।
ಶ್ವಾನಯೋನಿ ಶತಂ ಗತ್ವಾ ಚಂಡಾಲಗೃಹ ಮಾಚರೇತ್ ॥
ಲೋಕದ್ವಯಹಿತಂ ವಕ್ತುಂ ಜ್ಞಾತುಂ ವಾ ಕೋನ ಪಂಡಿತಃ ।
ತತ್ಕ್ರಿಯಾಮಧಿಧೀತ್ವಾ ತು ಮುನಯೋಽಪಿ ನ ಪಂಡಿತಾಃ ॥

ಎಂದುದಾಗಿ ದೀರ್ಘದಂಡ ಗುರುಸ್ಪರ್ಶನ
ಕರಮುಟ್ಟಿ ಲಿಂಗಸ್ಪರ್ಶನ ಶಿರಮುಟ್ಟಿ ಜಂಗಮ ಸ್ಪರ್ಶನ
ಇದನರಿಯದೆ ಹತ್ತಿರ ಇದ್ದ ಲಿಂಗವ ಕಿರಿದುಮಾಡಿ
ದೂರದಲ್ಲಿದ್ದ ಲಿಂಗವ ಹಿರಿದುಮಾಡಿ ಹೋದನಾದಡೆ
ವ್ರತಗೇಡಿಯಾಗಿ ನೂರುಬಾರಿ ಹೊಲೆಯರಮನೆಯ—
ನಾಯಾಗಿ ಹುಟ್ಟಿಸುವನು ಕೂಡಲಸಂಗಮದೇವಾ

## ಉಪವಾಸ ನಿರಸನ ಸ್ಥಲ ೨೩

ಇಂತೀ ಪ್ರಕಾರದಿಂ ಭೂಯ್ಯಾದಿ ಪ್ರದೇಶಂಗಳಲ್ಲಿ ಪ್ರತಿಷ್ಠಿತವಾದ ಸ್ಥಾವರ ಲಿಂಗಂಗಳನು ವೀರ ಮಾಹೇಶ್ವರರುಗಳು ಭಜಿಸಲಾಗದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಏಕಲಿಂಗ ನಿಷ್ಠಾಪರರಪ್ಪ ಶಿವಭಕ್ತರು ತಿಥಿವಾರಂಗಳಂ ಮಾಡಲಾಗದೆಂದು ನುಡಿದ ವಚನಂಗಳು.

ಶಿವಧರ್ಮೇ—

ಪ್ರಾಣಲಿಂಗ ಪ್ರಸಾದೀಸ್ಯಾನ್ನೋಪ ವಾಸಾದಿಕಂ ಚರೇತ್ ।
ಮೋಹಾದ್ಯದಾ. ಚರೇತ್ತಸ್ಯ ಪ್ರತ್ಯವಾಯೋ ಮಹಾನ್ ಭವೇತ್ ॥೧॥

ಪ್ರಾಣಲಿಂಗ ಪ್ರಸಾದಿಯಾದಾತನು ಉಪವಾಸ ಮೊದಲಾದವನು ಆಚರಿಸಲಾಗದು. ಅಜ್ಞಾನದದೆಸೆಯಿಂದ ಒಂದು ವೇಳೆ ಆಚರಿಸಿದ್ದಾದರೆ ಆತಂಗೆ ದೊಡ್ಡಿತ್ತಹ ಕೇಡಹುದು.

ಸೋಮವಾರೇ ವ್ಯತೀಪಾತೇ ಪಂಚಪರ್ವ ಪ್ರವರ್ತನವ್ ।
ಏಕಭುಕ್ತೋಪವಾಸೇನ ನರಕೇ ಕಾಲಮಕ್ಷಯವ್ ॥೨॥

ಸೋಮವಾರದಲ್ಲಿ ವ್ಯತೀಪಾತದಲ್ಲಿ ಪಂಚಪರ್ವದಲ್ಲಿ ಏಕಭುಕ್ತೋಪವಾಸಂಗಳಂ ಮಾಡಿದರೆ ಅನೇಕ ಕಾಲ ನರಕವನ್ನೈದುವನು.

ತಿಥಿಂವಾರಂ ಚ ಲಗ್ನಂ ಚ ಯಃ ಕುರ್ಯಾಚ್ಛಿವ ಭಕ್ತಿಮಾನ್ ।
ಸೋಽಪ್ಯಘೋರ ಮವಾಪ್ನೋತಿ ರೌರವಂ ನರಕಂ ತಥಾ ॥೩॥

ತಿಥಿಯೆಂದು ವಾರವೆಂದು ಲಗ್ನವೆಂದು ಇವುಗಳನ್ನು ಶಿವಭಕ್ತಿಯುಳ್ಳ ಸದ್ಭಕ್ತನಾಚರಿಸಿದ್ದಾದರೆ ಅಘೋರಪಾಪವನ್ನು ಹೊಂದುವನಲ್ಲದೆ ರೌರವ ನರಕವನ್ನು ಹೊಂದುವನು.

ಸೌಮೇ ಭೌಮೇ ದಿನೇ ಪೂರ್ಣೇ ಸಂಕ್ರಾಂತಿ ಶಿವರಾತ್ರಯೋಃ
ಏಕಭುಕ್ತ ವಿಧಿಂ ಕುರ್ಯಾನ್ನರಕೇ ಕಾಲಮಕ್ಷಯಮ್ ॥೪॥

ಸೋಮವಾರ ಮಂಗಳವಾರ ಹುಣ್ಣಿವೆ ಸಂಕ್ರಮಣ ಶಿವರಾತ್ರಿಗಳಲ್ಲಿ ಏಕಭುಕ್ತೋಪವಾಸಂಗಳಂ ಮಾಡದರೆ ಎಂದೆಂದೂ ಕೇಡಿಲ್ಲದ ನರಕವನ್ನೈದುವನು.

## ವಚನಗಳು

೧

ಪ್ರಾಣಲಿಂಗ ಸಂಬಂಧಿಯಾದ ಲಿಂಗವಂತನು
ಏಕಭುಕ್ತೋಪವಾಸಂಗಳಂ ಮಾಡಲಾಗದು
ಅದೇನು ಕಾರಣವೆಂದಡೆ ದೇವರಾರೋಗಣೆಯು ತಪ್ಪುವುದಾಗಿ
ಅಷ್ಟವಿಧಾರ್ಚನೆ ಷೋಡಶೋಪಚಾರ ಕ್ರಿಯೆಗಳು ತಪ್ಪುವುದಾಗಿ
ಆಗಮ ಮಾರ್ಗವು ತಪ್ಪುವುದಾಗಿ
ಶ್ರೀಗುರುವಿನಾಜ್ಞೆಯು ತಪ್ಪುವುದಾಗಿ
ತನಗೆ ಮುಂದೆ ಪ್ರಸಾದವಿಲ್ಲವಾಗಿ ಮುಕ್ತಿಯಿಲ್ಲ
ದೋಷಕಾರಿಯಪ್ಪನು ಕಾಣಾ ಅದೆಂತೆಂದಡೆ

ಪ್ರಾಣಲಿಂಗ ಸಮಾಯುಕ್ತಸ್ತ್ವೇಕ ಭುಕ್ತೋಪವಾಸಿನಃ ।
ಪ್ರಸಾದಸಿಷ್ಫಲಾಚ್ಚೈವ ರೌರವಂ ನರಕಂ ವ್ರಜೇತ್ ॥

ಇದು ಕಾರಣ ನಿತ್ಯನೈಮಿತ್ತ ಪಂಚಪರ್ವ ತಿಥಿಗಳಲ್ಲಿ
ಆವದಿನದಲ್ಲಿಯೂ ಎಂದೆಂದೂ ಅಷ್ಟವಿಧಾರ್ಚನೆ-
ಷೋಡಶೋಪಚಾರವೇ ಕರ್ತವ್ಯನೋಡಾ
ದೇವರಾರೋಗಣೆಯಂ ಮಾಡಿಸಿ ಪ್ರಸನ್ನತ್ವವಂ ಪಡೆದು
ಪ್ರಸಾದವಂ ಧರಿಸಿ ಮುಕ್ತರಪ್ಪುದಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೨

ಸೋಮವಾರ ಮಂಗಳವಾರವೆಂದು ಮಾಡುವ ಭಕ್ತನ
ಲಿಂಗ ಭಕ್ತಂಗೆಂತು ಸರಿಯೆಂಬೆನಯ್ಯಾ

ದಿನ ಶ್ರೇಷ್ಠವೋ ಲಿಂಗಶ್ರೇಷ್ಠವೋ
ದಿನಶ್ರೇಷ್ಠವೆಂದು ಮಾಡುವ ದುರಾಚಾರಿಯ ಮುಖವ
ನೋಡಲಾಗದು
ಆದಿನವೇ ಘನವೆಂದು ದಿನವೇ ದೈವವೆಂದು-
ಮಾಡುವನಾಗಿ ಆತ ದಿನದ ಭಕ್ತನು
ಲಿಂಗ ಭಕ್ತನು ಲಿಂಗವೇ ಘನವೆಂದು ಲಿಂಗವೇ ದೈವವೆಂದು
ಮಾಡುವನಾಗಿ ಆತ ಲಿಂಗಭಕ್ತನು
ಅಂತಾ ದಿನದ ಭಕ್ತಂಗೆಯೂ ಲಿಂಗ ಭಕ್ತಂಗೆಯೂ ಸಮವೆಂದಡೆ
ಪಂಚ ಮಹಾಪಾತಕ ತಪ್ಪದು ಅದೆಂತೆಂದಡೆ—

> ಸೌಮೇ ಭೌಮೇ ವ್ಯತೀಪಾತೇ ಸಂಕ್ರಾಂತಿ ಶಿವರಾತ್ರಯೋಃ ।
> ಏಕ ಭುಕ್ತ್ಯೋಪವಾಸೇನ ನರಕೇ ಕಾಲಮಕ್ಷಯಮ್ ॥

ಎಂದುದಾಗಿ ಇದುಕಾರಣ ದಿನವಾರಂಗಳು ಶ್ರೇಷ್ಠವೆಂದು
ಏಕಭುಕ್ತ್ಯೋಪವಾಸಂಗಳ ಮಾಡುವ ಭಕ್ತಂಗೆ
ಕುಂಭೀಪಾತಕ ನಾಯಕ ನರಕ ತಪ್ಪದು ಕೂಡಲಸಂಗಮದೇವಾ

೩

ತಿಥಿವಾರವೆಂದರಿಯೆನಯ್ಯಾ ಲಗ್ನವಿಲಗ್ನವೆಂದರಿಯೆನಯ್ಯಾ
ಇದನರಿತು ಹದಿನಾರುವಾರ ಹದಿನೆಂಟು ಕುಲವೆಂದೆಂಬರು
ನಾವಿದನರಿಯೆವಯ್ಯಾ ಇರುಳೊಂದುವಾರ ಹಗಲೊಂದುವಾರ
ಭವಿಯೊಂದುಕುಲ ಭಕ್ತನೊಂದುಕುಲ ನಾವುಬಲ್ಲುದು ಇದುತಾನೆ
ಬಸವಪ್ರಿಯ ಕೂಡಲಚೆನ್ನಸಂಗಮದೇವಾ

## ಶಿವಲಿಂಗಾರ್ಚನಾವಿಧಿಕ್ರಮ ಸ್ಥಲ ೨೪

ಇಂತೀ ಪ್ರಕಾರದಿಂ ವೀರಮಾಹೇಶ್ವರರುಗಳು ಏಕ ಭುಕ್ತೋಪವಾಸಂಗಳಂ ಮಾಡಲಾಗದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದವರ್ಗಾಹಾ ಪುರಾತನರು.

ಇಂತಹ ಉಪವಾಸಾದಿ ಕರ್ಮಂಗಳಂ ಬಿಟ್ಟ ಸದ್ಭಕ್ತರು ತಮ್ಮ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರ ಕ್ರಿಯೆಗಳ ಮಾಡಬೇಕೆಂದು ನುಡಿದ ವಚನಂಗಳು.

ದೇವಿಕಾಲೋತ್ತರೇ—

ಶೃಣುದೇವಿ ಪರಂಗುಹ್ಯಮರ್ಚನಸ್ಯ ವಿಸರ್ಜಯಂ
ಯಸ್ಯ ಕಸ್ಯಾಪಿ ನಾಖ್ಯಾತಂ ಕಥಯಾಮಿ ತವಾಖಿಲಮ್ ॥೧॥

ಎಲೈ ಪಾರ್ವತಿಯೇ ಶ್ರೇಷ್ಠವಾದ ಗೋಪ್ಯವಾದ ಪೂಜಾವಿಧಾನಕ್ರಮವನ್ನು ಹೇಳಿವೆನು ಕೇಳು. ಆವುದಾನೊಂದು ಪೂಜಾವಿಧಾನದ ಕ್ರಮವನ್ನು ನನ್ನಿಂದ ಒಬ್ಬರಿಗೆಯೂ ಹೇಳಲ್ಪಟ್ಟುದಿಲ್ಲ, ನಿನಗೆಲ್ಲವನೂ ಹೇಳುವೆನು.

ಪ್ರಾತರುತ್ಥಾಯ ಸಂಚಿಂತ್ಯ ಶಿವಾಯ ಶಿವಮಕ್ಷರಮ್ ।
ವಿಸೃಜೇನ್ಮಲ ಮೂತ್ರಾದಿ ಗತ್ವಾ ದೇಶಂ ಯಥೋಚಿತಮ್ ॥೨॥

ಹೊತ್ತಾರೆ ಎದ್ದು ಶಿವನಂ ಚಿಂತಿಸಿ ಪಂಚಾಕ್ಷರಿಯಂ ಜಪಿಸಿ ನಿವಾರ್ಸನಾಸ್ಥಾನಕ್ಕೆ ಹೋಗಿ ಮಲಮೂತ್ರಂಗಳಂ ಪರಿಹರಿಸಿ ಲಿಂಗಲೋಲುಪ್ತನಾಗಿಹುದು.

ಲಿಂಗಾರ್ಚನಸ್ಯ ಕಾಲೇ ತು ಪ್ರಚ್ಛನ್ನಃ ಪಟಮಂಟಪೇ ।
ಪಾಪೀ ಕೋಽಪಿ ಪರಿಭ್ರಷ್ಟೈರ್ನಾಸ್ತಿಕೈರ್ವೇವ ಪಾತಕೈಃ ॥೩॥

ದೃಷ್ಟಶ್ಚೇದ್ವಿಫಲಂ ಸರ್ವಂ ಲಿಂಗಪೂಜಾರ್ಚನಾ ಫಲಮ್ ।
ಕವಾಟಂ ಚಾರ್ಗಲಂ ಬದ್ಧ್ವಾ ಯಜೇದೇಕಂ ತ್ರಿಯಂಬಕಮ್ ॥೪॥

ಲಿಂಗಾರ್ಚನೆಯ ಕಾಲದಲ್ಲಿ ಕದವಂ ಮುಚ್ಚಿ ಸಮಾಧಾನದಲ್ಲಿ ಲಿಂಗಾರ್ಚನೆಯಂ ಮಾಡುವುದು ಪಾಪಿ ಕೋಪಿ ಶಿವಾಚಾರ ಭ್ರಷ್ಟ ಹರನಿಂದಕ ಗುರುನಿಂದಕ ಹೊಲ್ಲಹ ದೃಷ್ಟಿಯ ಅನಾಚಾರಿ ಇಂತಪ್ಪನವರುಗಳು

ನೋಡದಂತೆ ಉತ್ತಮವಾದ ಪಟವನು ತೆರೆಯ ಕಟ್ಟುವುದು ಪ್ರಮಾದವಶದಿಂದಲಾದರೂ ಕಂಡರೆ ತಾಮಾಡಿದ ಪೂಜೆ ನಿಷ್ಫಲವಹುದು.

### ವಚನಗಳು

೧

ಮುಂಜಾವದಲೆದ್ದು ಲಿಂಗದಂಘ್ರಿಯಮುಟ್ಟಿ
ಸುಪ್ರಭಾತದಲ್ಲಿ ಶಿವಶರಣರ ಮುಖವ ನೋಡುವುದು
ಹುಟ್ಟಿದ ಜನ್ಮಕ್ಕೆ ಇದೇಸಫಲವು ಸತ್ಯವಚನ ಇಂತೆಂದುದಾಗಿ
ಇಂತಿಲ್ಲದವರನೊಲ್ಲ ನಮ್ಮ ಕೂಡಲಸಂಗಮದೇವಾ

೨

ಹೊತ್ತಾರೆ ಎದ್ದು ಲಿಂಗದೇವನ ದೃಷ್ಟಿವಾರೆ ನೋಡುದವನ
ಸಂಸಾರವೇನವನ
ನಡೆವೆಣನ ನುಡಿವೆಣನ ಸಂಸಾರವೇನವನ
ಬಾಳುವೆಣನ ಬೀಳುವೆಣನ ಸಂಸಾರವೇನವನ
ಕೂಡಲಸಂಗಮದೇವಾ ನಿಮ್ಮ ಮುಟ್ಟಿ ನೋಡಿ ನೆನೆದು
ಪೂಜಿಸದವನ ಬದುಕೇನವನ

೩

ಸದ್ಭಕ್ತರು ಲಿಂಗಾರ್ಚನೆಯ ಮಾಡುವ ಕಾಲದಲ್ಲಿ
ಕದವಂ ಮುಚ್ಚಿ ಸಮಾಧಾನದಲ್ಲಿ ಲಿಂಗಾರ್ಚನೆಯ ಮಾಡುವುದು
ಶಿವ ಪೂಜೆಯ ಗುಪ್ತದಲ್ಲಿ ಮಾಡಬೇಕಾಗಿ ತೆರೆಯ ಕಟ್ಟುವುದು
ಪಾಪಿಯು ಕೋಪಿಯು ಶಿವಾಚಾರಭ್ರಷ್ಟನು
ಆಳಿಗೊಂಬವನು ವೈದಿಕ ವಿಪ್ರನು ಹೊಲ್ಲಹ ದೃಷ್ಟಿಯುವನು
ಅನಾಚಾರಿಯು ಮುರ್ಖನು ತನ್ನ ಗುರುವ ನಿಂದಿಸುವಾತನು
ಇಂತಪ್ಪವರುಗಳು ಪ್ರಮಾದದಿಂದಾದಡೆಯೂ ಕಂಡಡೆ
ತಾ ಮಾಡಿದ ಲಿಂಗಾರ್ಚನೆ ನಿಷ್ಫಲವಹುದು
ಇದನರಿದು ಸಕಳೇಶ್ವರಲಿಂಗವ ಏಕಾಂತದಲ್ಲಿ ಭಜಿಸುವ ಭಕ್ತಂಗೆ
ನಮೋ ನಮಃ ಎಂದು ಬದುಕಿದೆನಯ್ಯಾ

## ಶಿವಲಿಂಗ ಪೂಜಾ ಶ್ರದ್ಧಾ ಸ್ಥಲ ೨೫

ಇಂತೀ ಪ್ರಕಾರದಿಂ ಸದ್ಭಕ್ತರು ಶಿವಲಿಂಗಾರ್ಚನೆಯು ಮಾಡುವಲ್ಲಿ ಈ ಕ್ರಮದಿಂ ಮಾಡಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಆ ಕ್ರಮವಿಡಿದು ಲಿಂಗಾರ್ಚನೆಯಂ ಮಾಡುವಲ್ಲಿ ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಮಾಡಬೇಕೆಂದು ನುಡಿವ ವಚನಂಗಳು.

ಯಾವತೀ ವಸ್ತ್ರತಂತೂನಾಂ ಪರಿಸಂಖ್ಯಾ ಚ ಯಾವತೀ ।
ತಾವದ್ಯುಗ ಸಹಸ್ರಾಣಿ ರುದ್ರಲೋಕೇ ಮಹೀಯತೇ ॥ ೧ ॥

ಶಿವಲಿಂಗಕ್ಕೆ ವಸ್ತ್ರವ ಸಮರ್ಪಿಸಿದ ಫಲ ಆ ವಸ್ತ್ರದ ನೂಲು ಎಷ್ಟೆಂಟು, ಅಷ್ಟು ಯುಗ ಪರ್ಯಂತರ ರುದ್ರಲೋಕದಲ್ಲಿಹನು.

ಪ್ರಾತರುತ್ಥಾಯ ಯಃ ಸಮ್ಯಗ್ಭಕ್ತ್ಯಾ ಸಂಪೂಜಯೇಚ್ಛಿವಮ್ ।
ಕನ್ಯಾಕೋಟಿ ಶತಂದತ್ವಾ ಯತ್ಫಲಂ ತದವಾಪ್ನುಯಾತ್ ॥ ೨ ॥

ಆವನೊಬ್ಬನು ಉದಯಕಾಲದಲೆದ್ದು ಚೆನ್ನಾಗಿ ಭಕ್ತಿಯಿಂದ ಶಿವನಂ ಪೂಜಿಸುವನೋ ಆತನು ಕನ್ಯಾಕೋಟಿ ಸ್ತ್ರೀಯರುಗಳ ನೂರನಿತ್ತ ಫಲವನೈದುವನು.

ಸರ್ವದೇವಾತ್ಮಕಂ ಭಕ್ತ್ಯಾ ಸಂಗಮೇ ಸಾಂಬಮೀಶ್ವರಮ್ ।
ಪೂಜಯೇ ದ್ವಿವಿಧೈಃ ಪುಷ್ಪೈಃ ಸರ್ವಪಾಪೈಃ ಪ್ರಮುಚ್ಯತೇ ॥ ೩ ॥

ಎಲ್ಲಾ ದೇವರುಗಳಿಗೆ ಪ್ರಾಣದೊಡೆಯನಾದ ಪಾರ್ವತೀ ಸಹಿತನಾದ ಶಿವನನ್ನು ಆವನೊಬ್ಬನು ಭಕ್ತಿಯಿಂದ ಸಂಗಮ ಕಾಲದಲ್ಲಿ ನಾನಾ ಪ್ರಕಾರವಾದ ಪುಷ್ಪಗಳಿಂದ ಪೂಜಿಸುವನೋ ಆತನು ಎಲ್ಲಾ ಪಾಪಗಳಿಂದ ಬಿಡಲ್ಪಡುತ್ತಿಹನು.

ತ್ರಿಕಾಲ ಮರ್ಚಯೇಲ್ಲಿಂಗ ಮೇಕಕಾಲೇತು ಭಾವಿತಮ್ ।
ನರೋ ಭವತಿ ದಾನೇಸ ನ ತೀರ್ಥೇವನರಾಜಿಷು ॥ ೪ ॥

ಸೇಷ್ಟದ್ವೈಃಪಾದಿ ಯಜ್ಞೇಷು ತತ್ಫಲಂ ಲಭತೇ ಪ್ರಿಯೇ।
ಭೋಗಾನ್ಭುಕ್ತ್ವಾ ತಥಾ ಸ್ವರ್ಗೇ ಪಶ್ಚಾನ್ಮುಕ್ತೋ ಭವೇತ್ಸದಾ ॥ ೫ ॥

ಎಲೈ ಪ್ರಿಯ ಪ್ರಾಣವಲ್ಲಭೆಯಹ ಪಾರ್ವತಿ ಆವನಾನೊಬ್ಬನು ಏಕಾಗ್ರಚಿತ್ತನಾಗಿ ಮೂರು ಕಾಲದಲ್ಲಿ ಲಿಂಗವನು ಪೂಜಿಸುವನೋ ಒಂದು ಕಾಲದಲ್ಲಿಯಾದರೂ ಲಿಂಗವ ಪೂಜಿಸುವನೋ ಆ ಮನುಷ್ಯನು ಆ ಶಿವಪೂಜೆಯ ಮಾಡಿದ ಫಲವನು ಹಲವು ದಾನಗಳಲ್ಲಿಯ್ಯೆ ಮತ್ತಿ ಹನು. ಅಂದರೆ ತೀರ್ಥಯಾತ್ರೆಯ ಸ್ನಾನದಿಂ ಲಭಿಸುವ ಪುಣ್ಯಾರಣ್ಯಗಳ ಸಮೂಹದಿಂ ಲಭಿಸುವ ಇಷ್ಟ ದೈವ ಪೂಜೆಗಳಿಂ ಲಭಿಸುವ ಫಲವಂ ಪಡೆಯುವನು. ಹಾಗೇ ಸ್ವರ್ಗದಲ್ಲಿಯ ಭೋಗಂಗಳನನುಭವಿಸಿ ತರುವಾಯದಲ್ಲಿ ಮುಕ್ತನಹನು.

### ವಚನಗಳು

೧

ಅಷ್ಟವಿಧಾರ್ಚನೆಯ ಮಾಡುವುದು
ಮಾಡಿದ ಪೂಜೆಯ ನೋಡುವುದು
ಶಿವತತ್ವಗೀತವ ಪಾಡುವುದು
ಶಿವನ ಮುಂದೆ ಕುಣಿದಾಡುವುದು
ಕೂಡಲಸಂಗಮದೇವರ ಕೂಡುವುದು

೨

ಗಾಂದಾರಿ ಮೂಂವಾರಯೊಂಬ ಅಹೋರಾತ್ರಿಯುಲ್ಲಿ ಲಿಂಗವ
ಪೂಜಿಸಬೇಕು
ಊರ ಕೋಳಿ ಕೂಗದ ಮುನ್ನ ಕಾಡುನವಿಲು ವದರವ ಮುನ್ನ
ಲಿಂಗವ ಪೂಜಿಸಬೇಕು
ಗೋವುಗಳ ಕೊಲ್ಲುವ ಪಾಪಿಯ ದನಿಯ ಕೇಳದ ಮುನ್ನ
ತುಂಬಿ ಮುಟ್ಟಿ ಪುಷ್ಪ ನಿರ್ಮಾಲ್ಯವಾಗದ ಮುನ್ನ

ಶಿವಲಿಂಗವ ಪೂಜಿಸಬೇಕು ಅದೆಂತೆಂದಡೆ

ಯೋ ಲಿಂಗಮರ್ಧ ರಾತ್ರೌ ತು ಶುಚಿರ್ಭೂತ್ವಾ ಪ್ರಪೂಜಯೇತ್ ।
ಅಗ್ನಿಷ್ಟೋಮ ಸಹಸ್ರಸ್ಯ ಧರ್ಮಸ್ಯ ಲಭತೇಫಲಮ್ ॥

ಇದನರಿತು ಶುದ್ಧಾಂತಕರಣನಾಗಿ ಶಿವಪೂಜೆಯ ಮಾಡಬೇಕು
ಆತಂಗೆ ಅಗ್ನಿಷ್ಟೋಮ ಸಹಸ್ರ ಫಲವಹುದು
ತನ್ನೊಡನೆ ಮಲಗಿದ್ದ ಸತಿಯನೆಬ್ಬಿಸದೆ ಶಿವಲಿಂಗಕ್ಕೆರವ
ಸದ್ಭಕ್ತರ ಶ್ರೀಪಾದವ ತೋರಿ ಬದುಕಿಸಂಖ್ಯಾ ಕೂಡಲ
ಸಂಗಮದೇವಾ

೩

ಬೆಳಗಪ್ಪ ಜಾವದಲ್ಲಿ ಲಿಂಗವ ಮುಟ್ಟಿ ಪೂಜಿಸಿ
ಪ್ರಾತಃಕಾಲದಲ್ಲಿ ಜಂಗಮದ ಮುಖವ ನೋಡಿದರೆ

ಹುಟ್ಟೇಳು ಜನ್ಮದ ಪಾಪ ಹಿಂಗುವುದು ಅದೆಂತೆಂದಡೆ—

ಅರುಣೋದಯವೇಲಾಯಾಂ ಕರೋತಿ ಶಿವಪೂಜನಮ್
ಋಣತ್ರಯವಿನಿರ್ಮುಕ್ತಸ್ತಸ್ಯಾಂತೇ ಬ್ರಹ್ಮ ತತ್ಪದಮ್ ॥

ಇಂತಪ್ಪ ಸತ್ಕ್ರಿಯೆಯಿಲ್ಲದವರನೊಲ್ಲ ನಮ್ಮ ಗುಹೇಶ್ವರಾ

೪

ಉದಯ ಕಾಲ ಮಧ್ಯಾಹ್ನಕಾಲ ಅಸ್ತಮಯ ಕಾಲದಲ್ಲಿ
ತನ್ನ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವ
ಮಾಡುವಾತನೇ ಸದ್ಭಕ್ತನು
ಇಂತೀ ತ್ರಿಕಾಲದಲ್ಲಿ ಲಿಂಗಾರ್ಚನೆಯ ಮಾಡುವಲ್ಲಿ
ಹಿಂದಣ ಕ್ರಿಯೆಯಿಂದ ಮಾಡಬೇಕು
ಅಂತಲ್ಲದೆ ಸುಮ್ಮನೇ ಲಿಂಗಾರ್ಚನೆಯ ಮಾಡುವಾತ
ಭಕ್ತನಲ್ಲ ಮಾಹೇಶ್ವರನಲ್ಲ ಪ್ರಸಾದಿಯಲ್ಲ

ಪ್ರಾಣಲಿಂಗಿಯಲ್ಲ ಶರಣನಲ್ಲ ಐಕ್ಯನಲ್ಲ
ಅವನು ಶ್ರೀಗುರುವಿನಾಜ್ಞೆಯ ಮೀರಿದವನು
ಪಂಚಮಹಾಪಾತಕನು ಘಾತುಕನು

ಲಿಂಗಚೋರಕನು ಕೇಳಿರೇ ಅದೆಂತೆಂದಡೆ—

> ಬ್ರಹ್ಮಚಾರೀ ಶುಚಿರ್ಭೂತ್ವಾ ತ್ರಿಸಂಧ್ಯಾ ಪೂಜಯೇಚ್ಛಿವಮ್
> ಪುಣ್ಯಂತತ್ಸಕಲಂ ಸಮ್ಯಗ್ಲಭತೇ ಮುಕ್ತಿಮರ್ಜಯೇತ್ ॥

ಇದನರಿತು ತ್ರಿಸಂಧ್ಯಾ ಕಾಲದಲ್ಲಿ ತನ್ನ ಇಷ್ಟಲಿಂಗಕ್ಕೆ
ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ
ಹಿಂದಣಕ್ರಿಯೆವಿಡಿದು ಮಾಡುವ ಭಕ್ತಂಗೆ
ನಮೋನಮಃ ಎಂಬೆ ಬಸವಪ್ರಿಯ ಕೂಡಲ ಸಂಗಮದೇವಾ

## ಅಭಿನ್ನಲಿಂಗ ಸ್ಥಲ ೨೬

ಇಂತೀ ಪ್ರಕಾರದಿಂ ವೀರಮಾಹೇಶ್ವರರು ತಮ್ಮ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರ ಕ್ರಿಯೆಯಿಂದೆ ವಿಶ್ವಾಸವಿಡಿದು ಲಿಂಗಾರ್ಚನೆಯು ಮಾಡಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಇಷ್ಟಲಿಂಗವು ಪ್ರಾಣದ ಮಧ್ಯದಲ್ಲಿ ಧರಿಸಿ ಪೂಜಿಸುತ್ತಿರಲು ಇಷ್ಟಪ್ರಾಣಕ್ಕೆ ಭಿನ್ನವಿಲ್ಲವೆಂದರಿಯದೆ ಇಷ್ಟಲಿಂಗ ಪತನವಾಯಿತೆಂದು ಪ್ರಾಣತ್ಯಾಗವಂ ಮಾಡಲಾಗದೆಂದು ನುಡಿವ ವಚನಂಗಳು.

ಶಿವಧರ್ಮೇ —

ಇಷ್ಟಲಿಂಗೇ ಪರಿಭ್ರಷ್ಟೇ ನಷ್ಟೇ ದಗ್ಧೇ ಜಲೇಽಪಿವಾ ।
ಅಷ್ಟೋತ್ತರ ಜಪಂ ಕುರ್ಯಾತ್ಪ್ರಾಣಲಿಂಗಂಚ ಧಾರಯೇತ್ ॥ ೧ ॥

ಇಷ್ಟಲಿಂಗವು ಅಗ್ನಿಯಲ್ಲಿ ದಗ್ಧವಾದರೆ ಉದಕವಲ್ಲಿ ಬಿದ್ದುಹೋದರೆ ನೂರೆಂಟು ಬಾರಿ ಪಂಚಾಕ್ಷರಿಯಂ ಜಪಿಸುವುದು, ಮತ್ತು ಆ ಪ್ರಾಣಲಿಂಗವಂ ಧರಿಸುವುದು.

ಪಾಣಿನಾ ಧಾರಿತಂ ಲಿಂಗಂ ಪ್ರಾಣಸ್ಥಾನೇತು ನಿಕ್ಷಿಪೇತ್ ।
ತದ್ಭೇದಂ ಯೋ ನಜಾನಾತಿ ನ ಚ ಲಿಂಗಂ ನಚಾರ್ಚನಮ್ ॥ ೨ ॥

ಹಸ್ತದಲ್ಲಿ ಧರಿಸಲ್ಪಟ್ಟ ಲಿಂಗವನು ಪ್ರಾಣದಲ್ಲಿ ಧರಿಸುವುದು. ಇಂತೀ ಭೇದವನರಿಯದಾತಂಗೆ ಲಿಂಗವಿಲ್ಲ ಲಿಂಗಾರ್ಚನೆಯೂ ಮುನ್ನವೇ ಇಲ್ಲ.

ಪ್ರಾಣಲಿಂಗಂ ಮನೋಗ್ರಾಹ್ಯಂ ಭವೇತ್ಸಕಲ ನಿಷ್ಕಲಮ್ ।
ತತ್ಪ್ರಾಣೇಷ್ಟಂತು ಮನಸೋ ಲಿಂಗಮಾಹುರಿತಿ ಶ್ರುತಿಃ ॥ ೩ ॥

ಪ್ರಾಣಲಿಂಗವು ಮನಸ್ಸಿನಿಂದ ಗಹಿಸಲ್ಪಡಕ್ಕದ್ದು. ಅದು ಸಕಲನಿಷ್ಕಲವಾಗಿಹುದು. ಅದು ಪ್ರಾಣಲಿಂಗವೆಂದು ಇಷ್ಟಲಿಂಗವಾಗಿಹುದು. ಈ ರೀತಿಯಲ್ಲಿ ಪ್ರಾಣಲಿಂಗವನು ಹೇಳುತ್ತಿಹರು.

ಲಿಂಗಮಾಭ್ಯಂತರಂ ಬಾಹ್ಯಂ ಲಿಂಗಂ ಸವ್ಯಾಪಸವ್ಯಗಮ್ ।
ಅಗ್ರತಃ ಪೃಷ್ಠತೋಲಿಂಗಮಧಸ್ತಾದೂರ್ಧ್ವತಃ ಸ್ಥಿತಮ್ ॥ ೪ ॥

ಲಿಂಗವು ಅಂತರಂಗದಲ್ಲಿಯೂ ಇಹುದು ಬಹಿರಂಗದಲ್ಲಿಯೂ ಇಹುದು ಲಿಂಗವು ಎಡಬಲದಲ್ಲಿಯೂ ಇಹುದು ಲಿಂಗವು ಹಿಂದುಮುಂದೂ ಇಹುದು, ಲಿಂಗವು ಕೆಳಗಣ ದಿಕ್ಕಿನಲ್ಲಿಯೂ ಇಹುದು, ಲಿಂಗವು ಮೇಲಣ ದಿಕ್ಕಿನಲ್ಲಿಯೂ ಇಹುದು.

ಸ್ಥೂಲಂ ಸೂಕ್ಷ್ಮಂ ಪರಂ ಲಿಂಗಂ ಲಿಂಗ ಪ್ರಾಣಸ್ವರೂಪಕಮ್ ।
ಸರ್ವಾಂಗಲಿಂಗ ಸಂಪೂರ್ಣಮಿತಿ ಜ್ಞಾತ್ವಾ ಸುಖೀಭವ ॥ ೫ ॥

ಲಿಂಗವು ಸ್ಥೂಲವಾಗಿಯೂ ಇಹುದು ಸೂಕ್ಷ್ಮವಾಗಿಯೂ ಇಹುದು. ಪರವೆನಿಸಿಕೊಂಡು ಪ್ರಾಣ ಸ್ವರೂಪವಾಗಿಯೂ ಇಹುದು. ಸರ್ವಾಂಗಲಿಂಗ ಪರಿಪೂರ್ಣವೆಂದರಿಯಲು ಸುಖಿಯಹನು.

## ವಚನಗಳು

೧

ತಂಗುಳ ಬುತ್ತಿಯ ಕಟ್ಟಿ ಹೊಟ್ಟೆಯ ಮೇಲಿಟ್ಟುಕೊಂಡಿದ್ದರೆ
ಹಸಿವು ಹೋಗಿ ಆಪ್ಯಾಯನವಡಗುವುದೇ
ಅಂಗದ ಮೇಲೆ ಲಿಂಗವಿದ್ದರೇನು ಫಲ
ಅಂಗವೂ ಲಿಂಗವೂ ಕೂಡುವ ಈ ಭೇದವನರಿಯದವರು
ಗುರುತಲ್ಪಕರು ಪಂಚಮಹಾಪಾತಕರು ಅದೆಂತೆಂದಡೆ—

ದ್ವೈತಭಾವಿತ ದುಃಖಾನಾಮದ್ವೈತಂ ಪರಮಂ ಪದಮ್ ।
ಭಾರಮನ್ನಂ ಪಥಶ್ರಾಂತೆಸ್ತದ್ಭುಜಿಕ್ತೇ ಸುಖವಾಹಕಮ್ ॥
ಅಂಗೇನ ಲಿಂಗ ಸಂಬಂಧಃ ಲಿಂಗಂ ಪ್ರಾಣೇನ ಸಂಯುತಮ್ ।
ನಿಮಿಷಾರ್ಧವಿಯೋಗೇನ ನರಕೇ ಕಾಲಮಕ್ಷಯಮ್ ॥

ಎಂದುದಾಗಿ ಅಂಗದಲ್ಲಿ ಲಿಂಗವೊಡಗಲಿಸಬೇಕು
ಲಿಂಗದಲ್ಲಿ ಅಂಗವುವೊಡಗಲಿಸಬೇಕು

ಇದು ಕಾರಣ ಎಲ್ಲರೂ ಅಂಗಸಂಬಂಧಿಗಳಲ್ಲದೇ
ಲಿಂಗ ಸಂಬಂಧಿಗಳಪೂರ್ವಕಾಣಾ ಕೂಡಲ ಸಂಗಮದೇವಾ

೨

ಲಿಂಗ ಸಹಿತನಾದ ಭಕ್ತನು ಅಂಗದ ಮೇಲಣ ಲಿಂಗ
ಹೋಯಿತ್ತೆಂದು
ಸಂದೇಹವ ಮಾಡಿ ಶಸ್ತ್ರ ತೈಲ ಸಮಾಧಿ ಪಾತ ಇವಕೊಳಲಾಗದು

ಅದೆಂತೆಂಪಡೆ—

ಭಕ್ತಸ್ಯ ಲಿಂಗದೇಹಸ್ಯ ತಸ್ಮೇಹಂ ಲಿಂಗವರ್ಜಿತವತ್ |
ಶಸ್ತ್ರಂ ತೈಲಂ ಜಲಂ ದ್ವಷ್ಟ್ವಾ ಸಮಾಧಿಂ ಚ ವಿವರ್ಜಯೇತ್ ||

ಇದಕ್ಕೆ ಮುಂದೆ ಧ್ಯಾನಧಾರಣ ಸಮಾಧಿಯುಳ್ಳಿರಬೇಕು

ತಪೋಧ್ಯಾನಾದಿಕಂ ಚೈವ ಭಸ್ಮ ರುದ್ರಾಕ್ಷ ಧಾರಣವತ್ |
ಶಿವಮಂತ್ರ ಜಪಶ್ಚೈವ ನಿತ್ಯತ್ವಂ ಶಿವವಂದಿತವಃ ||

ಇದಕ್ಕೆ ಮುಂದೆ ಮುಕ್ತಿಯನೈದುವ ಪಥವೆಂತೆಂದರೆ

ನಿತ್ಯತ್ವಂ ನಿರ್ಮಲಂ ಚೈವ ನಿಶ್ಚಿತಂ ನಿರುಪಾಧಿಕವತ್ |
ಭುಕ್ತಿಂ ಮುಕ್ತಿಂ ಪ್ರಸಾದಂ ಚ ಶಿವಲೋಕೇ ಮಹೀಯತೇ ||

ಇಂತೆಂಬ ಶ್ರುತಿಯ ಮೀರಿ ಅಂಗಕಾಂಕ್ಷೆಯ ಮಾಡಿ
ಲಿಂಗವ ಧರಿಸುವ ಶಿಷ್ಯ ಗುರುದ್ರೋಹಿ
ಹೀನವಿಗಾತೆಯ ಮಾಡಿ ಲಿಂಗ ಧರಿಸುವ ಗುರು

ಶಿವದ್ರೋಹಿ ಅದೆಂತೆಂದಡೆ—

ಲಿಂಗಬಾಹ್ಯವ್ರತ ಭ್ರಷ್ಟೋ ಪುನರ್ಲಿಂಗಂ ತು ವರ್ಜಯೇತ್ |
ಪೂಜಯಾ ನಿಷ್ಫಲಂ ಚೈವ ರೌರವಂ ನರಕಂ ವ್ರಜೇತ್ ||

ಇಂತೆಂದುದಾಗಿ ಇವರಿಗೆ ಗುರುವಿಲ್ಲ ಲಿಂಗವಿಲ್ಲ
ಜಂಗಮವಿಲ್ಲ ಪಾದೋದಕ ಪ್ರಸಾದವಿಲ್ಲವಾಗಿ
ಮುಕ್ತಿಯಿಲ್ಲ ಕಾಣಾ ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ

೩

ಪ್ರಾಣಲಿಂಗ ಸಂಬಂಧಿಗಳೆಂದು ನುಡಿಯುತಿಪ್ಪ
ಅಣ್ಣಗಳಿರಾ ನೀವು ಕೇಳಿರೋ
ಪ್ರಾಣಕ್ಕೆ ಲಿಂಗ ಮೊದಲೋ ಲಿಂಗಕ್ಕೆ ಪ್ರಾಣ ಮೊದಲೋ
ಇಂತೀ ಉಭಯವ ವಿಚಾರಿಸಿಕೊಂಡು
ಗಂಧವ ವಾಯು ಸೋಂಕಿತೋ ವಾಯು ಗಂಧವ ಸೋಂಕಿತೋ
ಮನವ ಲಿಂಗವರಿಯಿತೋ ಲಿಂಗವ ಮನವರಿಯಿತೋ
ಕಾಯದಲ್ಲಿ ಸೋಂಕಿದ ಸುಖವ ಮನದಲ್ಲಿ ಅರಿವರಾರೋ
ಮನದಲ್ಲಿ ಮುಟ್ಟಿದ ಘನವ ಅರಿವಿನ ಅನುವಿನಿಂದ ಅರಿವರಾರೋ
ಇಂತೀ ಉಭಯವನರಿತವರ ಪ್ರಾಣಲಿಂಗಿಗಳೆಂಬೆ
ಉರಿಸೋಂಕಿದ ಕರ್ಪುರ ನಿಲುವುದಕ್ಕೆ ನೆಲೆವನೆಯಿನ್ನಾವುದೋ
ಭ್ರಮರ ಸೋಂಕಿದ ಸುವಾಸನೆಗೆ ಕಡೆ ಮೊದಲಾವುದೋ
ಘೂಳುಕೊಂಡ ಜಲಕ್ಕೆ ನೆಲೆವನೆಯಿನ್ನಾವುದೋ
ಲಿಂಗವನರಿತ ಮನವು ಹಿಂಗುವುದಕ್ಕೆ ಠಾವು ಇನ್ನಾವುದೋ
ಇಂತೀ ಗುಣಂಗಳಲ್ಲಿ ಕಳೆದುಳಿದ ಮಹಾತ್ಮಂಗೆ
ನಮೋ ನಮಃ ಎಂಬೆ ನಿಃಕಳಂಕಮಲ್ಲಿಕಾರ್ಜುನಾ

## ಜಂಗಮಲಿಂಗ ಶ್ರದ್ಧಾ ಸ್ಥಲ ೨೭

ಇಂತೀ ಪ್ರಕಾರದಿಂ ಸದ್ಭಕ್ತರು ಪ್ರಾಣಲಿಂಗಾರ್ಚನೆಯಂ ಮಾಡುತ್ತಿರಲು ಆ ಪ್ರಾಣಲಿಂಗಕ್ಕೆ ಚೈತನ್ಯ ಜಂಗಮಲಿಂಗವೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಜಂಗಮಲಿಂಗವೇ ಸದ್ಭಕ್ತನ ಪ್ರಾಣಲಿಂಗ ಸ್ವರೂಪವೆಂದು ನುಡಿದ ವಚನಗಳು.

ವೀರಾಗಮೇ—

ಕೋಟಿಲಿಂಗಾರ್ಚನೇ ಪುಣ್ಯಂ ಯಚ್ಚಿರಾಲ್ಲಭ್ಯತೇ ನರೈಃ ।
ತೇಷಾಂ ಕೋಟಿಗುಣಂ ಪುಣ್ಯಂ ಜಂಗಮಾನಾಂ ಚ ದರ್ಶನಮ್ ॥೧॥

ಉಳಿದ ದೇವತೆಗಳಿಂದ ಕೋಟಿ ಲಿಂಗಾರ್ಚನೆಯಿಂದ್ಯೆದಲ್ತಕ್ಕ ಪುಣ್ಯವುಂಟೋ ಅದಕ್ಕಿಂತಲೂ ಜಂಗಮದರ್ಶನ ಕೋಟಿ ಮಡಿ ಪುಣ್ಯದ ಫಲವನು ಕೊಡುವುದು.

ಸ್ಥಾವರಾರಾಧನಂ ಪುಣ್ಯಂ ಜಂಗಮಾನಾಂ ವಿಶಿಷ್ಯತೇ ।
ಸಾಧಾರಣ ಸಹಸ್ರೇಭ್ಯೋ ಜಂಗಮಸ್ತು ವಿಶೇಷತಃ ॥೨॥

ಲಿಂಗವ ಪೂಜಿಸಿದಡೆ ಪುಣ್ಯಫಲಕ್ಕೆ ಕಾರಣ ಜಂಗಮನ ಪೂಜಿಸಿದಡೆ ಮೋಕ್ಷಕ್ಕೆ ಕಾರಣ ಈ ಎರಡೂ ಸರಿಯೆನ್ನಬಾರದು ಜಂಗಮವೇ ಅಧಿಕವು.

ಮತ್ಸ್ವರೂಪೇಣ ನಾಮ್ನಾ ಚ ಗುರುಣಾ ದತ್ತ ಕಾರಣಾತ್ ।
ಲಿಂಗಂತು ಜಂಗಮಶ್ಚೈವ ಸ್ವಾತಂತ್ರ್ಯೇಣ ವಿಶೇಷಿತಃ ॥೩॥

ಲಿಂಗಾಕಾರದಿಂ ಲಿಂಗನಾಮದಿಂದ ಶ್ರೀಗುರು ಕೊಟ್ಟಕಾರಣ ಲಿಂಗವಾಯಿತ್ತು ಜಂಗಮವು ಸ್ವತಂತ್ರವಾಗಿ ಸುಜ್ಞಾನಿಯಾಗಿ ಮಹಾಘನವಾಯಿತ್ತು.

## ವಚನಗಳು

೧

ಲಿಂಗಾರ್ಚನೆಯ ಮಾಡುವನಯ್ಯಾ ಜಂಗಮವು
ಮನೆಗೆ ಬರಬೇಕೆಂದು
ಜಂಗಮವು ಬಂದರೆ ಲಿಂಗಾರ್ಚನೆಯಂ ಬಿಟ್ಟು
ಜಂಗಮಾರ್ಚನೆಯ ಮಾಡುವೆನಯ್ಯಾ
ಲಿಂಗದಲ್ಲೇನುಂಟು ಜಂಗಮದಲ್ಲೇನುಂಟೆಂದಡೆ-
ಲಿಂಗದಲ್ಲಿ ಕುಲವುಂಟು ಛಲವುಂಟು-
ಫಲವುಂಟು ಪದವುಂಟು ಭವವುಂಟು
ಆ ಜಂಗಮದಲ್ಲಿ ಕುಲಂ ನಾಸ್ತಿ ಛಲಂ ನಾಸ್ತಿ-
ಫಲಂ ನಾಸ್ತಿ ಪದಂ ನಾಸ್ತಿ ಭವಂ ನಾಸ್ತಿ

ಅದೆಂತೆಂದಡೆ ಶಿವರಹಸ್ಯದಲ್ಲಿ---

ಶಿವಂ ಲಿಂಗಮುಖಂ ಜ್ಞಾತ್ವಾ ಅಂಗಭಾವೇನ ಭಾವ್ಯತೇ ।
ಜಂಗಮಸ್ಯ ಮುಖಂ ಜ್ಞಾತ್ವಾ ಸಂಸಾರಸ್ಯ ನ ಬಂಧನಮ್ ॥
ಪ್ರಸಾದಮುಖಮುಜ್ಞಾತ್ವಾ ಸದ್ಗತಿಶ್ಚ ನ ವಿದ್ಯತೇ ।
ತ್ರಿಧಾಮ್ನೈಕ್ಯವಿದಂ ದೇವಿ ಪುನರಾಕಶ್ಚಿನ್ನ ವಿದ್ಯತೇ ॥

ಎಂದುದಾಗಿ ಇದು ಕಾರಣ ನಮ್ಮ ಬಸವಣ್ಣನು
ಜಂಗಮವೇ ಲಿಂಗವೆಂದು ನಂಬಿದಕಾರಣ
ಸ್ವಯಂ ಲಿಂಗವಾದಕಾರಣ ಕೂಡಲಚೆನ್ನಸಂಗಮದೇವಾ

೨

ಶ್ರೀಗುರುವಿನ ಹಸ್ತದಲ್ಲಿ ಉಪದೇಶಪಡೆದರು ಭಕ್ತರಾದುದು
ಮೊದಲಾಗಿ
ನಿಮ್ಮ ಲಿಂಗವಾರೋಗಣೆಯ ಮಾಡಿದ ದಿನವುಂಟೇ
ಉಂಟಾದಡೆ ತೋರಿ ಇಲ್ಲದಿದ್ದರೆ ನೀವು ಕೇಳಿ
ನಾನು ನಮ್ಮ ಶ್ರೀಗುರುವಿನ ಹಸ್ತದಲ್ಲಿ

ಉಪದೇಶವಡೆವು ಭಕ್ತನಾದುದು ಮೊದಲಾಗಿ
ನಮ್ಮ ಲಿಂಗವು ನಿರಂತರವು ಆರೋಗಣೆಯ ಮಾಡಿ
ಪ್ರಸಾದವ ಕರುಣಿಸುವನು
ಅದುಕಾರಣ ನಮಗೆ ಲಿಂಗವುಂಟು
ನಿಮ್ಮ ಲಿಂಗಕ್ಕೆ ಕರಚರಣ ಅವಯವಗಳಿಲ್ಲವಾಗಿ
ನಿಮ್ಮ ಲಿಂಗವು ಸಕಲ ಭೋಗಂಗಳ ಭೋಗಿಸಲರಿಯದಾಗಿ
ನಿಮಗೆ ಪ್ರಸಾವವಿಲ್ಲ ಪ್ರಸಾದವಿಲ್ಲವಾಗಿ ನಿಮಗೆ
ಲಿಂಗವಿಲ್ಲವೆಂದೆನು
ಅವಕ್ಕೆ ನೀವು ಸಂಕಲ್ಪಗೊಳ್ಳದಿರಿ
ಆ ವಿವರವನು ನಾನು ನಿಮಗೆ ಚೆನ್ನಾಗಿ ಕಾಣಿಸಿ ತೋರಿ ಹೇಳುವೆನು
ಅದು ಹೇಗೆಂದಡೆ ನಿಮ್ಮ ಶ್ರೀಗುರು ನಿಮಗೆ ಪ್ರಾಣಲಿಂಗ
ಸಂಬಂಧವ ಮಾಡುವಲ್ಲಿ
ಆ ಲಿಂಗವೇ ಜಂಗಮದಂಗವು
ಆ ಜಂಗಮವೇ ಲಿಂಗದ ಪ್ರಾಣ ಚೈತನ್ಯ ಕಳೆಯ ಮಾಡಿ
ನಿಮ್ಮ ಶ್ರೀಗುರು ನಿಮ್ಮ ಕರಸ್ಥಲದಲ್ಲಿ ಆ ಲಿಂಗವ ಕೊಟ್ಟ ಕಾರಣ
ಇಂತಹ ಜಂಗಮ ಮುಖದಲ್ಲಿ ತೃಪ್ತನಹನಲ್ಲದೆ
ಲಿಂಗದ ಮುಖದಲ್ಲಿ ನಾನು ತೃಪ್ತನಹೆನೆಂದು ಹೇಳಿ ಕೊಟ್ಟನೇ
ಶ್ರೀಗುರು ಲಿಂಗವನು ಹಾಗೆ ಕೊಟ್ಟುದಿಲ್ಲವಾಗಿ

ಅದೆಂತೆಂದಡೆ ಶಿವರಹಸ್ಯದಲ್ಲಿ—

ಸ್ಥಾವರಾರ್ಪಿತ ನೈವೇದ್ಯಂ ನ ಚ ತೃಪ್ತಿರ್ಮಹೇಶ್ವರಿ ।
ಜಂಗಮಾರ್ಪಿತನೈವೇದ್ಯಾದಹಂ ತೃಪ್ತೋ ವರಾನನೇ ॥

ಎಂದುದಾಗಿ ಇಂತಹ ಶ್ರೀಗುರುವೇನೂ ತಪ್ಪಿಹೇಳಿದುದಿಲ್ಲ
ಅದಕ್ಕೆ ಉಪಷ್ಟಂಭಕವಾಕ್ಯ ವೃಕ್ಷದ ಕೊನೆ ಕೊನೆಗಳಿಗೆ
ಉದಕವ ನೀಡಿದಡೆ ವೃಕ್ಷ ಪಲ್ಲವಿಸುವುದೇ-
ಬೇರಿಂಗೆ ನೀಡಬೇಕಲ್ಲದೇ ಅದೆಂತೆಂದಡೆ-

"ವೃಕ್ಷಸ್ಯ ವದನಂ ಭೂಮಿಃ ಸ್ಥಾವರಾಸ್ಯಂ ತು ಜಂಗಮಃ"

ಅದಕ್ಕೆ ಮತ್ತೆಯೂ—

ಯಥಾ ತರೋರ್ಮೂಲನಿಷಿಂಚಿತೇನ ತೃಪ್ಯಂತಿ ತತ್ಸ್ಕಂಧ ಭುಜೋಪಶಾಖಾಃ ।
ಪ್ರಾಣೋಪಹಾರಾಚ್ಚ ಯಥೇಂದ್ರಿಯಾಣಾಂ ತಥೈವ ಸರ್ವಾರ್ಹಣ ಮುಚ್ಯ
ತೇಂದ್ರಿಯಾಪರ್ ॥

ಎಂದುದಾಗಿ ಅಂತು ವೃಕ್ಷದ ಕೊನೆಯ ಸ್ಥಾನವೇ ಲಿಂಗವು
ಆ ವೃಕ್ಷದ ಬೇರಿನ ಸ್ಥಾನವೇ ಜಂಗಮವು
ಅದಕ್ಕೆ ಮತ್ತೆಯೂ ದೃಷ್ಟ—
ಗರ್ಭಿಣೀ ಸ್ತ್ರೀಗೆ ಉಣಲಿಕ್ಕಿದಡೆ
ಆ ಗರ್ಭದೊಳಗಣ ಶಿಶು ತೃಪ್ತಿಯಹುದಲ್ಲದೆ
ಆ ಸ್ತ್ರೀಯ ಗರ್ಭದಮೇಲೆ ಸಕಲ ಪದಾರ್ಥಂಗಳನಿಕ್ಕಿದಡೆ
ಆ ಗರ್ಭದೊಳಗಣ ಶಿಶು ತೃಪ್ತಿಯಾಗಬಲ್ಲದೇ
ಅದುಕಾರಣ ಆ ಗರ್ಭದ ಸ್ತ್ರೀಯ ಸ್ಥಾನವೇ ಜಂಗಮವು
ಆ ಗರ್ಭದೊಳಗಣ ಶಿಶುವಿನ ಸ್ಥಾನವೇ ಲಿಂಗವು
ಅದಕ್ಕೆ ಮತ್ತೆಯೂ ದೃಷ್ಟ
ಪೃಥಿವಿಗೆ ಚೈತನ್ಯವಾದಡೆ ಸಸಿಗಳು ಬೆಳೆವವಲ್ಲದೆ
ಆ ಸಸಿಗಳ ಕೊನೆಯಮೇಲೆ ಮಳೆಸುರಿದರೆ
ಸಸಿಗಳು ಬೆಳೆಯ ಬಲ್ಲುವೇ ಬೆಳೆಯಲರಿಯವಾಗಿ
ಅಂತು ಆ ಪೃಥಿವಿಯ ಸ್ಥಾನವೇ ಜಂಗಮ
ಆ ಸಸಿಯ ಕೊನೆಯ ಸ್ಥಾನವೇ ಲಿಂಗವು
ಇದಕ್ಕೆ ಮತ್ತೆಯೂ ದೃಷ್ಟ
ಸ್ತ್ರೀಯ ಸಂಯೋಗವ ಮಾಡಬೇಕೆಂದು
ನಿರ್ಜೀವಿಯ ಮುಂದೆ ತಂದಿರಿಸಿದಡೆ
ಆ ನಿರ್ಜೀವಿಯು ಸಂಯೋಗವ ಮಾಡಬಲ್ಲದೆ ಆಗದಾಗಿ
ಸಜೀವಿಯೇ ಜಂಗಮವು ನಿರ್ಜೀವಿಯೇ ಲಿಂಗವು
ಅದಕ್ಕೆ ಮತ್ತೆಯೂ ದೃಷ್ಟ—
ದೇಹದ ಮೇಲೆ ಸಕಲ ಪದಾರ್ಥವ ತಂದಿರಿಸಿದಡೆ
ಆತ್ಮನು ತೃಪ್ತಿಯಾಗಬಲ್ಲುದೇ

ಜಿಹ್ವೆಯು ಮುಖದಲ್ಲಿ ತೃಪ್ತಿಯಹುದಲ್ಲದೆ
ಅಂತು ದೇಹಸ್ಥಾನವೇ ಲಿಂಗವು
ಜಿಹ್ವೆಯ ಸ್ಥಾನವೇ ಜಂಗಮವು
ಇಂತೀ ನಾನಾ ದೃಷ್ಟಂಗಳಲ್ಲಿ ಏನ ತೋರಿ ಹೇಳಿದಡೆಯೂ
ನಿಮ್ಮ ಲಿಂಗವು ನಮ್ಮ ಜಂಗಮವು ಸರ್ವಾಂಗದೊಳಗೆ
ಹೊಳವಿಹುದು ಕಾಣಾ ಕೂಡಲ ಸಂಗಮದೇವಾ

## ಜಂಗಮಲಿಂಗಾರ್ಪಿತ ಸ್ಥಲ ೬೮

ಇಂತೀ ಪ್ರಕಾರದಿಂ ಪುರಾತನ ಮಾಹೇಶ್ವರರು ಜಂಗಮವೇ ಲಿಂಗವೆಂಬು ದನರಿದು ವಿಶ್ವಾಸದಿಂ ಭಕ್ತಿಯ ಮಾಡಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದ ಮಹಾಪುರಾತನರು.

ಇಂತಹ ಜಂಗಮಕ್ಕೆ ಸಕಲ ಭೋಗಂಗಳಂ ಕೊಟ್ಟಲ್ಲದೆ ಕೊಳಲಾಗ ದೆಂಬುದಂ ನುಡಿದ ವಚನಂಗಳು.

ವೀರಾಗಮೇ—

ವಸ್ತ್ರಭೂಷಣಗಂಧಾಂಶ್ಚ ಧೂಪಂ ದೀಪಂ ಚ ತಾಂಬೂಲಂ ।
ಜಂಗಮೇನ ವಿನಾ ಭುಂಕ್ತೇ ಪ್ರಸಾದಂ ನಿಷ್ಫಲಂ ಭವೇತ್ ॥೧॥

ವಸ್ತ್ರ ಕಪ್ಪಡವ ಹೊದೆಯುವಲ್ಲಿಯೂ ಬಂಗಾರವ ತೊಡುವಲ್ಲಿಯೂ ಗಂಧಾನುಲೇಪನದಲ್ಲಿಯೂ ಧೂಪವಾಸನೆಯ ಕೊಂಬಲ್ಲಿಯೂ ದೀಪವ ನೆತ್ತಿಸಿಕೊಂಬಲ್ಲಿಯೂ ವೀಳ್ಯವ ಮಾಡುವಲ್ಲಿಯೂ ಇಂತೀ ವಸ್ತುಗಳನು ಜಂಗಮಲಿಂಗಕ್ಕೆ ಸಮರ್ಪಿಸದೆ ತನ್ನ ಲಿಂಗಕ್ಕೆ ಸಮರ್ಪಿಸಿಕೊಂಡಡೆ ಆ ಲಿಂಗಪ್ರಸಾದ ನಿಷ್ಫಲವಪ್ಪುದು.

ಶಿವರಹಸ್ಯೇ—

ಷಡ್ರಸಾನ್ನಂ ಚ ಪಕ್ವಾನ್ನಂ ಭುಂಕ್ತೇ ಜಂಗಮವರ್ಜಿತಮ್ ।
ಅಸಾಕ್ಷಿ ಜಂಗಮಂ ಕೃತ್ವಾ ರೌರವಂ ನರಕಂ ವ್ರಜೇತ್ ॥೨॥

ಷಡ್ರಸಾನ್ನವಾದಡೂ ಪಕ್ವಾನ್ನವಾದಡೂ ಜಂಗಮ ಸಾಕ್ಷಿಯಾಗಿ ಕೊಳಬೇಕಲ್ಲದೆ ಜಂಗಮವಿರಹಿತನಾಗಿ ಕೊಳಲಾಗದು ಅಲ್ಲದೆ ತನ್ನ ಲಿಂಗಕ್ಕೆ ಸಮರ್ಪಿಸಿಕೊಂಡಡೆ ರೌರವ ನರಕವನೈದುವನು.

ಕಾಳಿಕಾಖಂಡೇ—

ಗೃಹಂ ಕ್ಷೇತ್ರಂ ಚ ಧಾನ್ಯಂ ಚ ಗೋಕುಲಂ ಮಹಿಷೀಸ್ತಥಾ ।
ಜಂಗಮೇಷ್ವಂ ವಿನಾ ಭುಂಕ್ತೇ ಪ್ರಸಾದಂ ನಿಷ್ಫಲಂ ಭವೇತ್ ॥೩॥

ಮನೆಯೊಳಗಿರುವಲ್ಲಿಯೂ ಭೂಮಿಯನಾಳುವಲ್ಲಿಯೂ ಹೊನ್ನು ಧಾನ್ಯಂಗಳ ಬಳಸುವಲ್ಲಿಯೂ ಎಮ್ಮೆ, ಆಕಳು ಹಯನಂಗಳ ಬಳಸುವಲ್ಲಿಯೂ ಇಷ್ಟನೂ ಜಂಗಮಕ್ಕೆ ಕೊಡದೆ ತನ್ನ ಲಿಂಗಕ್ಕೆ ಕೊಟ್ಟು ಪ್ರಸಾದವ ಕೊಂಡೊಡೆ ಆ ಪ್ರಸಾದವು ನಿಷ್ಫಲವಹುದು

## ವಚನಗಳು

೧

ಎನ್ನ ನೇತ್ರದಾಹಾರವನು ಜಂಗಮಕ್ಕೆ ನೋಡಿಸಿದಲ್ಲದೆ
ನಾನು ನೋಡಿದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನ ಶ್ರೋತ್ರದಾಹಾರವನು ಜಂಗಮಕ್ಕೆ ಕೇಳಿಸಿದಲ್ಲದೆ
ನಾನು ಕೇಳಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನ ಘ್ರಾಣದಾಹಾರವನು ಜಂಗಮಕ್ಕೆ ವಾಸಿಸಿದಲ್ಲದೆ
ನಾನು ವಾಸಿಸಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನ ಜಿಹ್ವೆಯಹಾರವನು ಜಂಗಮಕ್ಕೆ ಊಡಿಸಿದಲ್ಲದೆ
ನಾನು ಭುಂಜಿಸಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನ ಸ್ಪರ್ಶದಾಹಾರವನು ಜಂಗಮಕ್ಕೆ ಮುಟ್ಟಿಸಿದಲ್ಲದೆ
ನಾನು ಮುಟ್ಟಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನಂಗದಾಹಾರ ಮಜ್ಜನವನು ಜಂಗಮಕ್ಕೆ ಮಾಡಿಸಿದಲ್ಲದೆ
ನಾನು ಮಜ್ಜನವ ಮಾಡಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನಂಗದಾಹಾರ ವಸ್ತ್ರ ಕಪ್ಪಡವನು ಜಂಗಮಕ್ಕೆ ಹೊದಿಸಿದಲ್ಲದೆ
ನಾನು ಹೊದ್ದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನಂಗದಾಹಾರ ಸ್ತ್ರೀಯನು ಜಂಗಮಕ್ಕೆ ಸಂಯೋಗವ ಮಾಡಿಸಿದಲ್ಲದೆ
ನಾನು ಸ್ತ್ರೀಯ ಸಂಯೋಗವ ಮಾಡಿದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನಂಗದಾಹಾರ ಮಂಚ ಸುಪ್ಪತ್ತಿಗೆಯ ಜಂಗಮಕ್ಕೆ ಕೊಡದೆ
ನಾನು ಮಂಚಸುಪ್ಪತ್ತಿಗೆಯ ಮೇಲೆ ಮಲಗಿದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ

ಎನ್ನಂಗದಾಹಾರ ಗದ್ದುಗೆಯನು ಜಂಗಮಕ್ಕೆ ಕೊಡದೆ
ನಾನು ಕುಳ್ಳಿತ್ತೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನಂಗದಾಹಾರವನು ಗೃಹವನು ಜಂಗಮಕ್ಕೆ ಕೊಡದೆ
ನಾನು ಮನೆಯೊಳಗಿದ್ದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನಂಗದಾಹಾರ ಆಭರಣಂಗಳನು ಜಂಗಮಕ್ಕೆ ತೊಡಿಸದೆ
ನಾನು ತೊಟ್ಟೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನಂಗದಾಹಾರ ವಾಹನಂಗಳನು ಜಂಗಮಕ್ಕೆ ಕೊಡದೆ
ನಾನು ಆನೆ ಕುದುರೆ ದಂಡಿಗೆಯನೇರಿದೆನಾದಡೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನಂಗದಾಹಾರ ಸತ್ತಿಗೆ ಚಾಮರಂಗಳನು ಜಂಗಮಕ್ಕೆ ಕೊಡದೆ
ನಾನೇ ಉಪಚರಿಸಿಕೊಂಡಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನಂಗದಾಹಾರ ಚರಣರಕ್ಷೆಯನು ಜಂಗಮಕ್ಕೆ ಮೆಟ್ಟಿಸದೆ
ನಾನು ಮೆಟ್ಟಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಎನ್ನಂಗದಾಹಾರವನು ದೇಹವನೊತ್ತಿಸಿಕೊಂಬಲ್ಲಿ
ಜಂಗಮಕ್ಕೊತ್ತಿಸದೆ
ನಾನು ಒತ್ತಿಸಿಕೊಂಡೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಇಂತೀ ಹದಿನಾರು ತೆರನ ಭಕ್ತಿಯನು ಜಂಗಮಕ್ಕೆ ಮಾಡುವಲ್ಲಿ
ಅದರೊಳಗೆ ಒಂದನಾದಡೂ ನಾನು ವಂಚಿಸಿ ಭೋಗಿಸಿದೆನಾದಡೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಇಂತೀ ಪ್ರಕಾರದಲ್ಲಿ ಜಂಗಮಲಿಂಗವನರ್ಚಿಸಿ ಪೂಜಿಸಿ
ಪಾದೋದಕ ಪ್ರಸಾದವಕೊಂಬ ಸದ್ಭಕ್ತಂಗೆ-
ಗುರುವುಂಟು ಲಿಂಗವುಂಟು ಜಂಗಮವುಂಟು
ಪಾದೋದಕವುಂಟು ಪ್ರಸಾದವುಂಟು
ಆಚಾರವುಂಟು ಸದ್ಭಕ್ತಿಯುಂಟು
ಈ ಕ್ರಮದಲ್ಲಿ ಜಂಗಮವರ್ಚಿಸದೆ ಪೂಜಿಸದೆ
ತನ್ನ ಸಂಸಾರದೊಡನೆ ಒಡಲ ಹೊರೆವವಂಗೆ
ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ

ಪಾದೋದಕವಿಲ್ಲ ಪ್ರಸಾದವಿಲ್ಲ ಅವನು ಅವಿಚಾರಿ
ಅವನು ಅಶ್ರೇಷ್ಠ ಅವನು ಅಪೂಜ್ಯ ಅವನು ಭವಿ
ಅವನು ರೋಗಿ ಅವನು ಮತ್ತ ಅವನು ದರ್ಪಕ
ಅವನು ಪಂಚಮಹಾಪಾತಕನಯ್ಯಾ ಗುಹೇಶ್ವರಾ

೨

ನಾನು ಮಜ್ಜನವ ಮಾಡುವುದಕ್ಕೆ ಮುನ್ನವೆ
ಜಂಗಮಕ್ಕೆ ಮಜ್ಜನವ ಮಾಡಿಸುವೆ
ನಾನು ಸೀರೆಯನುಡುವುದಕ್ಕೆ ಮುನ್ನವೆ
ಜಂಗಮಕ್ಕೆ ದೇವಾಂಗವನುಡಿಸುವೆ
ನಾನು ಪರಿಮಳವ ಲೇಪಿಸುವುದಕ್ಕೆ ಮುನ್ನವೆ
ಜಂಗಮಕ್ಕೆ ಸುಗಂಧ ದ್ರವ್ಯಂಗಳ ಲೇಪಿಸುವೆ
ನಾನು ಅಕ್ಷತೆಯನಿಡುವುದಕ್ಕೆ ಮುನ್ನವೆ
ಜಂಗಮಕ್ಕೆ ಅಕ್ಷತೆಯ ನಿಡುವೆ
ನಾನು ಪುಷ್ಪವ ಮುಡಿಯುವುದಕ್ಕೆ ಮುನ್ನವೆ
ಜಂಗಮಕ್ಕೆ ಪರಿಮಳ ಪುಷ್ಪವ ಮುಡಿಸುವೆ
ನಾನು ಧೂಪವಾಸನೆಯ ಕೊಳದ ಮುನ್ನವೆ
ಜಂಗಮಕ್ಕೆ ಧೂಪವಾಸನೆಯ ಕೊಡುವೆ
ನಾನು ದೀಪಾರತಿಯ ನೋಡದ ಮುನ್ನವೆ
ಜಂಗಮಕ್ಕೆ ಆರತಿಯ ನೋಡಿಸುವೆ
ನಾನು ಸಕಲ ಪದಾರ್ಥವ ಸ್ವೀಕರಿಸದ ಮುನ್ನವೆ
ಜಂಗಮಕ್ಕೆ ಮೃಷ್ಟಾನ್ನವ ನೀಡುವೆ
ನಾನು ಪಾನಂಗಳ ಕೊಳದ ಮುನ್ನವೆ
ಜಂಗಮಕ್ಕೆ ಅಮೃತಪಾನಂಗಳ ಕೊಡುವೆ
ನಾನು ಕೈಯ್ಯ ತೊಳೆಯದ ಮುನ್ನವೆ
ಜಂಗಮಕ್ಕೆ ಹಸ್ತಪ್ರಕ್ಷಾಲನವ ಮಾಡಿಸುವೆ
ನಾನು ವೀಳೆಯವಂ ಮಾಡುವುದಕ್ಕೆ ಮುನ್ನವೆ

ಜಂಗಮಕ್ಕೆ ತಾಂಬೂಲವ ಕೊಡುವೆ
ನಾನು ಗದ್ದಿಗೆಯ ಮೇಲೆ ಕುಳ್ಳಿರುವುದಕ್ಕೆ ಮುನ್ನವೆ
ಜಂಗಮಕ್ಕೆ ಉನ್ನತಾಸನವನಿಕ್ಕುವೆ
ನಾನು ಸುನಾದಂಗಳ ಕೇಳುವುದಕ್ಕೆ ಮುನ್ನವೆ
ಜಂಗಮಕ್ಕೆ ಸುಗೀತ ವಾದ್ಯಂಗಳ ಕೇಳಿಸುವೆ
ನಾನು ಸುರೂಪಂಗಳ ನೋಡುವುದಕ್ಕೆ ಮುನ್ನವೆ
ಜಂಗಮಕ್ಕೆ ಗೀತ ನೃತ್ಯಂಗಳ ನೋಡಿಸುವೆ
ನಾನು ಪುರುಷ ಸಂಗವ ಮಾಡುವುದಕ್ಕೆ ಮುನ್ನವೆ
ಜಂಗಮಕ್ಕೆ ಅಂಗಸಂಯೋಗವ ಮಾಡಿಸುವೆ
ನಾನು ಭೂಷಣಂಗಳ ತೊಡುವುದಕ್ಕೆ ಮುನ್ನವೆ
ಜಂಗಮಕ್ಕೆ ಆಭರಣಂಗಳ ತೊಡಿಸುವೆ
ನಾನು ವಾಹನಂಗಳನೇರುವುದಕ್ಕೆ ಮುನ್ನವೆ
ಜಂಗಮಕ್ಕೆ ವಾಹನವನೇರಿಸುವೆ
ನಾನು ಮನೆಯೊಳಗಿರುವುದಕ್ಕೆ ಮುನ್ನವೆ
ಜಂಗಮಕ್ಕೆ ಗೃಹವ ಕೊಡುವೆ
ಇಂತೀ ಹದಿನಾರು ತೆರನ ಭಕ್ತಿಯನು ಚರಲಿಂಗಕ್ಕೆ ಕೊಟ್ಟು
ಆ ಚರಲಿಂಗಮೂರ್ತಿ ಭೋಗಿಸಿದ ಬಳಿಕ
ನಾನು ಪ್ರಸಾದ ಮುಂತಾಗಿ ಭೋಗಿಸುವೆನಲ್ಲದೆ
ಜಂಗಮವಿಲ್ಲದೆ ಇನಿತರೊಳಗೊಂದು ಭೋಗವನಾದರೂ
ನಾನು ಭೋಗಿಸಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಇಂತೀ ಕ್ರಮದಲ್ಲಿ ನಡೆದಾತಂಗೆ
ಗುರುವುಂಟು ಲಿಂಗವುಂಟು ಜಂಗಮವುಂಟು
ಪಾದೋದಕವುಂಟು ಪ್ರಸಾದವುಂಟು ಆಚಾರವುಂಟು ಭಕ್ತಿಯುಂಟು
ಈ ಕ್ರಮದಲ್ಲಿ ನಡೆಯದಾತಂಗೆ
ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ
ಪಾದೋದಕವಿಲ್ಲ ಪ್ರಸಾದವಿಲ್ಲ ಆಚಾರವಿಲ್ಲ ಸದ್ಭಕ್ತಿಯಿಲ್ಲ
ಅವನ ಬಾಳುವೆ ಹಂದಿಯ ಬಾಳುವೆ

ಅವನ ಬಾಳುವೆ ನಾಯ ಬಾಳುವೆ
ಅವನ ಬಾಳುವೆ ಕತ್ತೆಯ ಬಾಳುವೆ
ಅವನು ಸುರೆಮಾಂಸ ಭುಂಜಕನು
ಅವನು ಸರ್ವಚಾಂಡಾಲನಯ್ಯಾ ಚೆನ್ನಮಲ್ಲಿಕಾರ್ಜುನಾ

೩

ವ್ರತನಿಯಮ ಶೀಲಂಗಳಂ ಮಾಡಿಕೊಂಡು
ಸಮಯಾಚಾರದಲ್ಲಿ ನಡೆವೆನೆಂಬ ಭಕ್ತನ ಕ್ರಮವೆಂತೆಂದಡೆ
ತಾನು ಭೋಗಿಸುವ ಸಕಲ ದ್ರವ್ಯಂಗಳೆಲ್ಲವನು
ಜಂಗಮಕ್ಕೆ ಕೊಟ್ಟು ತಾನು ಕೊಳಬೇಕು
ಅವಾವವೆಂದಡೆ ಮಜ್ಜನ ಭೋಜನ ಅಂದಳ ಸತ್ತಿಗೆ
ಚಾಮರ ಆನೆ ಕುದುರೆ ಕನ್ನಡಿ ಪರಿಮಳಲೇಪನ
ಗಂಧ ಅಕ್ಷತೆ ವಸ್ತ್ರ ಕಪ್ಪಡ ಮೆಟ್ಟು ತಾಂಬೂಲ
ರತ್ನಾಭರಣ ಮಂಚ ಸುಪ್ಪತ್ತಿಗೆ ಸ್ತ್ರೀಸಂಸರ್ಗ
ಒಡೆಯರಿಗೆ ಆಯಿತೆಂಬುದ ಕೇಳಿ
ಆ ಒಡೆಯರ ವಾಕ್ಯ ಪ್ರಸಾದದಿಂದ ಮಹಾಪ್ರಸಾದವೆಂದು
ತನ್ನ ಸ್ವಸ್ತ್ರೀಗೆ ಕೂಟಸ್ಥನಾಗಬೇಕು

ಅದೆಂತೆಂದಡೆ ಶಿವರಹಸ್ಯದಲ್ಲಿ—

> ತೈಲಾಭ್ಯಂಗಂ ತನೂದ್ವರ್ತಂ ಸ್ನಾನ ಶೋಭನಮೈಥುನಮ್ ।
> ಜಂಗಮೇಷ್ಟಂ ವಿನಾ ಭುಂಜೇ ಪ್ರಸಾದೋ ನಿಷ್ಫಲೋ ಭವೇತ್ ॥

ಎಂದುದಾಗಿ ಇಂತೆಂಬ ಶಿವನ ವಾಕ್ಯವನರಿತು
ಎಲ್ಲ ವ್ರತಂಗಳಿಗೆಯೂ ಜಂಗಮ ಪ್ರಸಾದವೇ ಪ್ರಾಣ
ಎಲ್ಲ ನಿಯಮಂಗಳಿಗೆಯೂ ಜಂಗಮ ದರ್ಶನವೇ ನಿಯಮ
ಎಲ್ಲ ಶೀಲಂಗಳಿಗೆಯೂ ಜಂಗಮದ ಮಾಟವೇ ಶೀಲ
ಈ ವ್ರತ ನಿಯಮ ಶೀಲಂಗಳೆಲ್ಲವೂ ಜಂಗಮದ ಮುಂದಿಟ್ಟು
ಶುದ್ಧಿಯಹ ಕಾರಣ

ಆ ಜಂಗಮದಲ್ಲಿ ಅರ್ಥ ಪ್ರಾಣ ಅಭಿಮಾನ ಮುಂತಾದ
ಈ ಮೂರಕ್ಕೆ ಕಟ್ಟು ಮಾಡಿದೆನಾದಡೆ ಎನಗದೇ ದ್ರೋಹ

ಅದೆಂತೆಂದಡೆ ಶಿವರಹಸ್ಯದಲ್ಲಿ—

ಸರ್ವಾಚಾರವಿಶೇಷೇಣ ಸರ್ವವ್ರತವಿಶೇಷತಃ ।
ಸರ್ವಶೀಲವಿಶೇಷೇಣ ಶಿವದಾಸೋಽಹಮುತ್ತಮಮ್ ॥

ಎಂದುದಾಗಿ ಇಂತೆಂಬ ವಾಕ್ಯವನರಿತು
ಆ ಜಂಗಮದ ದರ್ಶನದಿಂದವೇ ಸಕಲ ದ್ರವ್ಯಂಗಳು ಪವಿತ್ರವು
ಆ ಜಂಗಮದ ಪಾದತೀರ್ಥದಿಂದವೇ ಮಹಾಘನಲಿಂಗಕ್ಕೆ ಜೀವಕಳೆ
ಆ ಜಂಗಮ ಪ್ರಸಾದದಿಂದಲೇ ಮಹಾಘನ ಲಿಂಗಕ್ಕೆ ತೃಪ್ತಿ
ಇಷ್ಟನರಿದ ಬಳಿಕ ಆ ಜಂಗಮಲಿಂಗಕ್ಕೆ ಸಂದೇಹವ ಮಾಡಿದಡೆ
ಕುಂಭಿಯ ಪಾತಕ ನಾಯಕ ನರಕ ತಪ್ಪದು
ಈ ಜಂಗಮದ ಭಕ್ತಿ ಕಿಂಚಿತ್ತು ಕೊರತೆಯಾದರೆ ಇದೇ ದ್ರೋಹ
ಇದಕ್ಕೆ ಕೊರತೆ ಇಲ್ಲದ ಹಾಗೆ ಜೀವವುಳ್ಳ ಪರ್ಯಂತರ
ಇದೇ ಆಚಾರವಾಗಿ ನಡೆದು ರಾಮೇಶ್ವರಲಿಂಗವನೊಡಗೂಡುವೆನು

## ತೀರ್ಥಪ್ರಸಾದ ಲಿಂಗಾರ್ಪಿತ ಸ್ಥಲ ೨೯

ಇಂತೀ ಪ್ರಕಾರದಿಂ ವೀರಮಾಹೇಶ್ವರರು ಸಕಲ ಭೋಗಂಗಳಂ ಜಂಗಮಕ್ಕೆ ಕೊಟ್ಟು ಪ್ರಸಾದ ಮುಖತಾಗಿ ಭೋಗಿಸಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಜಂಗಮಲಿಂಗದ ಪಾದತೀರ್ಥ ಪ್ರಸಾದಮಂ ಇಷ್ಟಲಿಂಗಕ್ಕೆ ಕೊಟ್ಟಲ್ಲದೆ ಕೊಳಲಾಗದೆಂದು ನುಡಿದ ವಚನಂಗಳು.

ವೀರಾಗಮೇ—

ಜಂಗಮಾನಾಂ ಪಾದತೀರ್ಥಂ ಲಿಂಗಮಜ್ಜನ ಮುತ್ತಮಂ ।
ತತ್ಪ್ರಸಾದಂ ಮಹಾದೇವಿ ನೈವೇದ್ಯಂ ಶುಭಮಂಗಲಮ್ ॥ ೧ ॥

ಜಂಗಮದ ಪಾದತೀರ್ಥದಿಂದ ಲಿಂಗಕ್ಕೆ ಅಭಿಷೇಕಮಂ ಮಾಡುವುದು, ಜಂಗಮ ಪ್ರಸಾದವನು ಲಿಂಗಕ್ಕೆ ನೈವೇದ್ಯಮಂ ಮಾಡುವುದು ಅತ್ಯಂತ ಶುಭವು ಕೇಳಾ ಇಂತೆಂದು ಪಾರ್ವತಿಗೆ ದೇವರು ಪೇಳ್ದರು.

ಪಾದಾಭಿಷೇಕಸಲಿಲಂ ಭುಕ್ತಶೇಷಾನ್ನಮುತ್ತಮಮ್ ।
ಅಭಿಷೇಕಂ ಚ ನೈವೇದ್ಯಂ ಪ್ರಸಾದಂ ಶಿವಲಿಂಗದಮ್ ॥ ೨ ॥

ಜಂಗಮ ಪಾದಕ್ಕೆ ಅಭಿಷೇಕವ ಮಾಡಿದ ಉದಕವನ್ನು ಆ ಜಂಗಮಲಿಂಗವಾರೋಗಣೆಯಂ ಮಾಡಿ ಮಿಕ್ಕ ಪ್ರಸಾದವನ್ನು ತೆಗೆದುಕೊಂಡು ಆ ಜಂಗಮದ ಪಾದೋದಕವನು 'ಲಿಂಗಕ್ಕೆ ಮಜ್ಜನವ ಮಾಡುವುದು ಆ ಜಂಗಮದ ಪ್ರಸಾದವನೇ ಲಿಂಗಕ್ಕೆ ನಿವೇದಿಸುವುದು.

ಜಂಗಮಸ್ಯ ಪ್ರಸಾದಾನ್ನಂ ನೈವೇದ್ಯಂ ಚ ಸಮರ್ಪಣಮ್ ।
ಪ್ರಸಾದೇನ ತು ಶ್ರದ್ಧಾತ್ಮಾ ಪ್ರಸಾದಿಸ್ಥಲಮುಚ್ಯತೇ ॥ ೩ ॥

ಜಂಗಮದ ಪ್ರಸಾದಾನ್ನವನು ಲಿಂಗಕ್ಕೆ ನೈವೇದ್ಯವಾಗಿ ಸಮರ್ಪಿ

ಸುವುದು. ಆ ಲಿಂಗದ ಪ್ರಸಾದದಿಂದ ನಾನು ಶುದ್ಧಾತ್ಮನಹೆನು. ಇದೀಗಲೇ ಪ್ರಸಾದಿ ಸ್ಥಲವೆಂದು ಹೇಳಲ್ಪಡುವುದು.

ತಸ್ಮಾಜ್ಜಂಗಮಲಿಂಗಸ್ಯ ಪ್ರಸಾದಂತು ಸಮರ್ಪಣಮ್ ।
ಅಭಿಷೇಕ ಜಲಂ ಸ್ನಾನಂ ವಿಶೇಷಂ ಮಮಕಥ್ಯತೇ ॥ ೪ ॥

ಅದುಕಾರಣ ಜಂಗಮಲಿಂಗ ಪ್ರಸಾದವನು ನನಗೆ ಅರ್ಪಿಸುವುದು. ಜಂಗಮಲಿಂಗದ ಪಾದೋದಕವನೆನಗೆ ಅಭೀಷೇಕವ ಮಾಡುವುದು.

ಪಾದತೀರ್ಥಂ ಪ್ರಸಾದಂ ಚ ನಿತ್ಯಲಿಂಗಾರ್ಚನಂ ಭವೇತ್ ।
ಸದಾಸೇವಿತಭಕ್ತಶ್ಚ ಮಮ ರೂಪಃ ಸ ಪಾರ್ವತಿ ॥ ೫ ॥

ಎಲೈ ಪಾರ್ವತಿ ಜಂಗಮದ ಪಾದತೀರ್ಥ ಪ್ರಸಾದದಿಂದ ಲಿಂಗಾರ್ಚನೆಯಂ ಮಾಡುವುದು. ಆವಾಗಲೂ ತೀರ್ಥಪ್ರಸಾದವಕೊಂಬ ಸದ್ಭಕ್ತನೀಗಲೇ ನಾನೆಂದು ಶಿವನ ವಾಕ್ಯವು.

## ವಚನಗಳು

೧

ಜಂಗಮ ಲಿಂಗವೇ ತನ್ನ ಪ್ರಾಣಲಿಂಗವೆಂದರಿದ ಸದ್ಭಕ್ತಂಗೆ
ಜಂಗಮದ ಪ್ರಸಾದವಿಲ್ಲದೇ ಲಿಂಗ ಪ್ರಸಾದವ ಕೊಳಲಾಗದು
ಜಂಗಮದ ಪ್ರಸಾದವು ಲಿಂಗಕ್ಕೆ ಸಲ್ಲದೆಂದು ಶಂಕೆಯಮಾಡಲಾಗದು

ಅದೆಂತೆಂದಡೆ ವೀರಾಗಮದಲ್ಲಿ—

ಜಂಗಮಾದಿಗುರೂಣಾಂ ಚ ಅಸಾದಿ ಸ್ವಯಲಿಂಗವತ್ ।
ಅದಿ ಪ್ರಸಾದೇ ವಿರೋಧೇ ಇಷ್ಟೋಚ್ಛಿಷ್ಟಂ ತು ಕಿಲ್ಬಿಷಮ್ ॥

ಎಂದುದಾಗಿ ಪ್ರಾಣಭಾವದಲ್ಲಿ ಸಂಬಂಧವಾಗಿ ಇಷ್ಟಕ್ಕೂ ಸಂದಿತ್ತು
ಈ ಭೇದವನರಿದು ಜಂಗಮ ಪ್ರಸಾದವಿಲ್ಲದೆ ಲಿಂಗಪ್ರಸಾದವ
ಕೊಳಲಾಗದು

ವೀರಮಾಹೇಶ್ವರರು ಕೂಡಲ ಚೆನ್ನಸಂಗಮದೇವಾ

೨

ಆದಿಯುಲಿಂಗ ಅನಾದಿಯು ಶರಣನೆಂದು
ತನ್ನಿಂದ ತಾನಾಯಿತ್ತು ಕೇಳಿರಣ್ಣಾ
ಆದಿಯು ಕಾಯ ಅನಾದಿಯು ಪ್ರಾಣವೆಂಬ
ಈ ಉಭಯದ ಭೇದವ ತಿಳಿದು ವಿಚಾರಿಸಿ ನೋಡಿರಣ್ಣಾ
ಅಂತು ಅನಾದಿಯ ಪ್ರಸಾದ ಆದಿಗೆ ಸಲುವುದು
ಅದೆಂತೆಂದಡೆ ಶಿವರಹಸ್ಯದಲ್ಲಿ—

ಅನಾದಿ ಜಂಗಮಶ್ಚೈವ ಆದಿಲಿಂಗಸ್ಥಅಂ ಭವೇತ್
ಅನಾದೇಶ್ಚ ವಿರೋಧೇನ ಇಷ್ಟೋಚ್ಛಿಷ್ಟಂ ತು ಕಿಲ್ಬಿಷವತ್ ॥

ಎಂದುದಾಗಿ ಇದನರಿತು ಪ್ರಾಣ ಪ್ರಸಾದ ವಿರೋಧವಾಗಿ
ಪಿಂಡ ಪ್ರಸಾದವ ಕೊಂಡೊಡೆ ಕಿಲ್ಬಿಷ ನೋಡಾ ಕೂಡಲ
ಚೆನ್ನಸಂಗಮದೇವಾ

೩

ಲಿಂಗ ಪ್ರಸಾದ ಜಂಗಮಕ್ಕೆ ಕೊಡುವ ಕರ್ಮಿಗಳು ನೀವು ಕೇಳಿರೇ
ಜಂಗಮ ಪ್ರಸಾದವ ಲಿಂಗಕ್ಕೆ ಕೊಡುವ ಸದ್ಧರ್ಮಿಗಳು ಕೇಳಿರೇ
ಲಿಂಗ ಪ್ರಸಾದವ ಜಂಗಮಕ್ಕೆ ಕೊಡುವ ಕರ್ಮಿಗಳದು ಅನಾಚಾರ
ಜಂಗಮದ ಪ್ರಸಾದವ ಲಿಂಗಕ್ಕೆ ಕೊಡುವುದು ಸದಾಚಾರ

ಅದೆಂತೆಂದಡೆ ಶಿವಧರ್ಮೇ—

ಲಿಂಗಾರ್ಪಿತಪ್ರಸಾದಂ ಚ ಪ್ರದದ್ಯಾಜ್ಜಂಗ ಮಾರ್ಪಿತೇ
ಜಂಗಮಾರ್ಪಿತ ಶೇಷಂ ತು ಪದದ್ಯಾಲ್ಲಿಂಗ ಮೂರ್ತಿಷು ॥

ಎಂದುದಾಗಿ ಇದು ಕಾರಣ ಜಂಗಮದ ಪ್ರಸಾದ
ಲಿಂಗಕ್ಕೆ ಕೊಟ್ಟು ಕೊಂಡೆನಾಗಿ ಎನ್ನಭವವು ನಾಸ್ತಿಯಾಯಿತ್ತಯ್ಯಾ
ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ

೪

ಶ್ರೀಗುರು ಲಿಂಗವು ತನ್ನ ಪ್ರಸಾದ ಲಿಂಗವ ತಂದು

ಎನ್ನಂಗದ ಮೇಲೆ ಬಿಜಯಂಗೈಸಿದನಯ್ಯಾ
ಬಿಜಯಂಗೈಸಲೊಡನೆ ನಾನು ಆ ಲಿಂಗಕ್ಕೆ ಅಷ್ಟವಿಧಾರ್ಚನೆ
ಷೋಡಶೋಪಚಾರಂಗಳಂ ಮಾಡಿ ಚತುರ್ವಿಧ
ಫಲಪದ ಪುರುಷಾರ್ಥಂಗಳಂ ಪಡೆದೆನು
ಆ ಚತುರ್ವಿಧ ಫಲಪದ ಪುರುಷಾರ್ಥಂಗಳು
ಭವಕ್ಕೆ ಬೀಜವೆಂದರಿದು ಹಿಂದಣ ಪರಿಭವಂಗಳಲ್ಲಿ ತಿರುಗಲಾರದೆ
ನಾನು ನಿಃಕಲಂಕವೆಂಬ ಹೊಲನ ಹೊಕ್ಕು ಒಂದು ನಿಧಾನವ
ಕಂಡೆನು
ಅಯ್ಯಾ ಆ ನಿಧಾನವ ಹೆಸರೇನೆಂದಡೆ
ತ್ರೈಲಿಂಗಧಾರಿ ಮೂಲಾಂಕುರವೊಂದಾದ ಚರಲಿಂಗವೆಂದರಿದು
ಆ ಚರಲಿಂಗದ ಪಾದೋದಕವುಂ ತಂದು
ನನ್ನ ಇಷ್ಟಲಿಂಗದ ಚತುರ್ವಿಧ ಫಲಪದ ಪುರುಷಾರ್ಥವೆಂಬ
ಭವಕ್ಕೆ ಬೀಜವೆಂಬವಂ ತೊಳೆದೆನಯ್ಯಾ ಅದೆಂತೆಂದಡೆ

> ಸಾಲೋಕ್ಯಮಪಿ ಸಾಮೀಪ್ಯಂ ಸಾರೂಪ್ಯಂ ಚ ಸಾಯುಜ್ಯಕಾವ್ ।
> ಸಕೃತ್ಕಾಂಕ್ಷಿತ ಭಕ್ತಶ್ಚ ರೌರವಂ ನರಕಂ ವ್ರಜೇತ್ ॥

ಎಂದುದಾಗಿ ಆ ಚರಲಿಂಗ ಪ್ರಸಾದವ ತಂದೆನ್ನ
ಇಷ್ಟಲಿಂಗದ ಜೀವಕಳೆಯಂ ಮಾಡಿ ಅರ್ಪಿಸಿದೆನಯ್ಯಾ

> " ಸ್ವಯಂ ಪ್ರಕಾಶರೂಪೋsಯಂ ಸಹಜಂ ಗಮಯಿಷ್ಯತೇ " ।

ಮತ್ತೆಯೂ—

> ಜಂಗಮಾನಾಂ ಪಾದತೀರ್ಥಂ ಲಿಂಗಮಜ್ಜನಮುತ್ತಮವ್ ।
> ತತ್ಪ್ರಸಾದಂ ಮಹಾದೇವಿ ನೈವೇದ್ಯಂ ಶುಭಮಂಗಲವ್ ॥

ಎಂದುದಾಗಿ ಆ ಚರಲಿಂಗವೇ ಅಂಗ ಆ ಚರಲಿಂಗವೇ ಲಿಂಗ
ಆ ಚರಲಿಂಗವೇ ಪ್ರಾಣವೆನಗೆ
ಇದು ಚತುರ್ವಿಧ ಫಲ ಪದ ಪುರುಷಾರ್ಥಂಗಳಂ ಮೀರಿದ ಘನವು
ಇಂತು ಜಂಗಮಲಿಂಗದಲೆನ್ನ ಭವಪಾಶ ಹರಿಯಿತ್ತಯ್ಯಾ
ಕೂಡಲ ಚೆನ್ನಸಂಗಮದೇವಾ

೫

ಬಸವೇಶ್ವರ ದೇವರು ತೃಣಪುರುಷನಂ ಮಾಡಿ
ಮೀಮಾಂಸಕಂಗೆ ಉತ್ತರವಂ ಕೊಡು ಹೋಗೆನಲು
ಆ ತೃಣಪುರುಷನು ಮಹಾಪ್ರಸಾದವೆಂದು ಕೈಕೊಂಡು
ಮೀಮಾಂಸಕಂಗೆ ಉತ್ತರವಂ ಕೊಟ್ಟು
ಶಿವ ವಿರಹಿತವಾದ ಶಾಸ್ತ್ರಪುರಾಣಂಗಳೆಲ್ಲವಂ ಬಯಲು ಮಾಡಿ ನುಡಿಯಲು
ಆತಂಗೆ ಶಿವಜ್ಞಾನ ತಲೆದೋರಿ ಆ ಬಸವೇಶ್ವರದೇವರಿಗೆ
ವಂದನಂ ಗೈದು ಉಪದೇಶವಂ ಮಾಡಬೇಕೆನ್ನಲು
ಆತಂಗೆ ವೀರಶೈವ ದೀಕ್ಷೆಯಂ ಮಾಡಿ
ಷಟ್ಸ್ಥಲಮಾರ್ಗ ಕ್ರಿಯೆಯಂ ನಿರೂಪಿಸಿ ತಿಳುಹಲು
ಎಲೈ ಬಸವೇಶ್ವರಾ ಜಂಗಮದ ಪಾದತೀರ್ಥ ಪ್ರಸಾದವ
ಲಿಂಗಕ್ಕೆ ಕೊಟ್ಟು ಕೊಳಬಹುದೇ ಎಂದು ಕೇಳಲು
ಕೇಳೈ ಮೀಮಾಂಸಕ ಪೂರ್ವದಲ್ಲಿ ಪರಮೇಶ್ವರನು
ಕೈಲಾಸದ ಸಮಸ್ತದೇವಗಣಂಗಳೊಡ್ಡೋಲಗದಲ್ಲಿರಲು
ಸೂತ್ರಿಕನೆಂಬ ಶೈವಾಚಾರ್ಯನು ಎಲೈ ಪರಮೇಶ್ವರನೆ
ಜಂಗಮದ ಪಾದತೀರ್ಥಪ್ರಸಾದವ ಲಿಂಗಕ್ಕೆ ಕೊಡಬಹುದೇ ಎನ್ನಲು
ಎಲೈ ಸೂತ್ರಿಕನೇ ಕೇಳು ನಾನೆಂದಡೂ ಜಂಗಮವೆಂದಡೂ ಬೇರೆಯಿಲ್ಲ
ಅದುಕಾರಣ ಜಂಗಮಲಿಂಗವೇ ಅಧಿಕ
ಆ ಜಂಗಮಲಿಂಗದ ಪಾದತೀರ್ಥಪ್ರಸಾದವ
ಲಿಂಗಕ್ಕೆ ಕೊಡಬಾರದೆಂದು ನಿಂದಿಸಿ ನುಡಿದ ವಾಗ್ದೋಷಕ್ಕೆ
ಮರ್ತ್ಯಕ್ಕೆ ಹೋಗಿ ಸೂಕರನ ಬಸುರಲ್ಲಿ ಹುಟ್ಟಿ
ಹದಿನೆಂಟು ಜಾತಿಯ ಅಶುದ್ಧವನು ನಾಲಿಗೆಯಲ್ಲಿ ಭುಂಜಿಸಿ
ನರಕ ಜೀವಿಯಾಗಿರೆಂದುದೇ ಸಾಕ್ಷಿ

ಪ್ರಸಾದನಿಂದಕಃ ಸೂತ್ರೀ ಮರ್ತ್ಯಲೋಕಂ ಗಮಿಷ್ಯತಿ ।
ಜನ್ಮನಾ ಸೂಕರೋ ಭೂತ್ವಾ ಜಾಯತೇ ಹಿ ನ ಸಂಶಯಮ್ ।
ವಿಶಾಪಂ ಕುರು ಮೇ ಸ್ವಾಮಿನ್ಮದ್ರೂಂಪಚ ಮಮಪ್ರಭೋ ।

> ಭಕ್ತಸ್ವಾತ್ಮ ಸ್ವರೂಪಾಯ ನಮಸ್ತೇ ಭಕ್ತದೇಹಿನೇ ॥
> ಅನ್ಯೋನ್ಯ ಸುವಿಚಾರಸ್ತು ಚರೋಚ್ಛಿಷ್ಟಾನ್ನ ಸೇವನಾತ್ ।
> ಕ್ಷಯಂತಿ ಕ್ರೋಡ ಜನ್ಮಾದಿ ತಥ್ಯಂ ತೇ ಶೈವ ಸೂತ್ರಿಕ ॥

ಎಂದುದಾಗಿ ಇದನರಿತು ಮತ್ತೆ ಜಂಗಮದ ಪಾದತೀರ್ಥವ
ಲಿಂಗಕ್ಕೆ ಕೊಟ್ಟುಕೊಳಬಾರದೆಂಬ ಪಂಚಮಹಾಪಾತಕರ ಮಾತ
ಕೇಳಲಾಗದು
ಅದೆಂತೆಂದಡೆ ವೀರಾಗಮದಲ್ಲಿ—

> ಜಂಗಮಾನಾಮಹಂ ಪ್ರಾಣೋ ಮಮ ಪ್ರಾಣಸ್ತು ಜಂಗಮಃ ।
> ಜಂಗಮಾನಾಮಹಂ ಪೂಜ್ಯೋ ಮಮ ಪೂಜೋಹಿ ಜಂಗಮಃ ॥
> ಪರಸ್ಪರಮ ಭೇದತ್ವಾಜ್ಜಂಗಮಸ್ಯ ಮಮಾಪಿಚ ।
> ಪಾದೋದಕ ಪ್ರಸಾದೇನ ವಿನಾತೃಪ್ತಿರ್ನ ಜಾಯತೇ ॥

ಎಂದುದಾಗಿ ಇಂತೆಂಬ ಶಿವನ ವಾಕ್ಯವನರಿತು-
ಜಂಗಮದ ಪಾದತೀರ್ಥವ ಲಿಂಗಕ್ಕೆ ಮಜ್ಜನಕ್ಕೆರೆವುದು
ಪ್ರಸಾದವ ಲಿಂಗಕ್ಕೆ ನೈವೇದ್ಯವ ಸಮರ್ಪಿಸಿ
ಭೋಗಿಸುವಾತನೇ ಸದ್ಭಕ್ತ ಆತನೇ ಮಾಹೇಶ್ವರ
ಆತನೇ ಪ್ರಸಾದಿ ಆತನೇ ಪ್ರಾಣಲಿಂಗಿ ಆತನೇ ಶರಣ ಆತನೇ ಐಕ್ಯ
ಇಂತಪ್ಪ ಷಟ್ಸ್ಥಲ ಬ್ರಹ್ಮಿಗೆ ನಮೋ ನಮಃ ಎಂಬೆ
ಇಂತಲ್ಲದೆ ಜಂಗಮದ ಪಾದತೀರ್ಥ ಪ್ರಸಾದ ವಿರಹಿತವಾಗಿ
ಆವನೊಬ್ಬನು ತನ್ನ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ
ಷೋಡಶೋಪಚಾರ ಕ್ರಿಯೆಯಿಂದ ಪೂಜೆಯ ಮಾಡುವಲ್ಲಿ
ಜಂಗಮದ ತೀರ್ಥಪ್ರಸಾದವಿಲ್ಲದಿರ್ದರೆ ಅವನು ಶುದ್ಧ ಶೈವನು
ಆತನು ವೀರಶೈವ ಭಕ್ತನಲ್ಲ ಅವನಿಗೆ ಮುಕ್ತಿಯಿಲ್ಲ ಕಾಣಾ
ಕೂಡಲ ಚೆನ್ನಸಂಗಮದೇವಾ

## ತಾಮಸ ಶೀಲ ನಿರಸನ ಸ್ಥಲ ೩೦

ಇಂತೀ ಪ್ರಕಾರದಿಂ ವೀರಮಾಹೇಶ್ವರರು ಜಂಗಮದ ಪಾದತೀರ್ಥ ಪ್ರಸಾದಮಂ ಲಿಂಗಕ್ಕೆ ಕೊಟ್ಟು ಕೊಳಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಜಂಗಮಕ್ಕೆ ಸಕಲ ಪದಾರ್ಥಂಗಳಂ ಸಮರ್ಪಿಸಿ ಪ್ರಸಾದಮಂ ಕೋಂಬುದು. ಇಂತಲ್ಲದೆ ಜಂಗಮ ಪ್ರಸಾದ ವಿರಹಿತವಾಗಿ ಕೊಂಡನಾದರೆ ಆ ಭಕ್ತಂಗೆ ಪ್ರಸಾದವಿಲ್ಲವೆಂದು ನುಡಿದ ವಚನಂಗಳು.

ವೀರಾಗಮೇ—

ವ್ರತಂ ಶಿವೈಕ್ಯವಿಷಯಂ ನಿಯಮಶ್ಚ ಸನಾತನಃ ।
ಶೀಲ ಮಿತ್ಯುಚ್ಯತೇ ಸದ್ಭಿರ್ಯೇನ ಶೀಲಂ ಭವೇತ್ಪುಮಾನ್ ॥೧॥

ಶಿವನು ಒಬ್ಬನೇ ಆಶ್ರಯವಾಗಿ ಉಳ್ಳ ವ್ರತವು ನಿತ್ಯವಾದ ನಿಯಮವು ಶೀಲವೆಂದು ಸಜ್ಜನರಿಂದ ಹೇಳಲ್ಪಡುತ್ತಿಹುದು. ವೀರಶೈವ ಶಾಸ್ತ್ರಂಗಳಲ್ಲಿ ಹೇಳಿದ ವ್ರತನಿಯಮಂಗಳು ಶೀಲವೆನಿಸಿಕೊಂಬವು. ಶೀಲವನ್ನು ನಡೆಸದವನು ಪುರುಷನೇ ಅಲ್ಲ.

ಸ್ಕಾಂದೇ—

ಶೀಲಂ ಸಂಪಾದಯೇತ್ಪ್ರಾಜ್ಞೋ ವಿವಿಧಂ ಶಾಸ್ತ್ರಸೇವಿತಮ್ ।
ನ ಹ್ಯಶೀಲಃ ಶಿವಂ ಯಾತಿ ವಿಧಿಹೀನಂ ಫಲಂ ಯಥಾ ॥೨॥

ಬುದ್ಧಿವಂತನು ಹಲವು ಪ್ರಕಾರವಾಗಿ ಶಾಸ್ತ್ರಗಳಿಂ ಸೇವಿಸಲ್ಪಟ್ಟ ಸಚ್ಚರಿತ್ರವನು ಗಳಿಸುವುದು. ಯಾಕೆಂದರೆ ಆವುದಾನೊಂದು ಕಾರಣವಾಗಿ ವಿಧಿಯಿಲ್ಲದವನನು ಫಲವು ಹೇಗೆ ಹೊಂದದೋ ಹಾಗೇ ಶೀಲವಿಲ್ಲದ ಪುರುಷನು ಶಿವನನ್ನೈದಲಾರನು.

ಶಿವರಹಸ್ಯೇ—

ಸರ್ವವ್ರತಾನಾಮಧಿಕಂ ಪ್ರಾಣಲಿಂಗವ್ರತಂ ಮಹತ್ ।
ತದ್ವ್ರತಂ ಮಮದೇಹಸ್ತು ಮನ್ಮುಖಂ ಜಂಗಮೋ ಭವೇತ್ ॥೩॥

ಸಮಸ್ತ ವ್ರತಗಳೊಳಗೆ ಪ್ರಾಣಲಿಂಗ ವ್ರತವೇ ಮಹತ್ತಾದ ವ್ರತವು, ಆ ಮಹತ್ತಾದ ಪ್ರಾಣಲಿಂಗವ್ರತವೇ ನನ್ನ ಶರೀರವು. ಆ ಶರೀರಕ್ಕೆ ಜಂಗಮಲಿಂಗ ಮುಖವೇ ನನ್ನ ಮುಖವು. ಈ ಮುಖಕ್ಕೆ ಸಕಲ ಭೋಗಂಗಳಂ ಸಮರ್ಪಿಸಿಕೊಂಬ ಸದ್ಭಕ್ತನೀಗಲೇ ಶೀಲವಂತನೆಂದು ಪರಮೇಶ್ವರನು ದೇವಿಯರಿಗೆ ನಿರೂಪಿಸಿದನು.

## ವಚನಗಳು

೧

ವ್ರತನೇಮ ಕರ್ತವ್ಯವ ನಿತ್ಯವು ಮಾಡುವ ಸದ್ಭಕ್ತರು ನೀವು ಕೇಳಿರೋ
ಲಿಂಗಕ್ಕಿಂತಲೂ ಜಂಗಮವೇ ವಿಶೇಷವೆಂದು
ಆ ಜಂಗಮದ ಪಾದೋದಕದಿಂದ ತನ್ನ ಲಿಂಗಕ್ಕೆ ಮಜ್ಜನಕ್ಕೆರೆದು
ಪ್ರಸಾದವಂ ಲಿಂಗಕ್ಕೆ ಸಮರ್ಪಣವಂ ಮಾಡಿ
ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ
ಲಿಂಗವಪ್ರಾಣ ಜಂಗಮವೆಂದು ಮಾಡಿ
ಮತ್ತಾ ಜಂಗಮವು ಮನೆಗೆ ಬರಲು ಸಂದೇಹವ ಮಾಡಲೇಕೆ

ಅದೆಂತೆಂದಡೆ—

ಪ್ರಸಾದಂ ಶಿವಲಿಂಗೇತು ಯಃ ಸಂದೇಹಂ ಸಮರ್ಪಯೇತ್ ।
ಜಾರತ್ವೇನೋದ್ಭವಂ ತಸ್ಯ ವಿದುಃ ಪ್ರಾಜ್ಞಾನರೋತ್ತಮಾಃ ॥

ಎಂದುದಾಗಿ ತನ್ನ ಪ್ರಾಣಲಿಂಗವೆಂದರಿದು
ಲಿಂಗವ ಪ್ರಾಣ ಜಂಗಮವೆಂದರಿದು ಉಭಯಪ್ರಾಣ ತತ್ಪ್ರಾಣವೆಂದು ಭಕ್ತಿಗೆ ಅವಿಶ್ವಾಸವಾಗಲೇಕೆ
ಆ ಜಂಗಮವು ಹೊಣ ಬೇಡಿದಡೆ ಸಂಸಾರಿಯೆಂದೂ

ಹೊನ್ನ ಬೇಡಿದಡೆ ಆತಕನೆಂದೂ ಮಣ್ಣ ಬೇಡಿದಡೆ ಬದ್ಧನೆಂದೂ
ಇಷ್ಟಕ್ಕೆ ನೊಂದು ಮತ್ತೆ ಭಕ್ತಿಯವಾಸೆಗೆ ಹೊರಲೇಕೆ-
ಎಷ್ಟುಕಾಲ ಮಾಡಿದ ದ್ರವ್ಯವು ಸವೆದಡೆ ಭಕ್ತಿಗೆ ಸಲ್ಲ ಮುಕ್ತಿಗೆ ಸಲ್ಲ
ವಿಶ್ವಾಸ ಹೀನಂಗೆ ಸತ್ಯ ಭಕ್ತಿ ಹುಸಿಯಂಬೆ-
ನಿಃಕಲಂಕ ಮಲ್ಲಿಕಾರ್ಜುನಾ

೨

ಒಡೆಯರ ಕಟ್ಟಳೆಯಿಲ್ಲದ ಶೀಲವಂತ ಭಕ್ತನ ಪರಿಯಾಯವ
ಕೇಳಿರಣ್ಣಾ
ಆತನ ಅಗ್ಗಣಿಯ ಕೊಂಬನ್ನಕ್ಕರ ಒಡೆಯರು ದೇವರು
ಉಂಡ ಬಳಿಕ ಗಡಿತದಿಯ ಕಾಯ್ದು ಮಲಗೆಂದು ಕಳುಹಿ
ಬೆಳಗಾಗಿ ಮತ್ತೊಡೆಯರ ಕರೆಯೆಂದು
ಒಡೆಯರು ಮರದಿಂ ಬಂದಲ್ಲಿ ಮಡದಿಯರ ಮನೆಯೊಳಗಡಗಿಸಿ
ತನ್ನ ಬಿಡುಗಡೆಯ ಸ್ತ್ರೀಯರ ಕೈಯಿಂದ ಒಡೆಯರ ಪಾದವಂ
ತೊಳೆಯಿಸಿ
ಆ ತೊಳೆನೀರ ತರಿಸಿ ತನ್ನ ಲಿಂಗಕ್ಕೆ ಮಜ್ಜನಕ್ಕೆರೆದು
ತೀರ್ಥವೆಂದು ಕೊಂಬ ಕುಡುಹಿಯ ನೋಡಾ
ಅದೆಂತೆಂದಡೆ ವೀರಾಗಮದಲ್ಲಿ—

> ಗುರುಜಂಗಮ ಪಾದಾರ್ಚೀ ದಾಸೀ ಹಸ್ತೇನ ಧೌತಯೇತ್ ।
> ಯುಗಕೋಟಿ ಸಹಸ್ರಾಣಿ ನರೋ ಭವತಿ ಕಿಲ್ಬಿಷೀ ॥

ಇಂತೆಂಬ ಶಿವನ ವಾಕ್ಯವನರಿಯದೆ
ಹೊನ್ನು ಹೆಣ್ಣು ಮಣ್ಣಿಂಗೆ ಜಂಗಮನ ವಿಶ್ವಾಸವ ಮಾಡಿ
ಅವರುಂಡು ಮಿಕ್ಕುದ ತನ್ನ ಲಿಂಗಕ್ಕೆ ತೋರಿ
ಪ್ರಸಾದವೆಂದು ತಿಂಬ ಕುನ್ನಿಯ ನೋಡಾ
ಇಂತೀ ತಮ್ಮ ವ್ರತಂಗಳ ತಾವರಿಯದೆ
ಸುರೆಯ ಕುಡಿದವರಂತೆ ಮರುಳು ಗ್ರಹ ಹೊಡೆದವನಂತೆ
ಇಂತೀ ತ್ರಿವಿಧ ವಂಚನ ಭಕ್ತಿ ಅಸಗನೀರಡಿಸಿ ಸತ್ತಂತಾಯಿತ್ತು
ಅವಗುಣಿಯ ಕಟ್ಟಳೆಯ ಭಕ್ತಿಯನೇಸುಕಾಲ ಮಾಡಿದರೇನು

ರಾಮೇಶ್ವರಲಿಂಗವ ಮುಟ್ಟದೆ ಇತ್ತಲೇ ಉಳಿದು ಹೋಯಿತ್ತು
ವ್ಯರ್ಥವಾಗಿ

೩

ಶಿವಶಿವಾ ಕನಸಿನಲ್ಲಿ ಜಂಗಮವ ಕಂಡು-
ಮನಸಿನಲ್ಲಿ ಗುಡಿಯ ಕಟ್ಟುವರಯ್ಯಾ
ನೆಟ್ಟನೆ ಮನೆಗೆ ಜಂಗಮ ಬಂದರೆ ಕೆಟ್ಟೆವಿನ್ನೇನ ಬೇಡುವರೋ
ಎಂದೆಂಬ ಕಷ್ಟಜೀವಿಯ ಭಕ್ತಿಯಂತಾಯಿತ್ತಯ್ಯಾ ವ್ರತಸ್ಥನ ಭಕ್ತಿ ‖
ಕಾಗೆಯ ತಮ್ಮ ದೇವರೆಂದು ಕರೆದು ಮನೆಯಮೇಲೆ ಕೂಳಹಾಕಿ-
ಕೈ ಮುಗಿದು ಬೇಡಿಕೊಂಬರಯ್ಯಾ
ಆ ಕಾಗೆ ಬಂದು ಮನೆಯ ಹೊಕ್ಕರೆ ಒಕ್ಕಲೆತ್ತಿಹೋಹ-
ಮರ್ಕಟನ ಭಕ್ತಿಯಂತಾಯಿತ್ತಯ್ಯಾ ನಿಯಮಸ್ಥನ ಭಕ್ತಿ ‖
ಹಾವು ತಮ್ಮದೇವರೆಂದು ಹಾಲನೆರೆದು ಪೂಜಿಸಿ ಕೈ ಮುಗಿದು
ಬೇಡಿಕೊಂಬರಯ್ಯಾ
ಆ ಹಾವ ಕಂಡು ಹೆದರಿ ಓಡುವ ಭಾವಭ್ರಮಿತನ-
ಭಕ್ತಿಯಂತಾಯಿತ್ತಯ್ಯಾ ಶೀಲವಂತನ ಭಕ್ತಿ ‖
ಹೊಸ್ತಿಲು ದೇವರೆಂದು ಪೂಜಿಸಿ
ಮರಳಿ ಇಕ್ಕಾಲಿಕ್ಕಿ ದಾಂಟಿ ಹೋಹ
ಒಕ್ಕಲಿತಿಯ ಭಕ್ತಿಯಂತಾಯಿತ್ತಯ್ಯಾ ಭಾಷೆವಂತನ ಭಕ್ತಿ ‖
ಕೆರಹ ಕಳೆದು ಕೈತೊಳೆದು ಸಗ್ಗಳೆಯ ನೀರುಕುಡಿದ
ಬ್ರಾಹ್ಮಣನ ಭಕ್ತಿಯಂತಾಯಿತ್ತಯ್ಯಾ ಸಮಯಾಚಾರನ ಭಕ್ತಿ ‖
ನಾಯನಡು ಸಣ್ಣನೆಂದು ಅಂದಳವನೇರಿಸಿದಡೆ
ಆ ನಾಯಿ ಎಲುವ ಕಂಡಿಳಿದಂತಾಯಿತ್ತಯ್ಯಾ ನಿತ್ಯಕೃತ್ಯನ ಭಕ್ತಿ ‖
ಇಂತೀ ಆರು ಪ್ರಕಾರದ ದೃಷ್ಟಾಂತಗಳ ತೋರಿ ಹೇಳಿದೆ
ಅಂತು ಭಕ್ತಜಂಗಮನೇ ಶಿವನೆಂದರಿದು
ಪಾದೋದಕ ಪ್ರಸಾದಮಂ ಕೊಂಡು ನಮಸ್ಕರಿಸಿದ ಬಳಿಕ
ಮತ್ತಾ ಜಂಗಮವು ಮನೆಗೆಬಂದು ಹೊನ್ನುವಸ್ತ್ರ ಕನ್ನಿಕೆಯರ-

ಮುಟ್ಟುವರೆಂಬ ಅಳುಕುಂಟೇ ಭಕ್ತಂಗೆ ಇಲ್ಲವಾಗಿ
ಅದೆಂತೆಂದೆಡೆ ಲೈಂಗ್ಯ ಪುರಾಣದಲ್ಲಿ—

> ಅರ್ಥ ಪ್ರಾಣಾಭಿಮಾನೇಷು ವಂಚನಂ ನೈವ ಕುತ್ರಚಿತ್ ।
> ಯಥಾಭವೇದೇವ ತಥಾ ಚರೋಚ್ಛಿಷ್ಟಂ ವಿಶೇಷತಃ ॥
> ಸ್ವೇಷ್ಟಲಿಂಗಸ್ಯದತ್ವಾತು ಪುನಸ್ಸೇವೇತ ಭಕ್ತಿಮಾನ್ ।
> ಸಏವಷಟ್ಸ್ಥಲ ಬ್ರಹ್ಮೀ ಪ್ರಸಾದೀಸ್ಯಾನ್ಮಹೇಶ್ವರಃ ॥

ಇಂತೆಂಬ ಪುರಾಣವಾಕ್ಯಂಗಳನರಿಯದೆ ಅಳುಕುಳ್ಳಡೆ ಸುಡುಸುಡು
ಅವನು ಗುರುದ್ರೋಹಿ ಆಚಾರಭ್ರಷ್ಟನು ವ್ರತಗೇಡಿ
ನರಮಾಂಸ ಭುಂಜಕನು ಜಂಗಮನಿಂದಕನು ಪಾಷಂಡನು
ದೂಷಕನು
ಅವನ ಹಿಡಿದು ಹೆಡೆಗುಡಿಯಂ ಕಟ್ಟಿ ಮೂಗನುತ್ತರಿಸಿ
ಇಟ್ಟಿಗೆಯಲೊರಸಿ ಅನಂತಕಾಲ ನರಕದಲ್ಲಿ ಕೆಡಹುವ
ನಮ್ಮ ಕೂಡಲಚೆನ್ನಸಂಗಮದೇವರು

## ತಾಮಸ ಸಹಭೋಜನ ನಿರಸನ ಸ್ಥಲ ೩೧

ಇಂತೀ ಪ್ರಕಾರದಿಂ ವೀರಮಾಹೇಶ್ವರರು ತಾವು ಭೋಗಿಸುವ ಸಕಲ ಭೋಗಂಗಳನು ಜಂಗಮಲಿಂಗಕ್ಕೆ ಕೊಟ್ಟು ಕೊಂಬಾತನೀಗಲೇ ಸದ್ಭಕ್ತನ ಲ್ಲದೆ ಉಳಿದಂತೆ ಜಂಗಮಲಿಂಗ ವಿರಹಿತವಾಗಿ ಸಕಲಭೋಗಂಗಳೆಲ್ಲವಂ ತನ್ನ ಲಿಂಗಕ್ಕೆ ಕೊಟ್ಟು ಕೊಂಬಾತ ಸದ್ಭಕ್ತಿಸ್ಥಲಕ್ಕೆ ಸಲ್ಲನೆಂಬುದಂ ಪ್ರತಿ ಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಸದ್ಭಕ್ತನಾಗಿರ್ದವಂಗೆನ್ನಬರ ಭಕ್ತಿಯುಂಟು ಅನ್ನಬರವೂ ಭಯಬೇಕಾದ ಕಾರಣ ಭಯವ ಬಿಟ್ಟು ಲಿಂಗದೊಡನೆ ಸಹಭೋಜನವಂ ಮಾಡಲಾಗದೆಂಬುದಂ ತಿಳುಪಲೋಸುಗ ನುಡಿದ ವಚನಂಗಳು.

ಶಿವಧರ್ಮೇ—

> ಆಪ್ತಶಬ್ದೋ ಮಹಾದೇವಿ ವರ್ಜನೀಯಸ್ತು ಸಜ್ಜನೈಃ ।
> ಭವಿಶಬ್ದಃ ಕುಶಬ್ದಶ್ಚ ಹಿಂಸಾಶಬ್ದಸ್ತಥಾಪರಃ ॥೧॥
> ಶ್ವಪಚಾನೃತ ಶಬ್ದಶ್ಚ ಕರ್ಕಶೋ ಭಾಂಡಕೋಽಪಿ ಚ ।
> ಬೀಭತ್ಸಕೋ ಮಹಾದೇವಿ ಪ್ರಸಾದೀ ವರ್ಜಯೇತ್ಕ್ರಮಾತ್ ॥೨॥

ಭವಿಶಬ್ದ ಕುಶಬ್ದ ಹಿಂಸೆಮಾಡುವ ಶಬ್ದ ಶ್ವಪಚಶಬ್ದ ಅನೃತ ಶಬ್ದ ಕರ್ಕಶವಾದ ಶಬ್ದ ಭಂಡಶಬ್ದ ಹೇಸಿಕೆಯ ಶಬ್ದ ಈ ಎಂಟು ಶಬ್ದಗಳನ್ನು ಶಿವ ಪ್ರಸಾದಿಯು ಬಿಡುವುದು. ಇಂತಿವ ಬಿಟ್ಟಲ್ಲದೆ ಲಿಂಗದೊಡನೆ ಸಹ ಭೋಜನವ ಮಾಡಲಾಗದು.

ವೀರಾಗಮೇ—

> ಮನದ್ರವ್ಯಂ ತನುದ್ರವ್ಯಂ ಉಭಯಂ ಜಂಗಮಾರ್ಪಿತಮ್ ।
> ಉಭಯಾರ್ಪಣ ಹೀನಸ್ಯ ಪ್ರಸಾದೋ ನಿಷ್ಫಲೋಭವೇತ್ ॥೩॥

ಮನವೆಂಬ ಒಡವೆಯನು ತನುವೆಂಬ ಒಡವೆಯನು ಜಂಗಮಲಿಂಗಾ ರ್ಪಣವಂ ಮಾಡುವುದು. ಈ ಉಭಯಾರ್ಪಣವಿಲ್ಲದಿದ್ದರೆ ಪ್ರಸಾದವು ನಿಷ್ಫಲವಹುದು. ಅವನು ಭವಿಯಿಂದ ಭವಿತನವನುಳ್ಳವನು ಲಿಂಗದೊಡನೆ ಎಂತು ಉಣಬಹುದು.

ಲೈಂಗ್ಯೇ—

ಸರ್ವಾವಸ್ಥಾಗತ ಪ್ರಾಣೋ ಭಾಜನಂ ಭೋಜನಸ್ತಥಾ।
ಹಸ್ತೇ ಲಿಂಗಂ ಪ್ರತಿ ಗೃಹ್ಯ ನರಕೇ ಕಾಲಮಕ್ಷಯಮ್ ॥೪॥

ಎಲ್ಲಾಗಳೂ ಪ್ರಾಣವಾಯುವಿನ ಗುಣವುಳ್ಳಾತನಾಗಿದ್ದು ಹಸ್ತದಲ್ಲಿ ಲಿಂಗವ ಹಿಡಿದುಕೊಂಡು ತುತ್ತುತುತ್ತಿಗೆ ಲಿಂಗಕ್ಕೆ ತೋರಿ ತೋರಿ ಸಹ ಭೋಜನವಮಾಡುವ ಭಕ್ತನು ಅನೇಕ ಕೇಡಿಲ್ಲದ ನರಕದಲ್ಲಿಹನು.

## ವಚನ

೧

ಭಕ್ತದೇಹಿಕ ದೇವನೆಂದು ಅಂಜದ ಮತವದೇನಪ್ಪುದೊ
ಭಯವಿಲ್ಲದ ಭಕ್ತಿ ದಯವಿಲ್ಲದ ಶೀಲ- ಗುಣವಿಲ್ಲದ ನಂಟು
ಮುಂದೇನಪ್ಪುದೋ
ಭಯವ ಮರೆದು ಲಿಂಗದೊಡನೆ ಸಹ ಭೋಜನವ ಮಾಡಿದರೆ
ಪಂಚ ಮಹಾ ಪಾತಕ ತಪ್ಪದು ಅದೆಂತೆಂದಡೆ
ಗುರುವ ಬಿಟ್ಟು ಲಿಂಗವನೊಲಿಸುವೆನೆಂದರೆ
ಗುರುವು ಲಿಂಗವು ಎರಡೂ ಇಲ್ಲದೆ ಹೋಹವು
ಗುರುವೆಂಬುದೇ ಭಯಭಕ್ತಿ ಲಿಂಗವೆಂದೇ ಶಿವನು
ಆ ಭಯ ಭಕ್ತಿಯಿಲ್ಲದೆ ಶಿವನೊಲಿಸ ಬಾರದು ರೇಕಣ್ಣಪ್ರಿಯ
ನಾಗಿನಾಥಾ

೨

ಲಿಂಗದೊಡನೆ ಸಹಭೋಜನವ, ಮಾಡುವ ಅದ್ವೈತಿಗಳ
ಮಾತಕೇಳಿ ಸಂಸಾರದೊಳಗಿದ್ದ ಭಕ್ತನು
ಲಿಂಗದೊಡನೆ ಸಹ ಭೋಜನವ ಮಾಡಿದರೆ
ಪಂಚ ಮಹಾಪಾತಕ ತಪ್ಪದು ಅದೆಂತೆಂದಡೆ

ಶಿವಧರ್ಮೆ—

ರಾಗದ್ವೇಷ ಮದೋನ್ಮತ್ತ ಸ್ತತ್ವಜ್ಞಾನ ಪರಾಙ್ಮುಖ:
ಸಂಸಾರಸ್ಯ ಮಹಾಪಂಕೇ ಜೀರ್ಣಾಗೌರಿವ ಮಜ್ಜತೇ ॥

ಎಂದುದಾಗಿ ಇದನರಿತು ಲಿಂಗದೊಡನೆ ಸಹಭೋಜನವ
ಮಾಡಲಾಗದು
ಕಾಮ ಕ್ರೋಧ ಲೋಭ ಮೋಹಮದ ಮತ್ಸರ ಆಶೆಯುಳ್ಳನಕ್ಕರೆ
ಲಿಂಗದೊಡನೆ ಸಹಭೋಜನವ ಮಾಡಲಾಗದು
ಹಸಿವು ತೃಷೆ ನಿದ್ರೆ ವಿಷಯ ಆಲಸ್ಯವುಳ್ಳನ್ನಕ್ಕರ
ಲಿಂಗದೊಡನೆ ಸಹಭೋಜನವ ಮಾಡಲಾಗದು
ಮಾಡುವ ಅಜ್ಞಾನಿಗಳು ನೀವು ಕೇಳಿರೇ
ಗುರು ಲಿಂಗ ಜಂಗಮ ತ್ರಿವಿಧವನು ಏಕಾರ್ಥವ ಮಾಡದನ್ನಕ್ಕರ
ಸಹಭೋಜನವುಂಟೇ
ಹೇಳಿರಂಣಾ ಇಲ್ಲವಾಗಿ ಅದೆಂತೆಂದಡೆ—

> ಗುರುಮೇಕಂ ಲಿಂಗಮೇಕಂ ಚರಮೇಕವಿಧಂ ತಥಾ
> ತ್ರಿವಿಧಂ ಭಿನ್ನಭಾವೇನ ಶ್ವಾನಗರ್ಭೇತು ಜಾಯತೇ ॥

ಇಂತೆಂಬ ಶಿವನವಾಕ್ಯವನರಿಯದೆ
ನೀವೇ ಲಿಂಗವೆಂಬಿರಿ ಲಿಂಗವೇನೀವೆಂಬಿರಿ
ಜನನ ಮರಣ ಹಾಗು ನಿರೋಧ ಉಳ್ಳನ್ನಕ್ಕರ
ನೀವೆಂತು ಲಿಂಗವಪ್ಪಿರಿ ಹೇಳಿರಣ್ಣಾ
ಈ ಶಿವಜ್ಞಾನದ ಮಹಾಧರ್ಮವನರಿಯದೆ
ಲಿಂಗದೊಡನೆ ಸಹ ಭೋಜನವ ಮಾಡಿದಡೆ
ಅಘೋರ ನರಕದಲ್ಲಿಕ್ಕದೆ ಬಿಡುವನೇ ನಮ್ಮ
ಕೂಡಲ ಚನ್ನ ಸಂಗಮದೇವರು

೩

ಲಿಂಗದೊಡನೆ ಸಹ ಭೋಜನವ ಮಾಡುವ
ಸಾಧಕರೆಲ್ಲರೂ ನೀವು ಕೇಳಿರೋ
ಲಿಂಗವೇ ಕರ್ತೃವಾಗಿ ನೀವೇ ಭೃತ್ಯರಾಗಿದ್ದಲ್ಲಿ
ಲಿಂಗದೊಡನೆ ಸಹ ಭೋಜನವ ಮಾಡಲಾಗದು ಅದೆಂತೆಂದಡೆ
ಲಿಂಗವು ಅಮಲ ಸ್ವರೂಪವು ನೀನು ಮಲದೇಹಿ
ನಿನಗೆ ಪ್ರಪಂಚು ಲಿಂಗವು ನಿಷ್ಪ್ರಪಂಚು
ನೀನು ಅಂಗಿ ಲಿಂಗವು ನಿರಂಗಿ

ಅಂತಹ ಲಿಂಗಕ್ಕೂ ನಿನಗೂ ಸಹಭೋಜನವೆಂತುಂಟಯ್ಯಾ
ಜಾಗ್ರದಲ್ಲಿ ತೋರಿ ಸ್ವಪ್ನದಲ್ಲಿ ಕಂಡುದ
ಲಿಂಗಕ್ಕರ್ಪಿಸಿ ಸಹಭೋಜನ ಮಾಡುವ ಪರಿಯಿಂತೋ
ಸಾಕು ಕುಟಿಲದ ಊಟ
ಸದಾಶಿವ ಮೂರ್ತಿ ಲಿಂಗವ ಮುಟ್ಟದ ಅರ್ಪಿತವದೇಕ
ಕೇಳಿರಂಣಾ ನರಕಕ್ಕೆ ಭಾಜನರಪ್ಪುರಲ್ಲದೆ

೪

ಲಿಂಗದೊಡನೆ ಸಹಭೋಜನ ಮಾಡುವ ಸದ್ಭಕ್ತನ
ಆಚರಣೆ ಕ್ರಿಯೆಗಳೆಂತುಂಟಯ್ಯಾ ಅಂದರೆ
ಜಂಗಮದ ಪಾದೋದಕವ ತನ್ನಲಿಂಗಕ್ಕೆ ಮಜ್ಜನವ ಮಾಡುವಲ್ಲಿ
ಜಂಗಮದ ಕುಂದು ನಿಂದೆಯಂ ಕೇಳಲಾಗದು
ಅಥವಾ ಕೇಳಿದಡೆ ಆ ನಿಂದಕನಂ ಕೊಲ್ಲುವುದು
ಕೊಲಲಾಗದಿರ್ದಡೆ ತನ್ನ ತಾನಿರಿದುಕೊಂಡು ಸಾವುದು
ಸಾಯಲಾಗದಿರ್ದಡೆ ಅವನ ಬಯ್ವುದು
ಇಷ್ಟುಳ್ಳಡೆ ಜಂಗಮದ ಪಾದೋದಕವ ಲಿಂಗಕ್ಕೆ ಮಜ್ಜನಕ್ಕೆರೆವುದು
ಅಲ್ಲದಿರ್ದಡೆ ಸುಮ್ಮನಿಹುದು ಪಾದತೀರ್ಥವಕೊಳ್ಳದೆ
ಲಿಂಗಕ್ಕೆ ಜಂಗಮದ ಪ್ರಸಾದವ ಸಮರ್ಪಿಸಿ ಕೊಂಬ
ಭಕ್ತನ ಕ್ರಮವು ಹೇಗೆಂದಡೆ
ತನ್ನ ಅರ್ಥಪ್ರಾಣಾಭಿಮಾನವನು ಜಂಗಮವು ಬಂದು ಮುಟ್ಟಿದಲ್ಲಿ
ಕಂಡು ಕೇಳಿ ಶಿವಾರ್ಪಣವಾಯಿತೆಂದು
ಮನದಲ್ಲಿ ಸಂತೋಷವ ತಾಳಿದಡೆ ಪ್ರಸಾದವುಂಟು
ಇಂತಲ್ಲದೆ ಮನದಲ್ಲಿ ನೋವ ತಾಳಿ
ಆ ಜಂಗಮವ ನುದಾಸೀನವಮಾಡಿ ಬಿಟ್ಟನಾದಡೆ
ಹಿಂದಕ್ಕೆ ಕೊಂಡ ಪಾದತೀರ್ಥವೆಲ್ಲವೂ ಅವರ ಮೂತ್ರವ
ಕೊಂಡ ಸಮಾನ
ಹಿಂದಕ್ಕೆ ಕೊಂಡ ಪ್ರಸಾದವೆಲ್ಲವು ಅವರ ಮಲ ತಿಂದವ ಸಮಾನ
ಇದು ಕಾರಣ ಅವನು ಗುರ್ವಾಜ್ಞೆಯ ಮೀರಿದ ಆಚಾರ ಭ್ರಷ್ಟನು

ಎನ್ನಮನೆ ಎನ್ನಧನ ಎನ್ನ ಸತಿಯೆಂಬನ್ನಕ್ಕರ
ಅವನು ಭವಿಯು ಸಮಾನ
ಭಕ್ತನಲ್ಲ ಪ್ರಾಸಾದಿಯಲ್ಲ ಶೀಲವಂತನಲ್ಲ
ಅವನಿಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ
ಪಾದ ತೀರ್ಥ ಪ್ರಸಾದ ಮುನ್ನವೇ ಇಲ್ಲ
ಅವನಿಗೆ ಕುಂಭಿ ಪಾತಕ ನಾಯಕ ನರಕತಪ್ಪುದು
ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ

## ವಾಗದ್ವೈತ ನಿರಸನ ಸ್ಥಲ ೩೨

ಇಂತೀ ಪ್ರಕಾರದಿಂ ಶಿವಭಕ್ತರು ಭಯವ ಮರೆದು ಲಿಂಗದೊಡನೆ ಸಹ ಭೋಜನವಂ ಮಾಡುವುದು. ಶಿವನ ಕಾರುಣ್ಯಕ್ಕೆ ದೂರವಪ್ಪುದ ರಿಂದಲೇ ಭಕ್ತರಿಗೆ ಭಯಭೀತಿಯೇ ಕಾರಣವೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದ ಮಹಾಪುರಾತನರು.

ಇಂತಹ ಸದ್ಭಕ್ತನು ಲಿಂಗಕ್ಕೂ ತನಗೆ ಭೇದವಿಲ್ಲೆಂದು ನುಡಿವ ಅದ್ವೈತವು ಸಲ್ಲದೆಂದು ನುಡಿದ ವಚನಗಳು.

ಶಿವಧರ್ಮೇ—

ದುರ್ವೃತ್ತೋ ದುರ್ವಿನೀತಶ್ಚ ಜಗದ್ಭಾವಂ ಸಮಾಚರನ್ ।
ಶಾಸ್ತ್ರವಾಚಾಲಕಶ್ಚೈವ ವಾಗದ್ವೈತ ಇತಿಸ್ಮೃತಃ ॥೧॥

ದುರ್ವರ್ತನೆಯಲ್ಲಿ ವರ್ತಿಸುತ್ತ ದುರ್ನೀತಿಯಲ್ಲಿ ನಡೆವುತ್ತ ಜಗತ್ತಿನ ಭಾವದೋಷಾದಿಯಲ್ಲಿರುತ್ತಲೂ ಶಾಸ್ತ್ರಾಭ್ಯಾಸದ ವಾಚಾಲತೆಯಿಂ ನುಡಿಗಳನಾಡುವವನು ವಾಗದ್ವೈತಿಯೆನಿಸಿಕೊಳ್ಳುವನು.

ವಾಶಿಷ್ಠೇ—

ಅಜ್ಞಸ್ಯಾರ್ಧ ಪ್ರಬುದ್ಧಸ್ಯ ಸರ್ವಂ ಬ್ರಹ್ಮೇತಿಯೋ ವದೇತ್
ಮಹಾನರಕಜಾಲೇಷು ಸತೇನ ವಿನಿಯೋಜಿತಃ ॥೨॥

ಅಲ್ಪಜ್ಞಾನಿಯಾದ ಮೂರ್ಖಂಗೆ ಸಮಸ್ತವೂ ಬ್ರಹ್ಮವೆಂದು ಆವನಾ ನೊಬ್ಬನು ಹೇಳುವನೋ ಅದರಿಂದ ಆ ಮೂರ್ಖನು ಮಹಾನರಕ ಸಮೂಹಂಗಳಲ್ಲಿ ಸೇರಿಸಲ್ಪಡುವನು.

ಪದ್ಮನಾಭೇ—

ಏಕ ಏವ ಸದಾರುದ್ರೋ ನದ್ವಿತೀಯೋಸ್ತಿ ಕಶ್ಚನ ।
ಏತದದ್ವೈತ ವಿಜ್ಞಾನಮನ್ಯದ್ವ್ಯರ್ಥಮುದಾಹೃತಮ್ ॥೩॥

ಎಲ್ಲಾಗಳೂ ಶಿವನೊಬ್ಬನೇ ಎರಡನೆಯವನು ಮತ್ತೊಬ್ಬನಿಲ್ಲ ಹೀಗೆಂಬುದು ಅದ್ವೈತ ಜ್ಞಾನವು. ಉಳಿದ ಜ್ಞಾನವು ನಿಷ್ಫಲವೆಂದು ಹೇಳಲ್ಪಟ್ಟಿತು.

## ವಚನಗಳು

೧

ಅರಿವು ಸಾಧ್ಯವಾಯಿತ್ತೆಂದು
ಗುರುಲಿಂಗ ಜಂಗಮವ ಬಿಡಬಹುದೇ
ಸಂದು ಸಂತಯುವಳಿದು ಅಖಂಡ ಜ್ಞಾನವಾಯಿತೆಂದು
ಪರಧನ ಪರಸ್ತ್ರೀಗಳುಪಬಹುದೇ
"ಯಂತ್ರ ಜೀವಸ್ತತ್ರಶಿವಃ" ಎಂಬ ಅಭಿಜ್ಞಾನವಾಯಿತೆಂದು
ಶುನಕ ಸೂಕರ ಕುಕ್ಕುಟ ಮಾರ್ಜಾಲಗಳ ಕೂಡಿ ಭುಂಜಿಸಬಹುದೇ
ಭಾವದಲ್ಲಿ ತನ್ನ ನಿಜದ ನೆಲೆಯನರಿವುತ್ತಿಹುದು
ಸುಜ್ಞಾನ ಸತ್ಕ್ರಿಯ ಸುನೀತಿ ಸುಮಾರ್ಗವಲ್ಲಿ ವರ್ತಿಸುವುದು
ಹೀಗಲ್ಲದೇ ಜ್ಞಾನವಾಯಿತ್ತೆಂದು ತನ್ನಮನಕ್ಕೆ ಬಂದಹಾಗೆ
ಮೀರಿ ನುಡಿದು ನಡೆದನಾದಡೆ
ಶ್ವಾನಗರ್ಭದಲ್ಲಿ ಹುಟ್ಟಿಸದೆ ಬಿಡುವನೇ ಚೆನ್ನಮಲ್ಲಿಕಾರ್ಜುನಯ್ಯನು

೨

ಗುರು ಸಾಧಕರನಾರನೂ ಕಾಣೆನಯ್ಯಾ
ಬರಿಯ ವಾಗದ್ವೈತವ ನುಡಿವರೆಲ್ಲ ಹೊಲಬುಗೆಟ್ಟರು
ಲಿಂಗ ಸಾಧಕರ ನಾರನೂ ಕಾಣೆನಯ್ಯಾ
ಬರಿಯವಾಗದ್ವೈತವ ನುಡಿವರೆಲ್ಲ ಹೊಲಬುಗೆಟ್ಟರು
ಜಂಗಮ ಸಾಧಕರನಾರನೂ ಕಾಣೆನಯ್ಯಾ
ಬರಿಯ ವಾಗದ್ವೈತವ ನುಡಿವರೆಲ್ಲ ಹೊಲಬುಗೆಟ್ಟರು
ಪಾದೋದಕ ಪ್ರಸಾದ ಸಾಧಕರನಾರನೂ ಕಾಣೆನಯ್ಯಾ
ಬರಿಯ ವಾಗದ್ವೈತವ ನುಡಿವರೆಲ್ಲರೂ ಹೊಲಬುಗೆಟ್ಟರು
ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ

ಸುಜ್ಞಾನ ಸತ್ಕ್ರಿಯವಿಡಿದು ಸಮರಸೈಕ್ಯವಾಗಲರಿಯದೆ
ಬರಿಯ ವಾಗದ್ವೈತಿಗಳ ಕಂಡು ಎನ್ನ ಮನ ಹೇಸಿತ್ತು

೩

ಬ್ರಹ್ಮೋಪದೇಶವಾಯಿತ್ತೆಂದು
ಬ್ರಹ್ಮದೊಡನೆ ಧಿಃಕ್ಕರಿಸಬೇಡ
ಶಿವಜ್ಞಾನ ದೀಕ್ಷೆಯಾಯಿತ್ತೆಂದು
ಶಿವಶರಣರೊಡನೆ ಧಿಃಕ್ಕರಿಸಬೇಡ
ಕಾಲಜ್ಞಾನವಾಯಿತ್ತೆಂದು
ಕರ್ಮವ ಹಳಿಯ ಬೇಡ ಇದುಕಾರಣ
ಕೂಡಲಸಂಗಯ್ಯ ಸಾಕ್ಷಿಯಾಗಿ
ಇವರೆಲ್ಲರೂ ಸಜ್ಜನಶುದ್ಧಶಿವಾಚಾರ್ಯಕ್ಕೆ ಹೊರಗು

## ತಾಮಸ ಸ್ವಾನುಭಾವ ನಿರಸನ ಸ್ಥಲ ೩೩

ಇಂತೀ ಪ್ರಕಾರದಿಂ ಸತ್ಕ್ರಿಯಾ ಮಾರ್ಗದೊಡನೆ ಗುರುಲಿಂಗ ಜಂಗಮಕ್ಕೆ ದಾಸೋಹವ ಮಾಡುವಾತನೇ ಸದ್ಭಕ್ತನು. ಉಳಿದಂತೆ ಗುರು ಲಿಂಗ ಜಂಗಮಕ್ಕೆ ದಾಸೋಹವಲ್ಲದೆ ವಾಗದ್ವೈತವ ನುಡಿವಾತನು ಸದ್ಭಕ್ತಸ್ಥಲಕ್ಕೆ ಸಲ್ಲನೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಗುರುಲಿಂಗ ಜಂಗಮದ ನೆಲೆಯನರಿಯದೆ ಬರಿಯ ಮಾತನೇ ಪಸರಿಸುವ ನುಡಿಯು ಸಲ್ಲದೆಂಬುದಂ ನುಡಿದ ವಚನಂಗಳು.

ಶಿವಧರ್ಮೇ—

ಮಥನಾತ್ಸರ್ವ ಶಾಸ್ತ್ರಾಣಾಂ ನವನೀತಂ ಯಥಾಘೃತಮ್ ।
ಪಿಬಂತಿಯೋಗಿನಃ ಸರ್ಪಿಸ್ತಕ್ರಂ ಪಿಬಂತಿ ಪಂಡಿತಃ ॥೧॥

ಸರ್ವಶಾಸ್ತ್ರಂಗಳೆಲ್ಲವಂ ಮಥನಿಸಿ ಸಾರೋದ್ಧಾರವ ಮಾಡುವಲ್ಲಿ ಆ ನವನೀತದ ರಸವಾದ ತುಪ್ಪವನು ಪರಶಿವಯೋಗೀಶ್ವರರನುಭವಿಸು ವರು ಬರಿಯ ಮಜ್ಜಿಗೆಯನೆ ವಾಗಾಡಂಬರದ ಪಂಡಿತನು ಕುಡಿದನು.

ವೇದಾಂತವಾಗವಿಷಯಂ ಗೂಢಂ ಚೋಪನಿಷತ್ಸುಚ ।
ಸ್ವದೃಷ್ಟ್ವಾ ಭವದುಃಖಾರ್ತಂ ಬ್ರಹ್ಮಾಸ್ಮೀತಿಚ ಕೋವದೇತ್ ॥೨॥

ವಾಕ್ಕು ಮೊದಲಾದ ಕರ್ಮೇಂದ್ರಿಯಗಳಿಗೂ ಜ್ಞಾನೇಂದ್ರಿಯಂಗಳಿಗೂ ಅಗೋಚರವಾಗಿ ವೇದಾಂತಗಳಲ್ಲಿ ಮರೆಮಾಡಲ್ಪಟ್ಟಾತನಾದ ದೇವನನ್ನು ಸಂಸಾರಕ್ಲೇಶಂಗಳಿಂದ ಪಿಂಡಿತನಾದ ತನ್ನನ್ನು ನೋಡಿ ಪರಬ್ರಹ್ಮವಾಗು ತ್ತಿದ್ದೇನೆಂದು ಅವನು ನುಡಿವನು ನುಡಿಯನೆಂದರ್ಥವು.

ತಾವತ್ತತ್ವಂ ಕೃತೋಯಾವದ್ಭೇದಃ ಸ್ವಪರಯೋರ್ಭವೇತ್ ।
ನಗರಾರಣ್ಯಯೋರ್ಭೇದೇ ಕಥಮೇಕತ್ವವಾಸನಾ ॥೩॥

ಎಲ್ಲಿಯ ಪರ್ಯಂತವೂ ತಾನು ಪರ ಎಂಬ ಇಬ್ಬರ ಭೇದವು ಹೋಹುದೋ ಅಲ್ಲಿಯ ಪರ್ಯಂತವೂ ತತ್ವವೂ ಇಹುದು ಪುರವಡವಿ ಎಂಬೆರಡು ಭೇದವುಂಟಾಗುತ್ತಿರಲು ಏಕತ್ವವೆಂಬ ಸಂಸ್ಕಾರವು ಹೇಗೆ ಉಂಟಾದೀತು.

## ವಚನಗಳು

೧

ಸಮತೆ ಸಮ್ಮತದಿಂದ ನಿಜಗುರು ಕಾರುಣ್ಯದಿಂದ
ಸತ್ವರಜಸ್ತಮದ ಕ್ರೋಧವಳಿಯದನ್ನಕ್ಕರ ಅನುಭಾವವೆಲ್ಲಿಯದೋ
ಆತ್ಮಸ್ತುತಿ ಪರನಿಂದೆ ಅಸಹ್ಯ ಅನೃತ ತರ್ಕ
ಉಡುಗದನ್ನಕ್ಕರ ಅನುಭಾವವೆಲ್ಲಿಯದೋ
ಅರಿಷಡ್ವರ್ಗ ದಶವಾಯುಗಳ
ವಿಕಳಪಾನ ಬಿಡದನ್ನಕ್ಕರ ಅನುಭಾವವೆಲ್ಲಿಯದೋ
ಮದ ಮತ್ಸರ ವೈತಾಳ ಸಂಪಾದವಲ್ಲದೆ ಅನುಭಾವವೆಲ್ಲಿಯದೋ
ಸಮತೆ ಸಜ್ಜನಿಕೆ ಸಮಯಾಚಾರದ ನಿಜಪಥವು
ದುರಾಚಾರಿಗಳಿಗಳವಡುವುದೇ
ನಮ್ಮ ಕೂಡಲ ಸಂಗನ ಶರಣರಿಗಲ್ಲದೆ-
ಅನುಭಾವವೆಲ್ಲರಿಗೆಲ್ಲಿಯದೋ

೨

ಅನುಭಾವ ಅನುಭಾವವೆಂದೆಂಬಿರಿ
ಅನುಭಾವವೆಂಬುದು ನೆಲದ ಮರೆಯ ನಿಧಾನ ಕಾಣಿರೋ
ಅನುಭಾವವೆಂಬುದು ಅಂತರಂಗದ ರತ್ನ ಕಾಣಿಭೋ
ಅನುಭಾವವೆಂಬುದು ಶಿಶು ಕಂಡ ಕನಸು ಕಾಣಿಭೋ
ಅನುಭಾವವೆಂಬುದು ರಚ್ಚೆಯ ಮಾತೇ
ಅನುಭಾವವೆಂಬುದು ಸಂತೆಯ ಸುದ್ದಿಯೇ
ಅನುಭಾವವೆಂಬುದು ಬೀದಿಯ ಪಸಾರವೇ
ಏನೆಂಬೆ ಹೇಳಾ ಮಹಾಘನವನು

ಆನೆ ಮಾನದೊಳಡಗುವುದೇ ದರ್ಪಣದೊಳಗಡಗುವದಲ್ಲದೇ
ಕಂಡ ಕಂಡಲ್ಲಿ ಗೋಷ್ಠಿಯಾಗಿ ನಿಂದಲ್ಲಿಯೇ ಅನುಭಾವ ?
ಬಂದ ಬಂದಲ್ಲಿ ಪ್ರಸಂಗವ ಮಾಡುವ
ಹಂದಿಕುನ್ನಿಗಳನೇನೆಂಬೆನಯ್ಯಾ ಕೂಡಲ ಸಂಗಮದೇವಾ

೩

ಬರಿಯ ಜ್ಞಾನಿಗಳಾದವರು ಅಂಗದ ಬಲದಲ್ಲಿ ನುಡಿವರು
ಲಿಂಗಾನುಭಾವಿಗಳು ಲಿಂಗದ ಬಲದಲ್ಲಿ ನುಡಿವರು
ಜ್ಞಾನಿಗಳಲ್ಲದ ಸುಜ್ಞಾನಿಗಳಲ್ಲದವರು
ಗಂಡನಿಲ್ಲದ ಮುಂಡೆಯವರು ಹಲಬರನುರುಳುವಂತೆ
ಹಿಂದರಿಯದೆ ನುಡಿವರು ಮುಂದರಿಯದೆ ಅನುಭಾವವ ಮಾಡುವರು
ಸದ್ಭಕ್ತರ ವಚನಂಗಳು ಲಿಂಗದ ನುಡಿಗಳು
ಬರುಜ್ಞಾನಿಯ ನುಡಿಗಳು ಗಾಳಿಯ ಶಬ್ದಂಗಳು
ಮತಿಗೆಟ್ಟು ಅವಗತಿಯಲ್ಲಿ ಕಾಲೂರಿ ಆಯತಗೆಟ್ಟು
ನಾಯನಡೆಯ ನಡೆವವರು ಅನುಭಾವಿಗಳಪ್ಪರೇ ಅಲ್ಲಲ್ಲ
ಅದೆಂತೆಂದಡೆ ಸುಜ್ಞಾನಿಗಳಾದರೆ ಕಾಮವೇ ಪ್ರಾಣವಾಹರೇ
ಅನ್ನವೇ ಜೀವವಾಗಿಹರೇ
ವರುಣನ ಹೊದಿಕೆಯನೆ ಹೊದೆದು ಚಂದ್ರಮನ ತೆರೆಯಲೊರಗಿ
ಪರದಾರಕ್ಕೆ ಕೈಯ್ಯ ನೀಡುವರೇ ಶರಣರಾದರೆ
ಇಂತಪ್ಪರಲ್ಲಯ್ಯಾ ನಮ್ಮ ಶರಣರುಗಳು
ಇವರುಗಳು ಪಾತಕಿಗಳು ಆಶೆಯ ಸಮುದ್ರರು
ಅಂಗ ಶೃಂಗಾರಿಗಳು ಭವಭಾರಿಜೀವಿಗಳು
ಇವರೆಂತು ಸರಿಯಪ್ಪರಯ್ಯಾ ನಮ್ಮ ಲಿಂಗಾನುಭಾವಿಗಳಿಗೆ
ಸರ್ವಾಂಗ ಲಿಂಗವಾಗಿದ್ದ ಮಹಾನುಭಾವಿಗಳ ನಿಲವನು
ಮಹಲಿಂಗ ಕಲ್ಲೇಶ್ವರ ತಾ ಬಲ್ಲನಲ್ಲದೆ ಸ್ಥೂಲ ಜ್ಞಾನಿಗಳೆತ್ತ ಬಲ್ಲರು

೪

ಆನೆಯನೇರಿದ ಮಾವುತ ಚಕ್ರೇಶ್ವರನಾಗಬಲ್ಲನೇ ಅಯ್ಯಾ
ವೇದಶಾಸ್ತ್ರಾಗಮ ಪುರಾಣಂಗಳನೋದಿ ಕೇಳಿ ಹೇಳುವವರೆಲ್ಲರೂ

ನಡೆನುಡಿ ಪೂರಾಯವಾದ ಪುರಾತನರಾಗಬಲ್ಲರೇ ಅಯ್ಯಾ
ಅದೆಂತೆಂದಡೆ— " ಪೂರಾಯುತ್ವ ಪುರಾತನಃ " ಎಂದುದಾಗಿ
ತೊತ್ತು ಲಕ್ಷಣವಿರಲು ನಾಣೆಯ ನುಡಿಸಿ
ನವರತ್ನದಾಭರಣಂಗಳಂ ತೊಡಿಸಿ ದೆಡಿಕ್ಕೆಗೆಯನೇರಿಸಲು
"ಶಂಕರಸ್ಯಯಥಾಗೌರೀ" ಎಂದೆನಿಸಿಕೊಳಬಲ್ಲಳೇ ಅಯ್ಯಾ
ಖ್ಯಾತಿಯಾಗಿ ನಿಜತತ್ವಂಗಳನೋದಿ ಕೇಳಿ ಹೇಳಿದಡೇನು
ಅದಕ್ಕೆ ತಕ್ಕ ಅರಿವು ಆಚಾರ ನಡೆನುಡಿಯಲ್ಲಿ ನಿರ್ಣಯವಿಲ್ಲದಿದ್ದಡೆ
ಕುಂಭಿಪಾತಕ ನಾಯಕ ನರಕ ತಪ್ಪದು ಕೂಡಲ ಚೆನ್ನಸಂಗಮದೇವಾ

೫

ವಚನಾನುಭವವ ಮಾಡುವಯ್ಯಗಳಿರಾ
ನಿಮಗೆ ವಚನ ಪ್ರಾಣಲಿಂಗವೋ ಅಲ್ಲದೇ ದಾಸೋಹ ಪ್ರಾಣ
ಲಿಂಗವೋ
ಆರೂಢವನೆ ಕಲಿತು ಅಂಗಸಂಗದಲ್ಲಿಪ್ಪುದು ಪ್ರಾಣಲಿಂಗವೋ
ಅಲ್ಲದೆ ದಾಸೋಹ ಪ್ರಾಣಲಿಂಗವೋ
ಬ್ರಹ್ಮವಿದ್ಯೆವ ಕಲಿತು ಬ್ರಹ್ಮವೆಂಬ ತೂಲದ ಮೇಲೆ ಕುಳ್ಳಿರ್ದು
ಆ ಬ್ರಹ್ಮ ವಿದ್ಯೆಯೋ ಪ್ರಾಣಲಿಂಗವೋ ಅಲ್ಲದೆ ದಾಸೋಹ
ಪ್ರಾಣಲಿಂಗವೋ
ಎಲ್ಲಾ ಮಾತುಗಳ ಹಲ್ಲಣಿಸಿಕೊಂಡು
ಬಲುಹುಲಿಯ ಬೆನ್ನಲ್ಲಿ ಬಪ್ಪ ತೆರನಂತೆ
ಬಲ್ಲವರಿಗೆ ಬಲ್ಲವರು ನಮ್ಮ ಜಂಗಮ ದಾಸೋಹಿಗಳು
ಕೂಡಲ ಸಂಗಮದೇವರರಿದಡೆ ನಿಮ್ಮ ಹಲ್ಲ ಕಳೆವರು ಕಾಣಿರೋ

೬

ಶ್ವಾನ ಮಡಿಕೆಯನಿಳುಹಿ ಬೋನವ ತಿಂದು ಏರಿಸಲರಿಯದಂತೆ
ನಾನು ಷಟ್ಸ್ಥಲವನೋದಿ ಏನು ಮಾಡುವೆನಯ್ಯಾ
ಅವಗುಣಂಗಳೆನ್ನ ಬಿಡದನ್ನಕ್ಕರ
ಕಾರ್ಯವುಳ್ಳಕರ್ತ ಜಂಗಮಲಿಂಗದಲ್ಲಿ ನಾನು ದಾಸೋಹವ
ಮಾಡಲರಿಯದೆ ಕೆಟ್ಟೆನು ಕೂಡಲಸಂಗಮದೇವಾ

೭

ವಚನದ ರಚನೆಯ ನುಡಿವ ಬರುಬಾಯ ಭುಂಜಕರು
ಎಲ್ಲಾ ಭಕ್ತರಪ್ಪರೇ
ಮಾಡುವ ದಾಸೋಹ ಕೈಂಕರ್ಯವುಳ್ಳ ಭಕ್ತಂಗೆ
ಅವಗುಣಂಗಳು ಹೊದ್ದಲಮ್ಮಾವಯ್ಯಾ
ಕಾಮ ಸಂಗಮಂ ಬಿಟ್ಟು ಕ್ರೋಧ ಕಂಬದ ಕೆಚ್ಚುಮುರಿದು
ಲೋಭರೊಂಪೆಯ ಕೆದರಿ ಮೋಹದ ಮುಳ್ಳಿನ ಮನೆಯ ಮೆಟ್ಟಿ
ಮನದದಚ್ಚನಳಿಸಿ ಮತ್ಸರ ಸರ್ಪನ ಸಮತೆಯ ಗಾರುಡದಿಂದ
ಗಾರುಪಡಿಸಿ
ಕರಣಾದಿ ಗುಣಂಗಳಿಚ್ಛೆಗೆ ಹರಿಯದೆ ಇಪ್ಪ ಭಕ್ತನ
ಕಾಯವೇ ಕೈಲಾಸವಯ್ಯಾ
ಮಾತಿಂಗೆ ಮಾತ ಕೊಟ್ಟು ಕೆಲದಾಡಿ
ತಾನಾಡಿತ್ತೇ ನಿಜವೆಂಬ ವಾಗ್ಜಾಲರು ಭಕ್ತರಪ್ಪರೇ
ಅವರುಪಜೀವಿಗಳು
ಹೇಮದಿಚ್ಛೆಗೆ ನುಡಿವ ಕಾಮರತಿಗೆಳಸುವ ಮೋಹದ
ಬಲೆಯಲ್ಲಿ ಬೀಳುವ
ಕೊಡುಪದುರಿಯ ಹೊದೆವ ಮತ್ಸರಿಸಿ ನರಕದಲ್ಲಿಳಿವವರು
ಭಕ್ತರಪ್ಪರೇ
ಆದಿಯಲ್ಲಿ ನಮ್ಮವರು ಹೊನ್ನು ಹೆಣ್ಣು ಮಣ್ಣು ಬಿಟ್ಟು ನಡೆದರೇ
ಇಲ್ಲವಾಗಿ ಅವಬಿಡದೊತ್ತಿ ತಲೆಯೆತ್ತಗುಡದೆ
ಅರ್ಥಪ್ರಾಣಾಭಿಮಾನದೊಡ್ಡುವಿಡಿದು ನುಡಿಯಡಗಿ
ಗುರುಲಿಂಗ ಜಂಗಮಕ್ಕೆ ದಾಸೋಹವಂ ಮಾಡಿ ಡಿಂಗರಿಗರಾದರು
ಹೀಗಲ್ಲದೆ ಮಾತಿನ ಭಂಡದ ಹಸರವನಿಕ್ಕಿ
ಮತ್ಸರಿಸಿ ಮುಕ್ತರಾದವರುಂಟೇ
ಇದುಕಾರಣ ದಾಸೋಹ ಕುಳವನರಿಯದ
ಕಲಕೇತ ಗೋಷ್ಠಿಯ ಭಂಡರನು
ನಮ್ಮ ಮಹಾಮಹಿಮ ಸೊಡ್ಡಳನಿರಿದಿರಿದು ಸುಟ್ಟು
ಕುರಿಯ ಬಸುರಲ್ಲಿಕ್ಕದೆ ಮಾಣ್ಬನೇ

## ದಾಸೋಹ ಪ್ರತಿಷ್ಠಾ ಸ್ಥಲ ೩೪

ಇಂತೀ ಪ್ರಕಾರದಿಂ ಗುರುಲಿಂಗ ಜಂಗಮಕ್ಕೆ ದಾಸೋಹವ ಮಾಡುವುದೇ ಮಹಾಜ್ಞಾನವು. ಉಳಿದಂತೆ ಗುರುಲಿಂಗಜಂಗಮಕ್ಕೆ ದಾಸೋಹವಿಲ್ಲದೇ ವಾಗ್ಜಾಲವನು ನುಡಿವವರು ಭಕ್ತಿಸ್ಥಲಕ್ಕೆ ಸಲ್ಲರೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು

ಇಂತಹ ಸದ್ಭಕ್ತನು ಗುರುಲಿಂಗಜಂಗಮಕ್ಕೆ ದಾಸೋಹವಿಲ್ಲದೆ ಸಂಸಾರಕ್ಕಾಗಿ ಬದುಕುವುದು ಅಪ್ರಯೋಜನವೆಂದು ನುಡಿದ ವಚನಂಗಳು

ಸೋಽಹಂ ದಾಸೋಹಮಾಖ್ಯಾತಂ ದ್ವಯೋರ್ನಾಮ ಪ್ರವರ್ತತಾಮ್ ।
ಏತದ್ಭಾವದ್ವಯಂ ನಾಸ್ತಿ ಪ್ರತಿಬಿಂಬ ಸಮನ್ವಿತಮ್ ॥೧॥

ಸೋಽಹಂ ದಾಸೋಹಮೆಂಬೆರಡು ನಾಮವಾಯ್ತು ಎರಡಕ್ಕೂ ಭೇದವಿಲ್ಲ. ಪ್ರತಿಬಿಂಬದೋಪಾದಿ ಎಂದರಿವುದು ಪ್ರತಿಬಿಂಬವೆಂದಡೆ ನೆರಳು ದೇಹಕ್ಕೆಯೂ ನೆರಳಿಗೆಯೂ ಭೇದವಿಲ್ಲ ಆ ಪ್ರಕಾರವೆಂದರಿವುದು

ಭಕ್ತೋ ದಾಸೋಹ ಭಾವಶ್ಚ ಸೋಹ ಭಾವಶ್ಚ ಜಂಗಮಃ ।
ಭಾವೇ ಭೇದದ್ವಯಂ ನಾಸ್ತಿ ದರ್ಪಣ ಪ್ರತಿಬಿಂಬವತ್ ॥೨॥

ಭಕ್ತನು ದಾಸೋಹಂಭಾವ ಜಂಗಮವು ಸೋಹಂಭಾವ ಈ ಎರಡಕ್ಕೂ ಭೇದವಿಲ್ಲ ಅದುಹೇಗೆಂದಡೆ ದರ್ಪಣದೊಳಗಣ ಪ್ರತಿಬಿಂಬದೋಪಾದಿ

ಸರ್ವಾಚಾರವಿಶೇಷೇಣ ಸರ್ವವ್ರತ ವಿಶೇಷತಃ
ಸರ್ವಶೀಲವಿಶೇಷೇಣ ಶಿವದಾಸೋಹಮುತ್ತಮಮ್ ॥೩॥

ಎಲ್ಲ ಆಚಾರ ವಿಶೇಷದಿಂದಲೂ ಎಲ್ಲ ವ್ರತ ವಿಶೇಷದಿಂದಲೂ ಎಲ್ಲ ಶೀಲವಿಶೇಷದಿಂದಲೂ ಗುರುಲಿಂಗಜಂಗಮಕ್ಕೆ ದಾಸೋಹವ ಮಾಡುವುದೇ ಶ್ರೇಷ್ಠವು

## ವಚನಗಳು

೧

ವೇದವನೋದಿ ಕೇಳಿ ವೇದ ಮರ್ಮವನರಿದ ಫಲ ದಾಸೋಹವಯ್ಯಾ
ಶಾಸ್ತ್ರವನೋದಿ ಕೇಳಿ ಶಾಸ್ತ್ರ ಮರ್ಮವನರಿದ ಫಲ ದಾಸೋಹವಯ್ಯಾ
ಪುರಾಣವನೋದಿ ಕೇಳಿ ಪುರಾಣಮರ್ಮವನರಿದ ಫಲ
ದಾಸೋಹವಯ್ಯಾ
ಆಗಮವನೋದಿ ಕೇಳಿ ಆಗಮಮರ್ಮವನರಿದ ಫಲ
ದಾಸೋಹವಯ್ಯಾ
ಪುರಾತನರ ವಚನವನೋದಿ ಕೇಳಿ ಪ್ರಸಂಗಾನುಭಾವದಲ್ಲಿದ್ದು
ಅರಿದ ಫಲ ದಾಸೋಹವಯ್ಯಾ
ವೇದ ಶಾಸ್ತ್ರ ಪುರಾಣಂಗಳ ಪುರಾತನರ ವಚನಪ್ರಸಂಗವನರಿದು
ದಾಸೋಹವಿಲ್ಲದಿರ್ದಡೆ ಆ ಓದು ಗಿಣಿಯೋದಿನಂತೆ
ಆ ಕೇಳು ಮರುಳಕೇಳುವೆಯಂತೆ ಅವನೇತಕ್ಕೆ ಬಾತೆಯುವಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೨

ವಂಚಿಸುವ ಸತಿಸುತ ಬಂಧುಗಳು ಮೊದಲಾದ ಲೋಕವ ನಂಬಿ
ನಿರ್ವಂಚಕರಪ್ಪ ಗುರುಲಿಂಗ ಜಂಗಮವ ವಂಚಿಸಿ
ನರಕಕ್ಕಿಳಿವವರ ನಾನೇನೆಂಬೆನಯ್ಯಾ ಅಕ್ಕಟಕ್ಕಟಾ
ಹೀಗೆಯೇ ಶಿವಾಚಾರ ಹೀಗೆಯೇ ಸದಾಚಾರ ಹೀಗೆಯೇ ಭೃತ್ಯಾಚಾರ
ಭಕ್ತಿಯುಕ್ತಿಯನರಿಯದೆ ತನುಮನಧನಂಗಳು ಕೆಟ್ಟು
ಹೋದವೆಂಬ
ಯುಕ್ತಿಯನರಿಯದೇ ಮರ್ಮವನರಿದು ವಂಚಿಸಿ
ನಿರ್ವಂಚಕರಾಗಿ ಗುರುಲಿಂಗಜಂಗಮಕ್ಕೆ ದಾಸೋಹವ ಮಾಡಲು
ತನು ಕೆಡದು ಮನಕೆಡದು ಧನಕೆಡದು
ಭಕ್ತಿಯುಂಟು ಯುಕ್ತಿಯುಂಟು ಮುಕ್ತಿಯುಂಟು
ಇದು ಸತ್ಯ ಶಿವಬಲ್ಲ ಶಿವನಾಣೆ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೩

ನಿರುಪಾಧಿಕನಾಗಿ ನಿರ್ವಂಚಕತ್ವದಿಂದ ದಾಸೋಹವ ಮಾಡಿ
ಪರಿಣಾಮದಿಂದ ನಿತ್ಯದಾಸೋಹವೆನಿಸಿಪಡೆ
ಆ ದಾಸೋಹವೇ ಸದ್ಭಕ್ತನು ಆತನೇ ಮಾಹೇಶ್ವರನು
ಆತನೇ ಪ್ರಸಾದಿ ಆತನೇ ಪ್ರಾಣಲಿಂಗಿ ಆತನೇ ಶರಣ
ಆತನೇ ಐಕ್ಯನು ಆತನೇ ಇಹಲೋಕ ಪರಲೋಕ ಪೂಜ್ಯನು
ಆತನೇ ಶ್ರೇಷ್ಠ ಆತನೇ ವಿದ್ವಾಂಸ ಆತನೇ ಜ್ಞಾನಿ
ಶ್ರೀಗುರುಲಿಂಗ ಜಂಗಮವು ಒಂದೇ ಎಂದು ಭಾವಿಸಿದ ನಿರ್ಭಾವಿಯೇ
ವಂಚಕನು ದಾಸೋಹವ ಮಾಡಲರಿಯದ ಅಹಂಕಾರಿ
ಅಭಾಸನು ಅಪೂಜ್ಯನು ಭಕ್ತನಲ್ಲ ಮಾಹೇಶ್ವರನಲ್ಲ
ಪ್ರಸಾದಿಯಲ್ಲ ಪ್ರಾಣಲಿಂಗಿಯಲ್ಲ ಶರಣನಲ್ಲ ಐಕ್ಯನಲ್ಲ
ಆತನೇ ಮೂರ್ಖನು ಆತನೇ ಅಜ್ಞಾನಿ
ಆತನೇತಕ್ಕೆಯೂ ಬಾತೆಯಲ್ಲವಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೪

ಸದ್ಭಕ್ತನು ಶ್ರೀಗುರುಲಿಂಗ ಜಂಗಮಕ್ಕೆ
ತನುಮನಧನಪ್ರಾಣಾದಿಗಳನರ್ಪಿಸಿ
ಸಕಲ ಸಾಕಾರ ದ್ರವ್ಯಾದಿಗಳೆಲ್ಲವೂ ಶಿವನ ಸೊಮ್ಮಾಗಿ
ಅದೆಂತೆಂದಡೆ ಋಗ್ವೇದದಲ್ಲಿ—

> ಶಿವೋ ದಾತಾ ಶಿವೋ ಭೋಕ್ತಾ ಶಿವಃ ಸರ್ವಮಿದಂ ಜಗತ್
> ಶಿವೋ ಯಜತಿ ಸರ್ವಸ್ವಂ ಯಃ ಶಿವಃ ಸೋಽಹಮೇವ ಚ ॥

ಎಂದುದಾಗಿ ಇದನರಿತು ದಾತೃಭೋಕ್ತೃಶಿವನೆಂದು
ಅಹಂ ಮಮತೆಗಳಡಗೆ ಸ್ವಾನುಭಾವವಳವಟ್ಟು
ಬಾಗಿಲುಗಾಹಿಯಾಗಿ ದಾಸೋಹವಂ ಮಾಡುವುದು
ಇದು ಉತ್ತಮ ಕ್ರಿಯೆಯು
ಇದು ಲಿಂಗದೊಡನೆ ಹುಟ್ಟಿ ಲಿಂಗದೊಡನೆ ಬೆಳೆದು
ಲಿಂಗದೊಡನೆ ಲೀಯವಹ ಮಹಾಲಿಂಗಾಂಗಿಗಲ್ಲದೆ ಸಾಧ್ಯವಾಗದು

ಇದು ಅಳವಡದಿರ್ದಡೆ ಸದ್ಭಕ್ತನು
ಶ್ರೀಗುರುಲಿಂಗ ಜಂಗಮಕ್ಕೆ ತನುಮನಧನ ಪ್ರಾಣ ಮುಂತಾಗಿ
ಹೊನ್ನು ಹೆಣ್ಣು ಮಣ್ಣಿನಲ್ಲಿ ವಂಚನೆಯಿಲ್ಲದೆ
ಸದ್ಭಕ್ತಿಯಿಂದ ದಾಸೋಹವಂ ಮಾಡುವುದು ಇದು ಮಧ್ಯಮ
ಕ್ರಿಯೆಯು
ಇದು ಸಾಮಾನ್ಯರಿಗಳವಡದು ಇದು ಅಸಾಧ್ಯವು
ಇದು ಅಳವಡದಿರ್ದಡೆ ಸದ್ಭಕ್ತನು
ತನ್ನ ತನುಮನ ಪ್ರಾಣಂಗಳು ಬಳಲಿ
ತನಗೆ ಪ್ರಿಯವಾದ ಪುತ್ರ ಮಿತ್ರ ಕಳತ್ರಾದಿಗಳಿಗೆ
ಹೇಗೆ ಸಕಲದ್ರವ್ಯಂಗಳಂ ಕೊಡುವನೋ ಹಾಗಾದರೂ
ಶ್ರೀಗುರು ಲಿಂಗ ಜಂಗಮಕ್ಕೆ ಸ್ನೇಹದಿಂದ
ದಾಸೋಹವಂ ಮಾಡುವುದು ಇದು ಕನಿಷ್ಠಕ್ರಿಯೆಯು
ಇದು ತಾನು ಮಹಾಜ್ಞಾನಪುರುಷರಿಗಲ್ಲದಳವಡದು
ಇದು ಅಳವಡದಿರ್ದಡೆ ಶ್ರೀಗುರುಲಿಂಗಜಂಗಮಕ್ಕೆ
ಶಕ್ತ್ಯಾನುಸಾರದಿಂ ಮಾಡುವುದು ಇದು ನಿಕೃಷ್ಟ ಕ್ರಿಯೆಯು

> ಶ್ರೂಯತಾಂ ಧರ್ಮ ಸರ್ವತ್ರ ಶ್ರುತ್ವಾ ಚೈವಾವಧಾರ್ಯತಾಮ್ ।
> ಆತ್ಮನಃ ಪ್ರತಿಕೂಲಂ ಚ ಪರೀಕ್ಷ್ಯಾನಂದಮಾಚರೇತ್ ॥

ಎಂದುದಾಗಿ ಇದನರಿತು ತನ್ನಂತೆ ಭಾವಿಸಿಯಾದಡೆಯೂ
ದಾಸೋಹಮಾಡಿ ಪ್ರಸನ್ನತೆಯ ಪಡೆವುದೇ ಸದ್ಭಕ್ತಂಗೆ
ಪಥವುನೋಡಾ
ಇಂತಪ್ಪ ಉತ್ತಮ ಮಧ್ಯಮ ಕನಿಷ್ಠ ನಿಕೃಷ್ಟವೆಂಬ
ಈ ನಾಲ್ಕು ಪರ್ಯಾಯದಲ್ಲಾದಡೆಯೂ ಒಂದು ಪರ್ಯಾಯದಲ್ಲಿ
ಭಾವಿಸಿಕೊಂಡು
ತನುಮನ ಧನವನಿತ್ತು ಸ್ನೇಹದಿಂದ ದಾಸೋಹವ ಮಾಡಿ
ಪ್ರಸಾದವ ಪಡೆದು ಭೋಗಿಸಿ ಭಕ್ತರಾಗಬೇಕು
ಈ ಪ್ರಕಾರದಿಂದಲ್ಲದೆ ಮುಕ್ತಿಯಿಲ್ಲ
ಈ ಚತುರ್ವಿಧ ಕ್ರಿಯೆಗಳೊಳಗೆ ಆವುದನೂ ಮಾಡದೆ

ದುಷ್ಕ್ರಿಯೆಯಲ್ಲಿ ವರ್ತಿಸುತ್ತ ದುರ್ಭಾವದಿಂದ
ಗುರುಲಿಂಗಜಂಗಮುನ ವಿಶ್ವಾಸವಂ ಮಾಡಿ
ದಾಸೋಹವಿಲ್ಲದೆ ತನ್ನೊಡಲನೆ ಹೊರೆದಡೆ
ಅವನು ಸದ್ಭಕ್ತರೊಳಗೆ ಸಲ್ಲ ಅವನಿಗೆ ಪ್ರಸಾದವಿಲ್ಲ
ಪ್ರಸಾದವಿಲ್ಲವಾಗಿ ಮುಕ್ತಿಯಿಲ್ಲ ಅವನು ಉಭಯಭ್ರಷ್ಟ
ಇದನರಿತು ತನ್ನಂತೆ ಭಾವಿಸಿ ಶ್ರೀಗುರುಲಿಂಗಜಂಗಮುಕ್ಕೆ
ವಿಶ್ವಾಸದಿಂ ದಾಸೋಹವ ಮಾಡಲು
ಇಹಸಿದ್ಧಿ ಪರಸಿದ್ಧಿ ಸರ್ವಸಿದ್ಧಿಯುಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ಕಾಮ್ಯ ಪ್ರತಿಷ್ಠಾ ಸ್ಥಲ ೩೫.

ಇಂತೀ ಪ್ರಕಾರದಿಂ ಸದ್ಭಕ್ತನು ಗುರುಲಿಂಗಜಂಗಮಕ್ಕೆ ತನುಮನ ಧನಂಗಳಂ ಕೊಟ್ಟು ಅಹಂಭಾವವಳಿದು ವಿಶ್ವಾಸದಿಂದ ದಾಸೋಹವ ಮಾಡಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಆ ಸದ್ಭಕ್ತರು ಗುರುಲಿಂಗಜಂಗಮಕ್ಕೆ ದಾಸೋಹವ ಮಾಡೆ ಕರ್ಮಫಲ ಸಿದ್ಧಿಸುವದೆಂದು ನುಡಿದ ವಚನಂಗಳು.

ಶಿವಧರ್ಮೇ—

ದಾಸೋಹಯುಕ್ತಭಕ್ತಸ್ಯ ಜಪಧ್ಯಾನಾದಿ ಪೂಜನಾತ್ ।
ಕ್ರಿಯಾಕರ್ಮಾದಿ ತತ್ಸರ್ವಂ ಫಲಸಿದ್ಧಿರ್ನ ಸಂಶಯಃ ॥೧॥

ದಾಸೋಹದಿಂದ ಯುಕ್ತನಾದ ಭಕ್ತನು ಜಪಧ್ಯಾನಾದಿ ಪೂಜಾ ಕ್ರಿಯಾ ಕರ್ಮವು ಸಫಲವಾಗಿ ಸಿದ್ಧಿಸುವುದು ಸಂಶಯವಿಲ್ಲ.

ಅನಿಮಿತ್ತ ನಿಮಿತ್ತಂ ಚ ಉಪಾಧಿ ನಿರುಪಾಧಿಕಮ್
ದಾಸೋಹಯುಕ್ತಕರ್ಮಾದೇರ್ಯಥಾ ಕರ್ಮ ತಥಾ ಫಲಮ್ ॥೨॥

ದಾಸೋಹದಲ್ಲಿ ಯುಕ್ತವಾದ ಕರ್ಮವುಳ್ಳಾತಂಗೆ ಅನಿಮಿತ್ತ ನಿಮಿತ್ತಗಳೆಂಬವು ಇಲ್ಲ. ಉಪಾಧಿ ನಿರುಪಾಧಿಗಳೂ ಇಲ್ಲ, ದಾಸೋಹದಿಂದ ಸತ್ಕರ್ಮ ಫಲವನ್ನೈದುವನು.

ವಾಯವೀಯ ಸಂಹಿತಾಯಾಮ್—

ತಸ್ಯ ಚಿಂತಾಮಣಿರ್ಗೇಹೇ ತಸ್ಯ ಕಲ್ಪದ್ರುಮಃ ಕರೇ ।
ಕುಬೇರಃ ಕಿಂಕರಸ್ತಸ್ಯ ಯಃ ಕುರ್ಯಾತ್ಸ ಶಿವೇ ಸ್ಥಿತಃ ॥೩॥

ಆವಂಗೆ ಗುರುಲಿಂಗಜಂಗಮ ದಾಸೋಹವುಂಟೋ ಆತನ ಮನೆಯಲ್ಲಿ ಚಿಂತಾಮಣಿಯುಂಟು ಆತನ ಕೈಯಲ್ಲಿ ಕಲ್ಪತರುವಿಹುದು ಆತಂಗೆ ಕುಬೇರ ಕಿಂಕರವಾಗಿಹನು ಆತನು ಶಿವನಲ್ಲಿಹನು.

ಸ್ವರ್ಗಾರ್ಥಿನಾಂ ಮುಮುಕ್ಷೂಣಾಂ ಬ್ರಹ್ಮತ್ವಸ್ಯಾಪಿ ಕಾಂಕ್ಷಿಣಾಮ್ ।
ಭಕ್ತಿರೇವ ವಿರೂಪಾಕ್ಷೇ ನಾನ್ಯಃ ಪಂಥಾ ಇತಿಶ್ರುತಿಃ ॥೪॥

ಸ್ವರ್ಗಾರ್ಥಿಗಳಿಗೆಯೂ ಮೋಕ್ಷಾರ್ಥಿಗಳಿಗೆಯೂ ಬ್ರಹ್ಮಾದಿಪದವಿಯ ಕಾಮಿತರಿಗೆಯೂ ಶಿವಭಕ್ತಿ ಮಾರ್ಗವಲ್ಲದೇ ಬೇರೆ ಬಟ್ಟೆಯಿಲ್ಲೆಂದುದು ವೇದ.

## ವಚನಗಳು

೧

ಶ್ರೀಗುರುಲಿಂಗಜಂಗಮಕ್ಕೆ ಪೂಜಾ ಅರ್ಚನದಾಸೋಹಂಗಳನು
ಧರ್ಮವ ಕಾಮಿಸಿ ಮಾಡಿದಡೆ ಧರ್ಮವಪ್ಪುದು
ಅರ್ಥವ ಕಾಮಿಸಿ ಮಾಡಿದಡೆ ಅರ್ಥವಪ್ಪುದು
ಕಾಮವ ಕಾಮಿಸಿ ಮಾಡಿದಡೆ ಕಾಮವಪ್ಪುದು
ಮೋಕ್ಷವ ಕಾಮಿಸಿ ಮಾಡಿದಡೆ ಮೋಕ್ಷದೊರಕೊಂಬುದು
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ
ಪದಂಗಳ ಕಾಮಿಸಿ ಮಾಡಿದಡೆ ಚತುರ್ವಿಧ ಪದಂಗಳಪ್ಪುವು
ಕಾಮಧೇನುವ ಕಾಮಿಸಿ ಮಾಡಿದಡೆ ಕಾಮಧೇನು ದೊರಕೊಂಬುದು
ಕಲ್ಪವೃಕ್ಷವ ಕಾಮಿಸಿ ಮಾಡಿದಡೆ ಕಲ್ಪವೃಕ್ಷ ದೊರಕೊಂಬುದು
ಚಿಂತಾಮಣಿಯ ಕಾಮಿಸಿ ಮಾಡಿದಡೆ ಚಿಂತಾಮಣಿ
ದೊರಕೊಂಬುದು
ಪರುಷವ ಕಾಮಿಸಿ ಮಾಡಿದಡೆ ಪರುಷ ದೊರಕೊಂಬುದು
ಆವುದ ಕಾಮಿಸಿ ಮಾಡಿದಡೆಯೂ ಆ ಕಾಮಿತ ಫಲವಪ್ಪುದು
ಎಲೆ ಪ್ರಭುವೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಕೂಡಲ
ಚೆನ್ನಸಂಗಮದೇವಾ

೨

ಕೊಡುವ ಲಿಂಗವ ಬೇಡಿಕೊಳ್ಳಲರಿಯದೆ
ಕೊಡಲರಿಯದ ಮಾನವರನಾಶೆಮಾಡಿ ಕೆಡಬೇಡ ಕೆಡಬೇಡ
ಕೇಳಿರಂಣಾ ಪುರಾತನರು ಗುರುಲಿಂಗಜಂಗಮವನರ್ಚಿಸಿ
ದಾಸೋಹವ ಮಾಡಿ ಕೇವಲ ವಿಶ್ವಾಸದಿಂದ ಲಿಂಗವನೆ ಬೇಡಿ
ಲಿಂಗದಲ್ಲಿ ವರವ ಪಡೆದುದಕ್ಕೆ ದೃಷ್ಟವ ನೋಡಿರೇ

ಅದೆಂತೆಂದಡೆ ಲಿಂಗವು ಮಾರ್ಕಂಡೇಯ ಮಳೆಯರಾಜಂಗೆ
ಆಯುಷ್ಯವ ಕೊಟ್ಟ ನೋಡಿರೇ
ಸುರಗಿಯ ಚೌಡಯ್ಯ ಬಸವರಾಜದೇವರು ಹೋದ ಪ್ರಾಣಂಗಳ
ಬೇಡಿದಡೆ ಕೊಟ್ಟ ನೋಡಿರೇ
ಇನ್ನು ಲಿಂಗವು ಭಾಷೆಯ ಕೊಟ್ಟುದಕ್ಕೆ ದೃಷ್ಟವ ನೋಡಿರೇ
ಚೋಳಂಗೆ ಹೊನ್ನ ಮಳೆಯ ಕರಿಸಿದ
ದಾಸಂಗೆ ತವನಿಧಿಯ ಕೊಟ್ಟ
ದೇವದಾನವ ಮಾನವರಿಗೆಯೂ ಅವರವರು ಬೇಡಿದ
ಪದಂಗಳ ಕೊಟ್ಟ ನೋಡಿರೇ
ಇಂತಿವು ಮೊದಲಾದ ಆಯುಷ್ಯ ಭಾಷೆಯ ಪ್ರಾಣಂಗಳು
ಮತ್ತೇನೇನು ಪದಂಗಳಂ ಬೇಡಿದರೆ
ಕೊಡುವಂತಹ ಮಹಾದಾನಿಯನೇ ಬೇಡಿಕೊಳ್ಳಿರೇ
ಅನಾಥನಾಥನನು ಅನಾಥ ಬಂಧುವನು ಕರುಣಾಕರನನು
ವರಮೂರ್ತಿಯನು ದಾನಗುಣಶೀಲನನು
ಭಕ್ತದೇಹಿಕ ದೇವನನು ಭಕ್ತದೇಹಿಕ ಚಿಂತಾಮಣಿಯನು
ಭಕ್ತದೇಹಿಕ ಕಾಮಧೇನುವನು ಭಕ್ತದೇಹಿಕ ಕಲ್ಪವೃಕ್ಷವನು
ಬೇಡಿಕೊಳ್ಳಿರೇ ನಮ್ಮ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರನನು

## ಕಾಮ್ಯನಿರಸನ ಸ್ಥಲ ೩೬

ಇಂತೀ ಪ್ರಕಾರದಿಂ ಸದ್ಭಕ್ತರು ಗುರುಲಿಂಗ ಜಂಗಮಕ್ಕೆ ವಿಶ್ವಾಸದಿಂ ದಾಸೋಹ ಮಾಡಿದರೆ ಇಷ್ಟಾರ್ಥಸಿದ್ಧಿಯಪ್ಪುದೆಂಬುದಂ ಪ್ರತಿಷ್ಠೆಯುಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಸದ್ಭಕ್ತರು ಗುರುಲಿಂಗಜಂಗಮಕ್ಕೆ ದಾಸೋಹವಂ ಮಾಡುವಲ್ಲಿ ಫಲಪದಂಗಳಂ ಬಯಸುವುದು ಅಕ್ರಮವೆಂದು ನುಡಿದ ವಚನಂಗಳು.

ಶಿವಧರ್ಮೇ....

ಸಾಲೋಕ್ಯಮಪಿ ಸಾಮೀಪ್ಯ ಸಾರೂಪ್ಯಂ ಚ ಸಮುಜ್ಯತಾಮ್ ।
ಸಕೃತ್ಕಾಂಕ್ಷಿತ ಭಕ್ತಸ್ಯ ರೌರವಂ ನರಕಂ ವ್ರಜೇತ್ ॥೧॥

ಸಾಲೋಕ ಸಾಮೀಪ್ಯ ಸಾರೂಪ್ಯ ಸಾಯುಜ್ಯವೆಂಬ ಈ ನಾಲ್ಕು ಪದಂಗಳನು ಒಂದು ಬಾರಿಯಾದರೂ ಭಕ್ತನಾದಾತನು ;ಬಯಸಲು ನರಕವನ್ನೈದುವನು.

ನ ನಾಕಪೃಷ್ಠಂ ನ ಚ ದೇವರಾಜ್ಯಂ ನ ಬ್ರಹ್ಮಲೋಕಂ ನ ಚ ವಿಷ್ಣುಲೋಕಮ್
ನ ಧರ್ಮಕಾಮಾನಖಿಲಾನ್ವೃಣೋಮಿ ರಹಸ್ಯದಾಸತ್ವಮಹಂ ವೃಣೋಮಿ ॥೨॥

ಸ್ವರ್ಗಪ್ರದೇಶವನ್ನು ಬಯಸುವಾತನಲ್ಲ ದೇವತೆಗಳ ರಾಜ್ಯವನು ಬಯಸುವಾತನಲ್ಲ ಬ್ರಹ್ಮಲೋಕವ ಬಯಸುವಾತನಲ್ಲ ವಿಷ್ಣುಲೋಕವ ಬಯಸುವಾತನಲ್ಲ ಧರ್ಮ ಕಾಮ ಮೊದಲಾದವನ್ನು ಬಯಸುವಾತನಲ್ಲ ರಹಸ್ಯವಾದ ದಾಸ್ಯತ್ವವನೇ ನಾನು ಬಯಸುತ್ತಿರುವೆನು.

ಕ್ಷಣಂ ಕ್ಷಣಂ ಜನ್ಮವಿನಾಶವಂತಸ್ತಥಾ ಮನುಷ್ಯಾಃ ಪ್ರವದಂತಿ ದೇವಾಃ ।
ದೇವಾದಿವಿಷ್ಠಾ ಮನುಜಾಭುವಿಸ್ಥಾಃ ಸರ್ವತ್ರಸಂಸ್ಥಾಃ ಶಿವಯೋಗನಿಷ್ಠಾಃ ॥೩॥

ಪ್ರತಿಕ್ಷಣದಲ್ಲಿ ಜನನ ಮರಣಗಳುಳ್ಳ ಮನುಷ್ಯರು ಭೂಲೋಕದಲ್ಲಿಹರು. ಈ ಮನುಷ್ಯರುಗಳ ಹಾಗೆ ದೇವತೆಗಳು ಸ್ವರ್ಗಲೋಕದಲ್ಲಿಹರು; ಶಿವಯೋಗನಿಷ್ಠರಾದವರು ಎಲ್ಲ ಠಾವಿನಲ್ಲಿಯೂ ಇಹರು.

ಶಿವಧರ್ಮೋತ್ತರೇ—

> ಸ್ವರ್ಗಃ ಪಾದತಲೇ ತಸ್ಯ ಕರಸ್ಥಾಃ ಸರ್ವಸಿದ್ಧಯಃ ।
> ಸುಖಸ್ವೇಚ್ಛಾವತಾತಶ್ಚ ಮುಕ್ತೋ ಮಾಹೆಶ್ವರೋ ಜನಃ ॥೪॥

ಸ್ವರ್ಗವೆಂಬುದು ಶಿವಭಕ್ತನ ಪಾದದಡಿಯಲ್ಲಿಹದು. ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ,ಧರ್ಮಾರ್ಥ ಕಾಮಮೋಕ್ಷವೆಂಬವೆಲ್ಲವೂ ಕರಸ್ಥಲದಲ್ಲಿಹವು, ತಮ್ಮಿಚ್ಛೆಯವರಾಗಿ ಮಾಹೇಶ್ವರರು ಸಧ್ಯೋನ್ಮುಕ್ತರು.

## ವಚನಗಳು

೧

ಅಮೃತಕ್ಕೆ ಹಸಿವುಂಟೇ ಜಲಕ್ಕೆ ತೃಷೆಯುಂಟೇ
ಮಹಾಘನ ಪುರುಷಂಗೆ ವಿಷಯವುಂಟೇ
ಸದ್ಗುರುಕಾರುಣ್ಯವಂ ಪಡೆದು ಲಿಂಗಾರ್ಚನೆಯಂ ಮಾಡುವ
ಮಹಾಶರಣಂಗೆ ಮುಕ್ತಿಯ ಬಯಕೆಯುಂಟೇ
ಅವರುಗಳಿಗೆ ಅದು ಸ್ವಯಂಭು ಸಹಜ ಸ್ವಭಾವ
ಇನ್ನೂ ತೃಪ್ತಿ ಆಪ್ಯಾಯನ ಮುಕ್ತಿ ಅರಸಲುಂಟೇ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೨

ಕಾಮಿಸುವ ವಸ್ತು ಕರಸ್ಥಲಕ್ಕೆ ಬಂದ ಬಳಿಕ ಕಾಮಿಸಲೇನುಂಟು
ಇನ್ನೇನ ಕಾಮಿಸುವೆನಯ್ಯಾ ಅದೆಂತೆಂದಡೆ—

> "ಓಂ ನಮೋ ಹಿರಣ್ಯ ಬಾಹವೇ ಹಿರಣ್ಯವರ್ಣಾಯ
> ಹಿರಣ್ಯರೂಪಾಯ ಹಿರಣ್ಯಪತಯೇ" ಎಂಬ ವಸ್ತು
> "ಯೋ ವೈರುದ್ರಶ್ಚ ಭಗವಾನಯಂ ಚಾಮೃತಮ್‌" ಎಂಬ ವಸ್ತು

ಸುಖ ಸ್ವರೂಪನು ಅಭಯಹಸ್ತನು ವರದ ಹಸ್ತನು ಶಾಂತನು
ಕರುಣಿ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರ ಲಿಂಗವು
ಕರಸ್ಥಲಕ್ಕೆ ಬಂದ ಬಳಿಕ ಇನ್ನೇನ ಕಾಮಿಸಲುಂಟು

೩

ನಾನು ಕಾಮಿಸುತಿಪ್ಪ ವಸ್ತು ಸಾಲೋಕ್ಯವಿದೆ
ಸಾಮೀಪ್ಯವಿದೆ ಸಾರೂಪ್ಯವಿದೆ ಸಾಯುಜ್ಯವಿದೆ
ಧರ್ಮವಿದೆ ಅರ್ಥವಿದೆ ಕಾಮವಿದೆ ಮೋಕ್ಷವಿದೆ
ಏನೇನ ನಾನರಸುವ ಬಯಕೆಯೆಲ್ಲವೂ ಇದೆ
ಎನ್ನ ಧ್ಯಾನ ಜಪತಪದಿಂದ ಸಿದ್ಧಿಯಪ್ಪ ಸಿದ್ಧಿಯೆಲ್ಲವೂ ಇದೆ ನೋಡಾ
ನಾನೇನ ಇಚ್ಛೈಸುವ ಇಚ್ಛೆಯೆಲ್ಲವೂ ಇದೆ ನೋಡಾ
ಶ್ರೀಗುರುವಿನ ಕಾರುಣ್ಯದಿಂದ ಮಹಾಘನವಸ್ತು ಕರಸ್ಥಲಕ್ಕೆ
ಬಂದಬಳಿಕ ಸರ್ವಸುಖಂಗಳೆಲ್ಲವೂ ಇದೆ, ಇದೆ ನೋಡಾ
ಇನ್ನು ಎನ್ನ ಬಯಲ ಭ್ರಮೆಯೊಳಗೆ ಹೋಗದಿರಯ್ಯಾ
ನಿಮ್ಮ ಬೇಡಿಕೊಂಬೆನು ನಿಮಗೆ ಎನ್ನಾಣೆ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೪

ಕ್ಷೀರಸಾಗರದೊಳಗಿದ್ದ ಹಂಸೆ ಹಾಲ ಬಯಸಲುಂಟೇ
ಪುಷ್ಪದೊಳಗಿರ್ದ ತುಂಬಿ ಪರಿಮಳವನರಸಲುಂಟೇ
ಕಡಲೊಳಗಿರ್ದ ಕಪ್ಪೆ ಜಲವ ಬಯಸಲುಂಟೇ
ಇದೆಂತಯ್ಯಾ ತಾಲಿಂಗದೊಳಗಿದ್ದು
ಬೇರೆ ಇತರ ಕಾಮ್ಯದೊಳಗಿರ್ಪ
ಭ್ರಾಂತರನೇನೆಂಬೆನಯ್ಯಾ ಗುಹೇಶ್ವರಾ

೫

ಸ್ತನಾಮೃತವ ಸೇವಿಸುವ ಶಿಶು ಸಕ್ಕರೆಯನಿಚ್ಛೈಸುವುದೇ
ಪುರುಷ ದೊರಕೊಂಡ ಪುರುಷನು ಜಲಗರ
ತೊಳೆಯಲಿಚ್ಛೈಸುವನೇ
ದಾಸೋಹವ ಮಾಡುವ ಭಕ್ತನು ಮುಕ್ತಿಯನಿಚ್ಛೈಸುವನೇ
ಇವರು ಮೂವರಿಂಗಿನ್ನಾವುದೂ ಇಚ್ಛೆಯಿಲ್ಲ
ರುಚಿ ಪದಾರ್ಥವಿದ್ದಂತೆ ಇದ್ದಪರಿಯ ಸಹಜಸುಖವಯ್ಯಾ
ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ

೬

ಗೃಹ ಗ್ರಾಮ ನಾಡು ದೇಶಂಗಳೆಂಬ
ಆಗು ತಾಗುವಿಚ್ಛೆಗೆ ಭೂಮಿಯಾಶೆ
ಅಲ್ಪಭೂಮಿ ಅಲ್ಪಂಗಲ್ಲದೆ
ಪಂಚಾ ಶತ್ಕೋಟಿ ಭೂಮಿಯುಸೊಳಕೊಂಡುದು ಬ್ರಹ್ಮಾಂಡ
ಅಂತಹ ಬ್ರಹ್ಮಾಂಡವನಾಭರಣವ ಮಾಡಿಕೊಂಡಿಪ್ಪ ಆದಿಶೇಷನು
ಅಂತಹ ಆದಿಶೇಷಾಭರಣದಿಂ ಪೂಜೆಗೊಂಡಿಪ್ಪ-
ಲಿಂಗವೇ ಪ್ರಾಣವಾಗಿ ಭೂಮಿಯಲ್ಲಿ ನಿಂದ
ಲಿಂಗೈಕ್ಯಂಗೆ ಭೂಮಿಯಕಾಂಕ್ಷೆಯಿನ್ನೆಲ್ಲಿಯದೋ ಅಯ್ಯಾ
ಕ್ಷೋಣಿ ಕೋಟಿ ಕ್ಷಿತಿಪತಿಯೆಂತರ ಧನವ ಪಡೆವ
ತಾಗುನಿರೋಧ ಆಗುವಿಚ್ಛೆಗೆ ಸುಖದುಃಖಂಗಳು
ತನುಮನಧನಕಾಂಕ್ಷೆ ಅಲ್ಪಂಗಲ್ಲದೆ
ಮಹಾಲಕ್ಷದೊಡೆಯನಾಗಿ ಮಹದೈಶ್ವರ್ಯ ಸಂಪನ್ನನಾಗಿ
ಹಿರಣ್ಯಪತಿಯೇ ಕಾಯವಾಗಿ ಹಿರಣ್ಯಪತಿಯೇ ಪ್ರಾಣವಾಗಿರ್ದ
ಮಹಾಲಿಂಗೈಕ್ಯಂಗೆ ಧನದ ಕಾಂಕ್ಷೆಯಿನ್ನೆಲ್ಲಿಯದಯ್ಯಾ
ಉತ್ತಮ ಮಧ್ಯಮ ಕನಿಷ್ಠ ನಿಕೃಷ್ಟವೆಂಬ
ಜಾತಿ ವಿಕಾರಂಗಳ ಮೇರೆದಪ್ಪಿದ
ದಾಸಿವೇಶಿ ಪರಸ್ತ್ರೀ ವಿಧವೆ ಕನ್ನಿಕೆಯರಲ್ಲಿ ಕಂಗೆಟ್ಟು
ವರ್ತಿಸುವ ಪಾಪದೃಷ್ಟಿಯ ಕ್ರೂರಾತ್ಮಂಗೆ ಹೆಣ್ಣಿನ ಚಿಂತೆಯಲ್ಲದೆ
ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿಯ ವರ್ತನವ ಮೀರಿದ
ಮಹಾಶಕ್ತಿ ತಾನಾಗಿ ಮಹಾಪುರಷನಲ್ಲಿ ಮಹಾಸಂತೋಷವುಳ್ಳ
ಮಹಾಶರಣಂಗೆ ಹೆಣ್ಣಿನ ಕಾಂಕ್ಷೆಯಿನ್ನೆಲ್ಲಿಯದಯ್ಯಾ
ವೇದಶಾಸ್ತ್ರ ಪುರಾಣಾಗಮಾದಿಯಾದ
ಅಷ್ಟಾದಶ ವಿದ್ಯೆಂಗಳನೋದುವ ಹೇಳುವ ಕೇಳುವ ವಿಚಾರಿಸುವ
ವಿದ್ಯೆದ ಬಯಕೆ ಅಲ್ಪಮತಿಯಲ್ಪಂಗಲ್ಲದೆ
ವಾಗ್ದೇವತೆಗೆ ಅಧಿದೈವವಪ್ಪ ಮಹಾಘನವಿದ್ಯವೇ ದೇಹವಪ್ಪ
ವಿದ್ಯಾರೂಪನು ಮಹಾದೇವನೇ ಕಾಯವಾಗಿ

ಆ ಮಹಾದೇವನೇ ಜಿಹ್ವೆಯಾಗಿ
ಆ ಮಹಾ ವಾಗ್ದೇವತೆಯೇ ಮನವಾದ
ಮಹಾಘನಲಿಂಗೈಕ್ಯಂಗೆ
ಉಳಿದಾದ ವಿದ್ಯೆದ ಬಯಕೆಯಿನ್ನೆಲ್ಲಿಯದಯ್ಯಾ
ಭಕ್ತಕಾಯ ಶಿವನಾದನಾಗಿ ಶಿವನೇ ಪ್ರಾಣವಾಗಿ ನಿಂದ
ಸದ್ಭಕ್ತಂಗೆ ಸಕಲಾಗಮಂಗಳಾವವೂ ಇಲ್ಲ
ಆತ ನಿಶ್ಚಿಂತನು ಆತ ಪರಿಣಾಮಿ ಆತ ಸದ್ಭಕ್ತನಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ಸದ್ಭಕ್ತಚಾರಿತ್ರ ಸ್ಥಲ ೩೭

ಈ ಪ್ರಕಾರದಿಂ ಸದ್ಭಕ್ತರು ಗುರುಲಿಂಗಜಂಗಮಕ್ಕೆ ದಾಸೋಹವಂ ಮಾಡುವಲ್ಲಿ ಫಲಪದಂಗಳಂ ಬಯಸದೆ ಮಾಡಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಸದ್ಭಕ್ತರುಗಳ ಚಾರಿತ್ರವಿಂತುಂಟೆಂದು ನುಡಿದ ವಚನಂಗಳು.

ಶಿವರಹಸ್ಯೇ—

ಶಿವಭಕ್ತಾ ಮಹೋತ್ಸಾಹಾಃ ಶಿವಾರ್ಚನರತಾಃ ಸದಾ ।
ಸಂಯುತಾಃ ಸರ್ವಸಂಪನ್ನಾಃ ಸರ್ವಾರ್ಥಂ ಸಾಧಯಂತಿ ವೈ ॥೧॥

ಶಿವಭಕ್ತರೆಂತಹರೆಂದರೆ—ಮಹೋತ್ಸಾಹವಂತರು ಲಿಂಗಾರ್ಚನೆಯನ್ನು ಲೇಸಾಗಿ ಮಾಡುವವರು ಅಕಾಲದಲ್ಲಿಯೂ ಶಿವಭಕ್ತಿಯ ಉದ್ಯೋಗವಂತರು.

ಶಾಂತಾಃ ಸ್ಮಿತಮುಖಾಚಂದ್ರಾ ನಿತ್ಯಂ ಸ್ವಾಗತವಾದಿನಃ ।
ಆಪ್ತವಚಃ ಸುವಕ್ತಾರಃ ಶಿವಭಕ್ತಿವಿಶಾರದಾಃ ॥೨॥

ಶಾಂತರು ಚಂದ್ರನಂತೆ ನಗುಮುಖವುಳ್ಳವರು ಪ್ರತಿದಿನವೂ ಬಂದ ಮಾಹೇಶ್ವರ ಜನರನ್ನು ಮನ್ನಿಸುವವರು ಹಿತ ಭಾಷೆಯುಳ್ಳವರು ಒಳಿತಾದುದಂ ನುಡಿವವರು ಶಿವಭಕ್ತಿಯಂ ಲೇಸಾಗಿ ಬಲ್ಲವರು.

ಶೌಚಾಚಾರಸಮಾಯುಕ್ತಾ ದಯಾದಾಕ್ಷಿಣ್ಯಗೋಚರಾಃ ।
ದಂಭಮಾತ್ಸರ್ಯನಿರ್ಮುಕ್ತಾ ಯಥಾ ತಥ್ಯಾನಿ ಭಾಷಿಣಃ ॥೩॥

ಶುಚಿರ್ಭೂತರಾಗಿರತಕ್ಕವರು ಕೃಪೆಯುಳ್ಳವರು ದಾಕ್ಷಿಣ್ಯವುಳ್ಳವರು ಡಂಭ ಮಾತ್ಸರ್ಯವಿಲ್ಲದವರು ಯಥಾವರ್ತನೆಯಂ ನುಡಿವವರು.

ಋಜವೋ ಮೃದವಃ ಸ್ವೇಚ್ಛಾ ಅನುಕೂಲಾಃ ಪ್ರಿಯಾಸ್ತಥಾ ।
ಅಮಾಯಿನೋ ಬುದ್ಧಿಮಂತಸ್ತ್ಯಕ್ತಸ್ಪರ್ಧಾ ಗತಸ್ಪೃಹಾಃ ॥೪॥

ಸರಳರು ಮೃದುವಚನವುಳ್ಳವರು ಪರಿಶುದ್ಧರು ಕ್ರೋಧವಶರಾಗದವರು ದೊರೆತಷ್ಟರಲ್ಲಿ ಪರಿಣಾಮವುಳ್ಳವರು ನಿಸ್ಪೃಹರು ಲೋಭವಿಲ್ಲದವರು.

ರುದ್ರಾತ್ಮಾನೋ ರುದ್ರಪರಾ ರುದ್ರಾಂಶಾ ರುದ್ರಭಾವಿತಾಃ
ವಿನಯೋಕ್ತ ಸಮಾಚಾರಾ ಭವಂತಿ ಭುವಿ ಮಾನವಾಃ ।೫॥

ಲಿಂಗಪ್ರಾಣಿಯಾಗಿಹರು ಶಿವಬೀಜವಾಗಿಹರು ಶಿವಧ್ಯಾನಿಗಳು ವಿನಯವಚನವುಳ್ಳವರಾಗಿ ಮರ್ತ್ಯದಲ್ಲಿರುತ್ತಿಹರು.

ಏಕಾಂತ ಭಕ್ತಿಮಾಸ್ಥಾಯ ಗುರುಶ್ಶೈತೇಷು ವರ್ತತೇ ।
ಪೂಜನೀಯಃ ಶಿವೋ ನಿತ್ಯಂ ಪರಾತ್ಪರ ವಿಭೂತಯೇ ॥೬॥

ಆರು ಏಕಾಂತದಲ್ಲಿ ಭಕ್ತಿಯಂ ಮಾಡುವರೋ ಅಂತಹರಲ್ಲಿ ಶಿವನು ಪ್ರತಿನಿತ್ಯವೂ ಇಹಪರದೈಶ್ವರ್ಯಂಗಳಂ ಕೊಡುವುದಕ್ಕೆ ಗುರುರೂಪವಾಗಿ ಪೂಜ್ಯನಾಗಿ ವರ್ತಿಸುತ್ತಿಹನು.

## ವಚನಗಳು

೧

ಶಿವಾಶಿವಾ ಆದಿಯನಾದಿಯೆಂಬೆರಡೂ ಇಲ್ಲದ
ನಿರವಯನಾಗಿಪ್ಪ ಶಿವ ನಿಮ್ಮ ನಿಜವನಾರಯ್ಯ ಬಲ್ಲವರು
ವೇದಂಗಳಿಗಭೇದ್ಯನು ಶಾಸ್ತ್ರಂಗಳಿಗಸಾಧ್ಯನು
ಪುರಾಣಕ್ಕೆ ಪುಣ್ಯನು ಆಗಮಕ್ಕೆ ಅಗೋಚರನು
ತರ್ಕಕ್ಕೆ ಅತರ್ಕ್ಯನು ವಾಙ್ಮನಕ್ಕತೀತನೆನಿಪ ಪರಶಿವಲಿಂಗವನು
ಕೆಲಬರು ಸಕಲನೆಂಬರು ನಿಷ್ಕಲನೆಂಬರು
ಕೆಲಬರು ಸೂಕ್ಷ್ಮನೆಂಬರು ಸ್ಥೂಲನೆಂಬರು
ಈ ಬಗೆಯ ಭಾವದಿಂ ಹರಿಬ್ರಹ್ಮ ಇಂದ್ರ ಚಂದ್ರ
ರವಿ ಕಾಲ ಕಾಮ ದಕ್ಷ ಇವರೊಳಗಾದ
ಸಮಸ್ತ ದೇವ ದಾನವ ಮಾನವರೆಲ್ಲರೂ
ಕಾಣಲರಿಯದೆ ಅಜ್ಞಾನದಿಂದ ಭವಭಾರಿಗಳಾದವರು
ಈ ಪರಿಯಲ್ಲಿ ಭವಭಾರಿಗಳಾಗಿ ಬಯಲಾಗಿ ಹೋಗಬಾರದೆಂದು
ನಮ್ಮ ಬಸವಣ್ಣನು ಜಗದ್ಧಿತಾರ್ಥವಾಗಿ ಮರ್ತ್ಯಕ್ಕೆ ಬಂದು

ವೀರಶೈವ ಮಾರ್ಗವನರುಪುವುದಕ್ಕೆ
ಐವತ್ತೆರಡು ವೀರವನೊಳಕೊಂಡು ಚರಿಸಿದನು
ಅದೆಂತೆಂದಡೆ—ಗುರುಕಾರುಣ್ಯಾ ವೇದ್ಯನು
ವಿಭೂತಿ ರುದ್ರಾಕ್ಷಿ ಧಾರಕನು ಪಂಚಾಕ್ಷರೀ ಭಾಷಾಸಮೇತನು
ಅಂಗಾಂಗ ಸಂಬಂಧಿ ನಿತ್ಯಲಿಂಗಾರ್ಚಕನು ಅರ್ಪಿದಲ್ಲಿ ಅವಧಾನಿ
ಪಾದೋದಕ ಪ್ರಸಾದ ಗ್ರಾಹಕನು ಗುರುಭಕ್ತಿ ಸಂಪನ್ನನು
ಏಕಲಿಂಗ ನಿಷ್ಠಾಪರನು ಚರಲಿಂಗ ಲೋಲುಪ್ತನು
ಶರಣ ಸಂಗಮೋತ್ಸವರನು ತ್ರಿವಿಧಕ್ಕೆ ಆಯತನು
ತ್ರಿಕರಣ ಶುದ್ಧನು ತ್ರಿವಿಧ ಲಿಂಗಾಂಗ ಸಂಬಂಧಿ
ಅನ್ಯದೈವ ಸ್ಮರಣೆಯ ಹೊದ್ದ ಭವಿಸಂಗವ ಮಾಡ
ಭವಿಪಾಕವ ಕೊಳ್ಳ ಪರಸ್ತ್ರೀಯರ ಬೆರಸ
ಪರಧನವನೊಲ್ಲ ಪರನಿಂದೆಯನಾಡ ಅನೃತವ ನುಡಿಯ
ಹಿಂಸೆಯ ಮಾಡ ತಾಮಸ ಭಕ್ತಸಂಗವ ಮಾಡ
ಗುರುಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನ
ಮುಂತಾದ ಸಮಸ್ತವೆಲ್ಲವ ಸಮರ್ಪಿಸಿ
ಪ್ರಸಾದ ಮುಂತಾಗಿ ಭೋಗಿಸುವ
ಜಂಗಮ ನಿಂದೆಯ ಸೈರಿಸ ಪ್ರಸಾದನಿಂದೆಯ ಕೇಳ
ಅನ್ಯರನಾಶೆಗಯ್ಯ ಪಾತ್ರಾಪಾತ್ರವನರಿದೀವ
ಚತುರ್ವಿಧ ಪದವಿಯ ಹಾರ ಅರಿಷಡ್ವರ್ಗಕ್ಕಳುಕ
ಕುಲಾದಿ ಮದಂಗಳ ಬಗೆಗೊಳ್ಳ ದ್ವೈತಾದ್ವೈತವ ನುಡಿವನಲ್ಲ
ಸಂಕಲ್ಪ ವಿಕಲ್ಪವ ಮಾಡುವನಲ್ಲ ಕಾಲೋಚಿತವ ಬಲ್ಲ
ಕ್ರಮಯುಕ್ತನಾಗಿಹ ಷಟ್ಸ್ಥಲ ಭರಿತ ಸರ್ವಾಂಗಲಿಂಗಿ
ದಾಸೋಹ ಸಂಪನ್ನ ಇಂತೀ ಐವತ್ತೆರಡು ವಿಧದಲ್ಲಿ
ನಿಪುಣನಾಗಿ ಮೆರೆವ ನಮ್ಮ ಬಸವಣ್ಣನು
ಆ ಬಸವಣ್ಣನವನ ಶ್ರೀಪಾದಕ್ಕೆ ನಾನು ಅಹೋರಾತ್ರಿಯಲ್ಲಿ
ನಮೋ ನಮಃ ಎಂದು ಬದುಕಿದೆನು ಕಾಣಾ

—ಚೆನ್ನಮಲ್ಲಿಕಾರ್ಜುನಾ

೨

ತನುವಿಲ್ಲದ ಭಕ್ತ ಮನವಿಲ್ಲದ ಭಕ್ತ ಧನವಿಲ್ಲದ ಭಕ್ತ
ಪಂಚೇಂದ್ರಿಯ ಸುಖವಿಲ್ಲದ ಭಕ್ತ ಕಾಲವಿಲ್ಲದ ಭಕ್ತ
ಕರ್ಮವಿಲ್ಲದ ಭಕ್ತ ಕಲ್ಪಿತವೆಂಬುದನರಿಯದ ಭಕ್ತ
ಅತನವನರಿಯದ ಭಕ್ತ ವ್ಯಸನಕ್ಕೆಳಸದ ಭಕ್ತ
ಹುಸಿನುಸುಳು ನುಡಿಯದ ಭಕ್ತ ಅರಿಷಡ್ವರ್ಗವನರಿಯದ ಭಕ್ತ
ಗುರುವಿಂಗಾಧಾರ ಭಕ್ತ ಲಿಂಗಕ್ಕಾಧಾರ ಭಕ್ತ
ಜಂಗಮಕ್ಕಾಧಾರ ಭಕ್ತ ಪ್ರಸಾದಕ್ಕಾಧಾರ ಭಕ್ತ
ಕೂಡಲ ಚೆನ್ನಸಂಗಯ್ಯನಲ್ಲಿ ಎನ್ನ ಮಾತಾಪಿತನೀ ಸದ್ಭಕ್ತನು

## ಷಟ್ಸ್ಥಲ ನಿರ್ಣಯ ಸ್ಥಲ ೩೮

ಇಂತೀ ಪ್ರಕಾರದಿಂ ಪಂಚಾಚಾರವಿಡಿದಾಚರಿಸುವ ಸ್ಥದಕ್ತಸ್ಥಲವ ಡೊಂದು ಸಮಸ್ತಸ್ಥಲಂಗಳಿಗೆಯೂ ಪ್ರಥಮಸ್ಥಾನವಾಗಿ ಸದ್ಭಕ್ತ ಚಾರಿತ್ರವಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾಪುರಾತನರು.

ಇಂತಹ ಸದ್ಭಕ್ತಸ್ಥಲವು ತಾನೇ ಮಿಶ್ರರೂಪದಿಂ ಷಟ್ತ್ರಿಂಶತಿ ಸ್ಥಲಂಗ ಳಾದ ಪರಿಯನರುಪಲೋಸ್ಕರ ನುಡಿದ ವಚನಗಳು.

ಶಿವರಹಸ್ಯೇ—

> ಭಕ್ತೋ ಮಾಹೇಶ್ವರಶ್ಚೈವ ಪ್ರಸಾದೀ ಪ್ರಾಣಲಿಂಗಿನಃ ।
> ಶರಣಂ ಶಿವಲಿಂಗೈಕ್ಯಂ ಷಟ್ಸ್ಥಲಂ ಚ ಕಥಂ ಭವೇತ್ ॥೧॥

ಭಕ್ತನು ಮಾಹೇಶ್ವರನು ಪ್ರಸಾದಿಯು ಪ್ರಾಣಲಿಂಗಿಯು ಶರಣ ಐಕ್ಯ ಇಂತೀ ಷಟ್ಸ್ಥಲವು ಹೇಗೆಂದು ದೇವಿಯರು ಬೆಸಗೊಂಡರು.

> ಸದಾಚಾರಃ ಶಿವೇ ಭಕ್ತಿರ್ಲಿಂಗ ಜಂಗಮಮೇಕಧೀಃ ।
> ಲಾಂಛನೇ ಶರಣೇ ಭಕ್ತಿರ್ಭಕ್ತ ಸ್ಥಲ ಮನುತ್ತಮಮ್ ॥೨॥

ಸದಾಚಾರದಲ್ಲಿ ನಡೆವುದು ಶಿವನಲ್ಲಿ ಭಕ್ತಿಯಾಗಿರುವುದು ಲಿಂಗಜಂಗ ವನೊಂದೇಯಾಗಿ ಕಾಂಬುದು ಶಿವಲಾಂಛನಕ್ಕೆ ವಂದಿಸುವುದು ಇದು ಉತ್ತ ಮವಹ ಭಕ್ತಿಸ್ಥಲವೆಂದು ಈಶ್ವರನು ಹೇಳಿದನು.

> ಪರಸ್ತ್ರೀಯಂ ಪರದ್ರವ್ಯಂ ವರ್ಜಿತೋ ಭಾವಶುದ್ಧಿಮಾನ್ ।
> ಲಿಂಗನಿಷ್ಠಾ ಸಿಯುಕ್ತಾತ್ಮಾ ಮಾಹೇಶ್ವರ ಮಹಾಸ್ಥಲಮ್ ॥೩॥

ಪರಸ್ತ್ರೀಯರನ್ನು ಪರದ್ರವ್ಯವನ್ನು ಬಿಟ್ಟು ಶುದ್ಧನಾಗಿ ಲಿಂಗನಿಷ್ಠೆಯು ಳ್ಳಾತನು ಮಾಹೇಶ್ವರನು ಎಂದು ಈಶ್ವರನು ದೇವಿಯರಿಗೆ ಹೇಳಿದನು.

> ಲಿಂಗಾರ್ಪಿತ ಪ್ರಸಾದಂ ಚ ಸುಭೋಗೀ ಲಿಂಗಸಂಯುತಃ
> ಅನರ್ಪಿತಂ ವಿಸರ್ಜ್ಯಂ ಚ ಪ್ರಸಾದಿಸ್ಥಲಮುತ್ತಮಮ್ ॥೪॥

ಲಿಂಗಕ್ಕೆ ಸಮರ್ಪಿಸಿದ ಪ್ರಸಾದವ ಸ್ವಾದಿಸಿ ಭುಂಜಿಸುವುದು ಲಿಂಗದ ನೆನಹಿನಿಂದಲೇ ಭುಂಜಿಸುವುದು ಅನರ್ಪಿತವ ಬಿಡುವುದು ಇದೀಗ ಪ್ರಸಾದಿ ಸ್ಥಲವು.

> ತ್ಯಕ್ತ್ವಾ ಪ್ರಾಣ ಗುಣಾನ್ ಲಿಂಗೀ ಲಿಂಗಂ ಪ್ರಾಣೇ ಸಮಾಹಿತಂ ।
> ಸುಖದುಃಖಭಯಂ ನಾಸ್ತಿ ಪ್ರಾಣಲಿಂಗೀ ಸ್ಥಲಂ ಭವೇತ್ ॥೫॥

ಪ್ರಾಣದ ಗುಣವಳಿದು ಲಿಂಗದಲ್ಲಿ ನೆನಹು ಸಂಬಂಧಿಸಿ ಸುಖದುಃಖ ಭಯವಿಲ್ಲದಿಹುದೇ ಪ್ರಾಣಲಿಂಗಿಸ್ಥಲವೆಂದು ಈಶ್ವರನು ಹೇಳಿದನು.

> ಪತಿರ್ಲಿಂಗಂ ಸತೀ ಚಾಹ ಪಿತಿಯುಕ್ತಃ ಸದಾ ತಥಾ ।
> ಪಂಚೇಂದ್ರಿಯ ಸುಖಂ ನಾಸ್ತಿ ಶರಣಸ್ಥಲಮುತ್ತಮಮ್ ॥೬॥

ಲಿಂಗವೇ ಪತಿ ತಾನೇ ಸತಿಯೆಂಬ ಭಾವದಲ್ಲಿ ಆಚರಿಸುವುದು ಪಂಚೇಂದ್ರಿಯ ಗುಣಂಗಳ ತಾ ಬಯಸದಿಹುದೇ ಶರಣಸ್ಥಲವು.

> ಷಡೂರ್ಮಯಶ್ಚ ಷಡ್ವರ್ಗೋ ನಾಸ್ತಿ ಚಾಷ್ಟವಿಧಾರ್ಚನಮ್ ।
> ನಿರ್ಭಾವಃ ಶಿವಲಿಂಗೈಕ್ಯಃ ಶಿಖಿಕರ್ಪೂರ ಯೋಗವತ್ ॥೭॥

ಕ್ಷುತ್ ಪಿಪಾಸೆ ಶೋಕ-ಮೋಹ ಜರಾ ಮರಣವೆಂಬ ಷಡೂರ್ಮಿಗಳಿಲ್ಲದಿಹ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಅರಿಷಡ್ವರ್ಗಗಳಿಲ್ಲದಿಹ ಅಷ್ಟವಿಧಾರ್ಚನೆಯಿಲ್ಲದಿಹ ಭಾವರಹಿತನಾಗಿರುವುದೀಗ ಐಕ್ಯಸ್ಥಲವು. ಕರ್ಪೂರ ಅಗ್ನಿಯ ಸಂಗದಿಂದ ತನ್ನ ರೂಪವಳಿದು ಅಗ್ನಿಯೇ ಆದಂತೆ ಲಿಂಗದನೆನಹಿಂದ ಲಿಂಗವೇ ಆಹನೆಂಬುದರ್ಥ.

## ವಚನಗಳು

೧

ಭಕ್ತನಾದಡೆ ತನುಮನಧನದಾಶೆಯಳಿದಿರಬೇಕು
ಮಾಹೇಶ್ವರನಾದಡೆ ಪರಧನ ಪರಚಿಂತೆ ಪರಾಂಗನೆಯರೆಡೆಯುಳಿದು
ಳಿದಿರಬೇಕು
ಪ್ರಸಾದಿಯಾದಡೆ ಸುಖರುಚಿಯವಗ್ರಹವಂ ಮರೆದು ಪ್ರಸಾದ
ಘುಟವಳಿಯದೆ ಉಳಿದಿರಬೇಕು

ಪ್ರಾಣಲಿಂಗಿಯಾದಡೆ ಘಟದಾಸೆಯಂ ತೊರೆದು ಪ್ರಾಣಲಿಂಗದೊಳಗೆ
ಬೆರೆಯಿಸಿ ಬೇರಿಲ್ಲದಿರಬೇಕು
ಶರಣನಾದಡೆ ಸತಿರತಿಯ ಸಂಗವಳಿದು ಲಿಂಗಕ್ಕೆ
ತಾ ಸತಿಯಾಗಿರ ಬೇಕು
ಲಿಂಗೈಕ್ಯನಾದಡೆ ಆಪ್ಯಾಯನದೆಡೆಯಡಗಿ ಸುಖದುಃಖಮಂ
ತಾಳದೆ ನಿಭ್ರಾಂತನಾಗಿರಬೇಕು
ಮಾತಿನ ಮಾಲೆಯಲ್ಲಿ ಸಿಲುಕುವುದೇ ಶಿವಾಚಾರ
ಇಂತೀ ಷಟ್ಸ್ಥಲವಾರಿಗೆಯೂ ಅಳವಡದು
ಸೊಡ್ಡಳದೇವನು ಷಟ್‌ಸ್ಥಲದ ಭಕ್ತಿಯನು ಬಸವಣ್ಣಂಗೆ
ಮೂರ್ತಿಯ ಮಾಡಿದನು

೨

ಕಿಂಕುರ್ವಾಣತೆಯಿಂದ ಜಂಗಮವೇ ಲಿಂಗವೆಂದು
ಉಳ್ಳುದನರಿತು ಮಾಡುವಲ್ಲಿ ಭಕ್ತ
ನಿಷ್ಠೆನಿಬ್ಬೆರಸಿ ಘಟಿಗೊಂಡು ಅಭಿಲಾಷೆ ಸಮನಿಸದೆ
ಪರಿಚ್ಛೇದ ಬುದ್ಧಿಯುಳ್ಳಲ್ಲಿ ಮಾಹೇಶ್ವರನು
ಅನರ್ಪಿತವ ಸಮನಿಸದೆ ಬಂದುದ ಕಾಯದ ಕರಣದ
ಕೈಯಲ್ಲಿ ಕೊಟ್ಟು ಲಿಂಗಸಹಿತ ಭೋಗಿಸುವಲ್ಲಿ ಪ್ರಸಾದಿ
ಪ್ರಾಣಕ್ಕೆ ಪ್ರಾಣವಾಗಿದ್ದುದನು ಕಾಲಸ್ಥಿತಿಯರಿದು ಎಚ್ಚರಿಕೆ
ಗುಂದದಿಪ್ಪಲ್ಲಿ ಪ್ರಾಣಲಿಂಗಿ
ತನಗೆ ಲಿಂಗವಾಗಿ ಲಿಂಗಕ್ಕೆ ತಾನಾಗಿ ಬೆಚ್ಚು
ಬೇರಿಲ್ಲದಿರ್ದಡೆ ಶರಣ
ಸದಾಚಾರ ಸಂಪತ್ತಿನಲ್ಲಿ ಬಂದನುಭಾವವನು ಮೀರಿ ಹೆಸರಡಗಿದ
ಸುಖವದು ಲಿಂಗೈಕ್ಯ
ಇದುಕಾರಣ ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣಂಗಲ್ಲದೆ ಷಟ್ಸ್ಥಲವಪೂರ್ವ

೩

ಬೀಜ ವೃಕ್ಷವ ನುಂಗಿತ್ತೋ ವೃಕ್ಷ ಬೀಜವ ನುಂಗಿತ್ತೋ
ಎಂದರಿದಾಗಲೇ ಭಕ್ತಿಸ್ಥಲ

ಮುತ್ತು ಜಲವನುಂಗಿತ್ತೋ ಜಲವು ಮುತ್ತು ನುಂಗಿತ್ತೋ
ಎಂದರಿದಾಗಲೇ ಮಹೇಶ್ವರ ಸ್ಥಲ
ಪ್ರಭೆಯು ಪಾಷಾಣವ ನುಂಗಿತ್ತೊ ಪಾಷಾಣ ಪ್ರಭೆಯ ನುಂಗಿತ್ತೋ
ಎಂಬುದನರಿದಾಗಲೇ ಪ್ರಸಾದಿ ಸ್ಥಲ
ವಹ್ನಿಯು ಕಾಷ್ಠವ ನುಂಗಿತ್ತೊ ಕಾಷ್ಠವು ವಹ್ನಿಯ ನುಂಗಿತ್ತೊ
ಎಂಬುದನರಿದಾಗಲೇ ಪ್ರಾಣಲಿಂಗಿಸ್ಥಲ
ಸಾರಬಲಿದು ಶರಧಿಯ ಕೂಡಿದಾಗಲೇ ಶರಣಸ್ಥಲ
ವಾರಿಬಲಿದು ವಾರಿಧಿಯ ಕೂಡಿದಾಗಲೇ ಐಕ್ಯಸ್ಥಲ
ಹೀಗಲ್ಲದೆ ಷಟ್ಸ್ಥಲ ಬ್ರಹ್ಮಿಗಳೆಂತಾದಿರಣ್ಣಾ
ಕರೆಯದ ಪಶುವಿಂಗೆ ತೃಣವ ಗಳಿಸುವಂತೆ
ಒಲ್ಲದ ಸತಿಗೆ ರತಿಕೂಟವ ಬೆಳೆಸುವಂತೆ
ಗೆಲ್ಲಸೋಲಕ್ಕೆ ಹೋರುವನಲ್ಲಿ ಬಲ್ಲನವನರಸುವಂತೆ
ಕೊಲ್ಲಿಯಾವಿನಲ್ಲಿ ಸಲ್ಲೀಲೆಯನರಸುವಂತೆ
ಬಲಿದ ವಂತದಲ್ಲಿ ಕಳಿಲೆಯನರಸುವಂತೆ
ಬರುಮಾತಿಂಗೆಡೆಯಾದುದುಂಟೇ
ಬಯಲು ಕೊಂಡ ಘನಕ್ಕೆ ಅವಧಿಗೊಡಲಿಲ್ಲ
ಉರಿಗೊಂಡ ಕರ್ಪುರಕ್ಕೆ ರೂಪಿಗೆಡೆಯಿಲ್ಲ
ಬಯಲ ಬಡಿದವಂಗೆ ಕೈಗೆ ಮೆತ್ತಗಿಲ್ಲ
ಮನವು ಮನದಲ್ಲಿ ನಿಂದವಂಗೆ ಆರನೆಣಿಸಲಿಲ್ಲ ಮೂರ ಮುಟ್ಟಲಿಲ್ಲ
ಮೀರಿ ತೋರಿದ ಘನವದು ತನ್ನಲ್ಲಿಯೇ ನಿರ್ಲೇಪ
ನಿಷ್ಕಲಂಕ ಚೆನ್ನಮಲ್ಲಿಕಾರ್ಜುನಾ

೪

ಹೊಸ ಮದುವೆ ಹಸೆಯಡಗದ ಮುನ್ನ
ಹೂಸಿದ ಅರಿಸಿದ ಬಿಸಿಲಿಂಗೆ ಹರಿಯದ ಮುನ್ನ
ತನು ಸಂಚಲವಡಗಿ ಮನವು ಗುರುಕಾರುಣ್ಯವ ಪಡೆದು
ಹಸಿಯಿಲ್ಲದಿರ್ದಡೆ ಭಕ್ತನೆಂಬೆ
ಹಿಡಿಯಲಿಲ್ಲದಿರ್ದಡೆ ಮಾಹೇಶ್ವರನೆಂಬೆ

ತನುವಿಲ್ಲದಿರ್ದಡೆ ಪ್ರಸಾದಿಯೆಂಬೆ
ಜೀವವಿಲ್ಲದಿರ್ದಡೆ ಪ್ರಾಣಲಿಂಗಿಯೆಂಬೆ
ಆಶೆಯಿಲ್ಲದಿರ್ದಡೆ ಶರಣನೆಂಬೆ
ಐದರ ಸಂಪರ್ಕ ವಿಯೋಗವಾದಡೆ ಐಕ್ಯನೆಂಬೆ
ಐಕ್ಯದ ಸಂತೋಷ ಹಿಂಗಿದಡೆ ಜ್ಯೋತಿರ್ಮಯನೆಂಬೆ
ಇಂತಾಗಬೇಕೆಂಬ ಈ ಮನದ ದೇಹವಸಿರಿದಡರಿಯಮ
ತರಿದಡರಿಯದು ಬೈದಡರಿಯದು ಹೊಯ್ದಾಡಿದಡರಿಯದು
ನಿಂದಿಸಿದಡರಿಯದು ಸ್ತುತಿಸಿದಡರಿಯದು
ಸುಖವನರಿಯದು ದುಃಖವನರಿಯದು
ಈ ಚತುರ್ವಿಧದ ತಾಗು ನಿರೋಧವನರಿಯದಿರ್ದಡೆ
ಆತನೇ ಮಹಾಲಿಂಗ ಗಜೇಶ್ವರನೆಂಬೆ

## ಶಿವಭಕ್ತ ಪರೀಕ್ಷಾ ಸ್ಥಲ ೩೯

ಇಂತೀ ಪ್ರಕಾರದಿಂ ಭಕ್ತಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂಬ ಷಟ್ಸ್ಥಲದ ಭೇದವನು ಬೇರೆ ಬೇರೆ ಸ್ಥಲಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಷಟ್ಸ್ಥಲ ಸಂಪನ್ನರಾದ ಸದ್ಭಕ್ತರ ಮರ್ಮವ ನೋಡ ಬೇಕೆಂಬುದನರುಪಲೋಸ್ಕರ ನುಡಿದ ವಚನಂಗಳು.

ಶಿವಧರ್ಮೇ—

ಹಸ್ತಪಾದಾದಿ ಸಾಧರ್ಮ್ಯೋ ರುದ್ರೋ ಮರ್ತ್ಯವಪುರ್ಧರಃ |
ಪ್ರಾಕೃತಾನ್ನೈವ ಮನ್ಯಂತೇ ಜಾನಂತಿ ನ ಚ ಪಂಡಿತಾಃ ||೧||

ಶಿವನು ತಾನೇ ಮರ್ತ್ಯಕ್ಕಿಳಿದು ಕರಚರಣಂಗಳಂ ತಾಳಿ ಜಂಗಮ ರೂಪಾಗಿ ಸುಳಿವನು. ಅದನು ಪ್ರಾಕೃತ ಮಾನವರು ಅರಿಯಲಾರರು ಪಂಡಿತರೂ ತಿಳಿಯರು.

ವೀರಭದ್ರೀಯೇ—

ದಂಡ ಕ್ಷೀರದ್ವಯೋ ಹಸ್ತೋ ಜಂಗಮೋ ಭಕ್ತಮಂದಿರಮ್ |
ಅತಿಭಕ್ತ್ಯಾತಿ ಸಂತುಷ್ಟಸ್ತ್ವಪಹಾಸ್ಯಶ್ಚ ದಂಡನಮ್ ||೨||

ಜಂಗಮವು ಭಕ್ತರ ಗೃಹಕ್ಕೆ ಹೋದಾಗ ಒಂದು ಕೈಯಲ್ಲಿ ಅಮೃತ ಪ್ರಸಾದ ಒಂದು ಕೈಯಲ್ಲಿ ಶಾಕ್ತ್ಯೇಯ ದಂಡ ಇವುಗಳಂ ಪಿಡಿದು ಬರುವನು, ಅತಿಭಕ್ತಿಯಮಾಡದೆ ಪ್ರಸನ್ನ ಪ್ರಸಾದವ ಕೊಡುವನು, ಅಪಹಾಸ್ಯಮಂ ಮಾಡಿದಡೆ ಯಮದಂಡನೆಯನೀವನು.

ಶಿವರಹಸ್ಯೇ—

ಅಪವಾದೇನಾರ್ಥನಾಶೇನ ವಿಯೋಗೇನ ಚ ಬಾಂಧವಾನ್ |
ದೇಶತ್ಯಾಗೇನ ವ್ಯಾಖ್ಯಾಚ ದೇವಿ ಮದ್ಭಕ್ತಲಕ್ಷಣಮ್ ||೩||

ಶಿವನು ಸದ್ಭಕ್ತರ ಪರೀಕ್ಷಿಸಿ ನೋಡುವುದೆಂತೆಂದಡೆ ಅಪವಾದವನಿಕ್ಕಿ ಯಾದರೂ ದ್ರವ್ಯವ ನಾಶ ಮಾಡಿಯಾದರೂ ಬಂಧುಗಳನಗಲಿಸಿಯಾದರೂ

ದೇಶವನಗಲಿ ಬಡಿಸಿಯಾದರೂ ಮಹಾವ್ಯಾಧಿಯ ಹುಟ್ಟಿಸಿಯಾದರೂ ನೋಡುವನು. ಇನಿತರಲ್ಲಿ ಜಂಗಮ ಭಕ್ತಿನಿಷ್ಠೆಯುಳ್ಳಡೆ ಶಿವನು ಮೆಚ್ಚುವನು.

ಲೈಂಗೇ—

ಯಥಾ ಚತುರ್ಭಿಃ ಕನಕಂ ಪರೀಕ್ಷ್ಯತೇ ನಿಕರ್ಷಣಚ್ಛೇದನತಾಪತಾಡನೈಃ ॥
ಭಕ್ತಶ್ಚತುರ್ಭಿಶ್ಚ ತಥಾ ಪರೀಕ್ಷ್ಯತೇ ಶ್ರುತೇನ ಶೀಲೇನ ಗುಣೇನ ಕರ್ಮಣಾ ॥೪॥

ಸುವರ್ಣವನೊರೆದು ಕಡಿದು ಕಾಸಿ ಕುಟ್ಟಿ ಹೇಗೆ ನಾಲ್ಕೂ ಪರಿಯಲ್ಲಿ ಪರೀಕ್ಷಿಸಿ ನೋಡುವರೋ ಹಾಗೆ ಶಿವನು ಭಕ್ತರನು ವಾಕ್ಕಿನಿಂದ ಆಚಾರದಿಂದ ಗುಣದಿಂದ ಕರ್ಮದಿಂದ ಈ ನಾಲ್ಕು ಪರಿಯಲ್ಲಿ ಪರೀಕ್ಷಿಸಿ ನೋಡುವನು.

## ವಚನಗಳು

೧

ಭಕ್ತನಾಗಿ ತನ್ನ ಹಿಡಿದನೆಂದು ಹೋದರೆ
ನುಗ್ಗು ಮಾಡುವ ನುಸಿಯಮಾಡುವ ಮಣ್ಣುಮಾಡವ ಮಸಿಯು ಮಾಡುವ
ಕೂಡಲ ಸಂಗಮದೇವರ ನೆರೆನಂಬಿದಡೆ ಕಡೆಗೆ ತನ್ನಂತೆ ಮಾಡುವ

೨

ಅರೆವನಯ್ಯಾ ಸಂಣವಹನ್ನಕ್ಕರ
ಒರೆವನಯ್ಯಾ ಬಂಣ ಬರುವನಕ್ಕರ
ಅರೆವಡೆ ಸಂಣವಾಗಿ ಒರೆದರೆ ಬಂಣವಾದರೆ
ಕೈವಿಡಿದೆತ್ತಿಕೊಂಬನು ನಮ್ಮ ಕೂಡಲ ಸಂಗಮದೇವನು

೩

ಒಲಿದು ಒಲಿಸಿಕೊಳ್ಳಬೇಕು ಒಲಿದಲ್ಲದೇ ಇಲ್ಲ
ಹಲವು ಕೊಂಬೆಗೆ ಹಾರದಿರು ಮರುಳೇ
ಅಟ್ಟಿನೋಡುವ ಮುಟ್ಟಿನೋಡುವ ತಟ್ಟಿನೋಡುವ
ಒತ್ತಿನೋಡುವ ಅಟ್ಟಿದಡೆ ಮುಟ್ಟಿದಡೆ ತಟ್ಟಿದಡೆ ಒತ್ತಿದಡೆ
ನಿಷ್ಠೆಯ ಬಿಡದಿರ್ದಡೆ ತನ್ನನೀವ ಮಹಾಲಿಂಗ ಕಲ್ಲೇಶ್ವರನು

೪

ಹುಟ್ಟದ ಯೋನಿಯಲ್ಲಿ ಹುಟ್ಟಿಸಿ
ಬಾರದ ಭವಂಗಳಲ್ಲಿ ಬರಿಸಿ
ಉಂಣದ ಊಟವನುಣಿಸಿ
ವಿಧಿಯೊಳಗಾಗಿಸುವ ಕೇಳಿರಣ್ಣಾ
ತನ್ನವರೆಂದರೆ ಮನ್ನಿಸುವನೇ ಶಿವನು
ಹತ್ತಿರಿದ್ದ ಭೃಂಗಿಯ ಚರ್ಮಕಿತ್ತೀಡಾಡಿಸಿದನು
ಮತ್ತೆ ಕೆಲಂಬರ ಬಲ್ಲನೇ ಇದನರಿದು
ಬಿಡದಿರು ಚೆನ್ನಮಲ್ಲಿಕಾರ್ಜುನನಿಂತಹ ಸಿತಗನವ್ವಾ

೫

ಹರ ತನ್ನ ಭಕ್ತರ ತಿರಿವಂತೆ ಮಾಡುವ
ಒರೆದು ನೋಡುವ ಸುವರ್ಣದಂತೆ ಅರೆದು ನೋಡುವ ಚಂದನದಂತೆ
ಅರಿದು ನೋಡುವ ಕಬ್ಬಿನ ಕೋಲಿನಂತೆ
ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ ರಾಮನಾಥನು

೬

ನಿಧಾನವ ನಗೆವೆನೆಂದ ಹೋದರೆ
ವಿಘ್ನ ಬಪ್ಪುದು ಮಾಬುದೇ ಅಯ್ಯಾ
ಸದಾಶಿವನ ಪೂಜಿಸುವೆನೆಂದು ಹೋದಡೆ
ಕದುಬಿ ಹಿಡಿವವಯ್ಯಾ ಸಕಲ ವಿಪತ್ತುಗಳು
ಎದೆ ಭಂಗವಿಲ್ಲದೆ ನಿಲ್ಲಬಲ್ಲಡೆ
ಸದಮಲ ಸುಖವನೀವ ನಮ್ಮ ಕೂಡಲ ಚೆನ್ನಸಂಗಮದೇವರು

೭

ದೇವನೊಳ್ಳಿದನೆಂದು ಮುಯ್ಯಾನಲು ಬೇಡ
ತರಕಟ ಕಾಡುವನೊಳ್ಳಿಹನೇ
ಅಳಿಸುವ ನಗಿಸುವನೊಳ್ಳಿಹನೇ
ಬೆದರದೆ ಬೆಚ್ಚದೆ ತೊತ್ತುಗೆಲಸವ ಮಾಡಲು
ತನ್ನವನೀ ತಂಭು ಜಕ್ಕೇಶ್ವರನು

## ಅನ್ಯೈಷ್ಠಿಕ ನಿರಸನ ಸ್ಥಲ ೪೦

ಇಂತೀ ಪ್ರಕಾರದಿಂ ಷಟ್‌ಸ್ಥಲ ಸಂಪನ್ನರಾದ ಸದ್ಭಕ್ತರ ಭಕ್ತಿ ಪರೀಕ್ಷೆಯ ನೋಡಿವಲ್ಲದೆ ಶಿವನೊಲಿಯನೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಸದ್ಭಕ್ತರು ಜಂಗಮ ಭಕ್ತಿಯ ಮಾಡುವಲ್ಲಿ ನಿಷ್ಠೆಯಿಲ್ಲದೆ ಮಾಡಿದ ಭಕ್ತಿ ಪ್ರಯೋಜನವಿಲ್ಲೆಂದು ನುಡಿದ ವಚನಂಗಳು.

೧

ಅಲಗಲಗು ಮೋಹಿಸಿದಲ್ಲದೆ ಕಲಿತನವ ಕಾಣಬಾರದು
ನುಡಿದ ನುಡಿ ಜಾರಿದಡೆ ಮನಕ್ಕೆ ಮನ ನಾಚಬೇಕು
ತಬ್ಬಗಟ್ಟಿಯ ತನದಲ್ಲಿ ಎಂತಪ್ಪುದಯ್ಯಾ ಭಕ್ತಿ
ಕೂಡಲ ಸಂಗಮದೇವಾ ಪಾಪಿಯು ಕೂಸನೆತ್ತಿದಂತೆ ನೋಡಾ

೨

ಹೇಡಿ ಬಿರುದ ಕಟ್ಟಿದಡೆ ಕಲಿಯಪ್ಪನೇ
ಒರೆಯ ಬಿಚ್ಚಿ ಇರಿಯದಿರ್ದಡೆ ಲೋಕ ಮೆಚ್ಚುವುದೇ
ಚಲ್ಲಣವನುಟ್ಟು ಗರುಡಿಯ ಕಟ್ಟಿ ಸಾಧನೆಯ ಮಾಡುವನಂತೆ
ತನ್ನ ತಪ್ಪಿಸಿ ಕೊಂಡಡೆ ಶಿವನು ಮೆಚ್ಚುವನೇ
ಅರಿಯದವರಿಗೆ ಒಳ್ಳೆ ಹೆಡೆಯೆತ್ತಿ ತೋರಿದಂತೆ
ಬೊಳ್ಳಿಗನ ಭಕ್ತಿ ಕೂಡಲ ಸಂಗಮದೇವಾ

೩

ಅರಿಬಿರುದ ನುಡಿದವರು ಕೇಳಿರೇ
ಕೆರಳಿಕೆಯ ನುಡಿವರು ನೆರೆದಮಂದಿಯ ಕಂಡುಬ್ಬುವರು ಕೊಬ್ಬುವರು
ನಿರುತದ ಕಾಳಗವೆಂದಡೆ ಬಿರುದ ಬೀಸಾಡುವರು
ಅರೆದು ಭಕ್ತಿಯ ಮಾಡಿ ನೆರೆಭಕ್ತನೆಂದರೆ ಎಂತು ಮೆಚ್ಚುವನಯ್ಯಾ
ನಮ್ಮ ದೇವರಾಯ ಸೊಡ್ಡಳ

೪

ಅರ್ಥಪ್ರಾಣಾಭಿಮಾನಂಗಳು ನಿಮ್ಮವೆಂಬರು ಮಾತಿನಲ್ಲಿ
ಒತ್ತಿನೋಡಿದರೆ ಮುಟ್ಟಲೀಯರು
ಮುಟ್ಟ ಬಂದಲ್ಲಿ ಕಠಾರಿಯ ಕಾಳಗದಂತಲ್ಲದೆ
ಸಹಜ ಭಕ್ತನೆನಿಸಿಕೊಳಬಾರದು ನೋಡಾ
ಇದು ಕಾರಣ ಕೂಡಲ ಸಂಗಮದೇವಯ್ಯಾ
ವೇಷಡಂಭಕರಿಗೆ ಸದ್ಭಕ್ತಿ ಎಂತಪ್ಪುದಯ್ಯಾ

೫

ಹುಲಿಯ ಹಾಲು ಹುಲಿಗಲ್ಲದೆ
ಹೊಲದ ಹುಲ್ಲೆಗೆ ಉಣಬಾರದು
ಕಲಿಯ ಕಾಲ ತೊಡರು ಕಲಿತನ ದಾಳಿಗಲ್ಲದೆ ಇಕ್ಕಬಾರದು
ಶಿವನೊಡತಣಾದ ಬಿರುದು ಇಹಪರ ವೀರಂಗಲ್ಲದೆ ನುಡಿಯಬಾರದು
ಅಳಿಮನದ ಭಕ್ತಿಯವರ ಮೂಗ ಹಲ್ಲುದೋರಿ ಕೊಯ್ವನಯ್ಯಾ
ಕೂಡಲ ಸಂಗಮದೇವರು

## ಸದ್ಭಕ್ತ್ನೈಷ್ಠಿಕ ಸ್ಥಲ ೪೧

ಈ ಪ್ರಕಾರದಿಂ ಸದ್ಭಕ್ತರು ಜಂಗಮಲಿಂಗದಲ್ಲಿ ಅರ್ಥಪ್ರಾಣಾಭಿಮಾನಂಗಳಂ ವಂಚಿಸಿ ತಮ್ಮ ಉದರ ಹೊರೆವವರು ಸದ್ಭಕ್ತ್ನೈಷ್ಠಿಕ ಸ್ಥಲಕ್ಕೆ ಸಲ್ಲರೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಸದ್ಭಕ್ತನು ಜಂಗಮಲಿಂಗಕ್ಕೆ ಮಾಡುವಲ್ಲಿ ತನ್ನ ಅರ್ಥಪ್ರಾಣಾಭಿಮಾನದ ಮೇಲೆ ಬಂದರೂ ಹಿಮ್ಮೆಟ್ಟದೆ ಮಾಡಬೇಕೆಂಬುದನರುಪಲೋಸ್ಕರ ನುಡಿದ ವಚನಂಗಳು.

ಲೈಂಗೇ—

> ಯೇನ ಮಾರ್ಗೇಣ ಸರ್ವೇಽಪಿ ಸಜ್ಜನಾಃ ಶಿವಭಕ್ತಿಮಾನ್ ।
> ತೋಷ್ಯತಿ ಸ್ತುತ್ಯತಿ ಪ್ರೀತ್ಯಾ ಸದಾಚಾರಃ ಸ ಉಚ್ಯತೇ ॥೧॥

ಸದ್ಭಕ್ತನಾಚರಿಸುವಂತಹ ಆವುದಾನೊಂದು ಮಾರ್ಗದಿಂದ ಷಟ್ಸ್ಥಲ ಸಂಪನ್ನರಪ್ಪ ಸದ್ಭಕ್ತ ಜನರು ಪ್ರೇಮದಿಂದ ಸಂತೋಷಿಸುವರೋ ಮತ್ತು ಸ್ತುತಿಸುವರೋ ಅಂತಹ ಮಾರ್ಗವು ಸದಾಚಾರವೆಂದು ಹೇಳಲ್ಪಟ್ಟುದು

ಕೂರ್ಮೇ—

> ಆಚಾರಸ್ಯ ಪರಿತ್ಯಾಗಃ ಸ್ವಗ್ರಹೀತಸ್ಯ ಭಕ್ತಿತಃ ।
> ಅಪಿ ಪ್ರಾಣಾತ್ಯಯೇ ಸೋಽಯಂ ನಿಯತಾಚಾರ ಉಚ್ಯತೇ ॥೨॥

ತಾನು ಗ್ರಹಿಸಿದ ತ್ರಿವಿಧ ಲಿಂಗಾಚಾರದ ಪ್ರವರ್ತನವನು ತನ್ನ ಪ್ರಾಣವಳಿಯುತ್ತಿದ್ದಡೆಯೂ ಬಿಡೆನೆಂಬುದಾವುದಾನೊಂದು ದೃಢಗ್ರಾಹಿತ್ವವುಂಟೋ ಅದು ನಿಯತಾಚಾರವೆಂದು ಹೇಳಲ್ಪಡುವುದು.

ಸೂತಸಂಹಿತಾಯಾಮ್—

> ಮಾತರಃ ಪಿತರೋ ಭ್ರಾತ್ರೂನ್ಬಾಂಧವಾನ್ ಸುಹೃದೋ ಧನಮ್ ।
> ಸರ್ವಂತ್ಯಕ್ತ್ವಾ ಸದಾಚಾರೀ ಲಿಂಗತ್ರಯಮುಪಾಸಯೇತ್ ॥೩॥

ಶಿವಾಚಾರಕ್ಕೆ ಅನುಕೂಲರಲ್ಲದಂತಹ ತಾಯಿ ತಂದೆ ಅಣ್ಣ ಮಿತ್ರರು ನಂಟರು ಧನಂಗಳೆಲ್ಲವಂ ಬಿಟ್ಟು ಸದಾಚಾರ ಉಳ್ಳಾತನು ಶ್ರೀಗುರುಲಿಂಗ ಜಂಗಮವನಾಶ್ರಮಿಸುವುದು.

ಶಿವಧರ್ಮೇ—

ಆಪದ್ಯಪಿ ದುರಂತಾಯಾಂ ಸ್ಪೃಹೀ ಮಾಹೇಶ್ವರೋ ಜನಃ ।
ನ ಸ್ವಧರ್ಮಂ ತ್ಯಜೇತ್ಪ್ರಾಜ್ಞೋ ಕಾಯೇನ ಮನಸಾ ಗಿರಾ ॥೪॥

ಪ್ರಾಣವಳಿವ ಆಪತ್ತಿನಲ್ಲಿಯಾದಡೆಯೂ ವೀರಮಾಹೇಶ್ವರನಾಗಿ ಅರಿಕೆಯುಳ್ಳಾತನಾದ ಗೃಹಸ್ಥನು ಮನೋವಾಕ್ಕಾಯಂಗಳೆಂಬ ತ್ರಿಕರಣಂಗಳಿಂದ ತಾನು ಗ್ರಹಿಸಿದಂತಹ ವೀರಮಾಹೇಶ್ವರ ಧರ್ಮವನು ಬಿಡಲಾಗದು.

ಶಿವರಹಸ್ಯೇ—

ಪ್ರಾಣಲಿಂಗವ್ರತೇ ಲುಪ್ತೇ ಹಸ್ತಖಡ್ಗಾದವಂಚಯನ್ ।
ಮುಖಂ ಪಂಕಜವಚ್ಛಿಂದ್ಯಾದ್ವೀರಭೃತ್ಯಾರ್ಚನಕ್ರಮಃ ॥೫॥

ವೀರಮಾಹೇಶ್ವರನು ತನ್ನ ತ್ರಿವಿಧಲಿಂಗವ್ರತವು ಲೋಪವಾದಡೆ ಹಸ್ತದಿಂದ ಖಡ್ಗವಂ ಪಿಡಿದು ತನ್ನಂ ವಂಚಿಸದೆ ವಿಕಸಿತ ಮುಖಕಮಲದಂತಹ ಶಿರಸ್ಸನ್ನು ತರಿದುಕೊಂಬುದು ಈ ಪರಿಯಲ್ಲಿಯೂ ಆಚರಿಸುವ ಆಚರಣೆಯು ನಿಯತಾಚಾರ ಲಿಂಗಸಂಪನ್ನನಾದ ವೀರಭೃತ್ಯನ ಲಕ್ಷಣವು.

ವೀರಭದ್ರೀಯೇ—

ಶರೀರಂ ಗೃಹಸಂಬಂಧಂ ದಂಪತೀ ಪ್ರಾಣಜೀವಿತಮ್ ।
ದದ್ಯಾತ್ತಂ ಜಂಗಮಾಯೈವ ಸರ್ವಸ್ವಂ ಧನಮೇವ ಚ ॥೬॥

ತನ್ನ ಶರೀರವನು ಮನೆಯನು ತಾನು ಪತ್ನಿ ಸಹಿತವಾಗಿ ಬಾಳುವ ಪ್ರಾಣಾಂತ್ಯದ ದ್ರವ್ಯವನು ಈ ಸಮಸ್ತಾವೆಲ್ಲವನು ಕಾಲೋಚಿತವಾಗಿ ಬೇಡಿದಡೆ ಜಂಗಮಕ್ಕೆ ಕೊಡುವುದೀಗ ಸದ್ಭಕ್ತಿ ನೈಷ್ಠಿಕ ವಿಶೇಷವು.

## ವಚನಗಳು

೧

ಅಂಕ ಕಂಡಾ ಕೋಲಾಶೆ ಮತ್ತೇಕೆ
ಲಿಂಕ ಕಂಡಾ ಪ್ರಾಣದಾಶೆ ಮತ್ತೇಕೆ
ಭಕ್ತ ಕಂಡಾ ತನುಮನಧನವಾಶೆ ಮತ್ತೇಕೆ
ನಿಮ್ಮಂಕೆಗೆ ಝುಂಕೆಗೆ ತಂಕಿಸಿದೆನಾದಡೆ
ಎನ್ನ ಲಿಂಕತನಕ್ಕೆ ಹಾನಿ ಕೂಡಲಸಂಗಮದೇವಾ

೨

ಅಟ್ಟುಟ್ಟಿಕೆಯ ಮಾತಿಂಗಂಜಲೇಕೆ
ಮುಟ್ಟ ಬಂದುದಕೆ ಓಡಲೇಕೆ ಕಾದಿದಲ್ಲದೆ ಮಾಣೆನು
ಓಡಿದಡೆ ಭಂಗ ಹಿಂಗದಯ್ಯಾ
ಕೂಡಲ ಸಂಗಮದೇವಯ್ಯಾ ಎನ್ನ ಭಂಗವು ನಿನ್ನದಾಗಿ

೩

ಒಡಲು ಭಂಡಾರ ಕಡವರ ದ್ರವ್ಯವ ಬಡ್ಡಿ ವ್ಯವಹಾರಕ್ಕೆ ಕೊಟ್ಟು
ಮನೆಯ ಗೋಂಟಿನಲ್ಲಿ ಹೊಯ್ದು ಕೊಂಡಿದ್ದೆನಾದರೆ
ಅದು ಎನ್ನರ್ಥವಲ್ಲ
ಅನರ್ಥವೆಂಬೆ ಸಂಗಮದೇವಾ ನೀನು ಜಂಗಮ ರೂಪಾಗಿ ಬಂದು
ಆ ಧನವನು ನೀನು ಬಲ್ಲಂತೆ ಎನ್ನ ಮುಂದೆ ಸೂರೆಗೊಳ್ಳುತ್ತಿರ್ದಡೆ
ನಾನು ಬೇಕು ಬೇಡೆಂದು ಮನದಲ್ಲಿ ಮರುಗಿದೆನಾದಡೆ
ನಿಮ್ಮಾಣೆ ನಿಮ್ಮ ಪ್ರಥಮರಾಣೆ ಮನದೊಡೆಯ ನೀನೆ ಬಲ್ಲೆ
ಕಾಮನೇಮವೆಂಬ ಸಿಂಧು ಬಲ್ಲಾಳನ ವಧುವ
ಸರ್ವಭುವನದೊಡೆಯ ಸಂಗಮದೇವರು ಬೇಡುವಂತಲ್ಲ
ಎನ್ನ ಸತಿ ನೀಲಲೋಚನೆ ಪೃಥಿವಿಗೆ ಅಗ್ಗಳೆಯ ಚಲುವೆ
ಆಕೆಯನು ಸಂಗಮದೇವಾ ನೀನು ಜಂಗಮರೂಪಾಗಿ ಬಂದು
ಎನ್ನ ಮುಂದೆ ಸಂಗವ ಮಾಡುತ್ತಿರಲು
ಎನ್ನೊಡನಿರ್ದ ಸತಿಯೆಂದು ಮಾಯೆಕ್ಕೆ ಮರುಗಿದೆನಾದಡೆ

ನಿಮ್ಮಾಣೆ ನಿಮ್ಮ ಪ್ರಮಥರಾಣೆ ಮನದೊಡೆಯ ನೀನೆ ಬಲ್ಲೆ
ಪ್ರತ್ಯಕ್ಷವಾಗಿ ಸಿರಿಯಾಳಸೆಟ್ಟಿ ಚಂಗಳವ್ವೆಯ ಮನೆಗೆ ಬಂದು
ಅವರ ಮಗನ ಬೇಡುವಂತಲ್ಲ ಸಂಗಮದೇವಾ
ನಿಮ್ಮ ಹೆಸರು ಚಿಕ್ಕಸಂಗಯ್ಯನಿದ್ದಾನೆ
ನೀನು ಜಂಗಮರೂಪಾಗಿ ಬಂದು ಆತನ ಹಿಡಿದು
ಎನ್ನಮುಂದೆ ಹೆಡಗುಡಿಯ ಕಟ್ಟಿ ಚಿನಿಖಂಡವ ಮಾಡಿ
ಬಾಣಸವ ಮಾಡುವಾಗ ಎನ್ನ ಉದರಲ್ಲಿ ಬಂದ ಪುತ್ರನೆಂದು
ಮಾಯಕ್ಕೆ ನಾನು ಮರುಗಿದೆನಾದಡೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ ಮನದೊಡೆಯ ನೀನೇ ಬಲ್ಲೆ
ಇಂತೀ ತ್ರಿವಿಧವು ಹೊರಗಣವು
ಎನ್ನ ನೋವಿಗೊಳಗಲ್ಲ ಎನ್ನ ಬೇನೆಯೊಳಗಲ್ಲ
ಇನ್ನು ನಾನಿದ್ದೆನೆ ಕದ್ದ ಕಳ್ಳನ ಕಟ್ಟುವಂತೆ ಕಟ್ಟಿ
ನೀನು ಜಂಗಮ ರೂಪಾಗಿ ಬಂದು ಎನ್ನಂಗದ ಮೇಲೆ ತಪ್ಪವನಿಕ್ಕಿ ನೋಡು
ಬಸಿದ ತೂಲಪ್ರಾಪ್ತಿಯ ಮಾಡಿ ನೋಡು
ಸೂಜಿಯ ಮೊನೆಯಂತಿರ್ದ ತೂಲದಮೇಲಿಕ್ಕಿ ನೋಡು
ನವ ಖಂಡವ ಮಾಡಿ ಕಡಿಕಡಿದು ನೋಡು
ಆ ತೂಲವ್ವೆದ್ದೈದು ಮುಖವಾಗಿ ಹಾಯುವಾಗ
ಆ ಹಾವಿನಿಂದ ಹರಿತಿನಿಸಿ ನೋಡು
ಈ ರೀತಿಯಲ್ಲಿ ಎನ್ನ ಭಂಗ ಬಡಿಸಿ ನೋಡಿದಡೆಯೂ
ಲಿಂಗಾರ್ಚನೆಯ ಮಾಡುವುದು ಬಿಡೆ
ಜಂಗಮ ದಾಸೋಹವ ಮಾಡುವುದಂ ಬಿಡೆ
ಪಾದತೀರ್ಥ ಪ್ರಸಾದವಂ ಕೊಂಬುದಂ ಬಿಡೆ
ಇಂತೀ ತ್ರಿವಿಧಕ್ಕೆ ರೋಷವ ಮಾಡಿ ಬಿಟ್ಟೆನಾದಡೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಇಷ್ಟರೊಳಗೆ ತಪ್ಪುಳ್ಳಡೆ ಮೂದಲಿಸಿ
ಮೂಗು ಕೊಯ್ಯಿ ಕೂಡಲ ಸಂಗಮದೇವಾ

೪

ಅಡಿಗಡಿಗೆ ಬಂದು ಅಡರುತ್ತಿಪ್ಪೆ

ಕಡುಛಲ ನಿನಗೆ ಬೇಡ ಕಂಡೆಯಾ
ಮೃಡನೇ ಎನ್ನೊಡನೆ ತೋರಿ ನೀನು ಸಸಿನೆ ಹೋಗಲರಿಯೆ
ಆದು ಹೇಗಂದಡೆ ನಾನು ನಿನಗಂಜುವನಲ್ಲ
ಗಾಸಿಯಾಗಬೇಡ ಕಂಡೆಯಾ ಹರಹರಾ ಶಂಕರಾ
ಎನ್ನ ನೇಮಕ್ಕೆ ಅಡ್ಡಬಾರದಿರು
ಒಡವೆ ಸವೆದಡೆ ಒಡಲನೊಡ್ಡುವೆ
ಕಡಗಿ ನೋಡುವಡೊಮ್ಮೆ ಹಳಚು ಬಂದು
ಬಡವನ ಕೈಯ್ಯ ಕಡುಹ ನೋಡೆನ್ನೊಡೆಯ
ಸಂಗಯ್ಯ ಪ್ರಿಯ ಬಂಕೇಶ್ವರಾ
ಕಟ್ಟಿದೆ ಸೊರೆಯ ಬಟ್ಟೆ ಜನ್ನಿಗೆಯ
ನೆರೆ ಮುಟ್ಟಿ ಬಂದಿರಿದಡೆ ಓಸರಿಸುವನಲ್ಲ
ಓಡದಿರು ಓಡದಿರಾ
ನಿಮ್ಮ ಶರಣರ ಮನೆಯ ಬಿರಿದಿನಂಕಕಾರ
ಓಡದಿರು ಓಡದಿರು
ಎಲೆದೇವಾ ಎಲೆಶಿ ಸ್ವಾಮಿ ಎಲೆಲೆ ಹಂದೆ
ಓಡದಿರು ಓಡದಿರು ಕೂಡಲಸಂಗಮದೇವಾ

## ವೀರದಾಸತ್ವ ನಿಷ್ಠಾ ಸ್ಥಲ ೪೨

ಇಂತೀ ಪ್ರಕಾರದಿಂ ವೀರಮಾಹೇಶ್ವರನು ಜಂಗಮಾರ್ಚನೆಯ ಮಾಡು ವೆಡೆಯಲ್ಲಿ ಸತಿಸುತರ ಮೇಲೆ ಬಂದಡಂ ತನ್ನ ತನುವಿನ ಮೇಲೆ ಬಂದಡಂ ಓಸರಿಸದೆ ನಿಷ್ಠೆಯುಂತಾಗಿ ಮಾಡಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ವೀರಮಾಹೇಶ್ವರನು ಶಿವನಿಂದೆಯಂ ಕೇಳಲಾಗದೆಂದು ನುಡಿದ ವಚನಂಗಳು.

ಕಾಳಿಕಾಖಂಡೇ—

ಮನ್ನಿಮಿತ್ತ ಕೃತಂ ಪಾಪಮಪಿ ಧರ್ಮಾಯ ಕಲ್ಪತೇ ।
ಮಾನುಷ್ಯಾದ್ಯತ ಪುಣ್ಯೋಽಪಿ ಪಾಪಂ ಸ್ಯಾತ್ಪ್ರತ್ಯವಾಯಕೃತ್ ॥೧॥

ಶಿವಕಾರುಣ್ಯ ನಿಮಿತ್ತವಾಗಿ ಮಾಡಿದ ದೋಷಂಗಳು ಪುಣ್ಯವಾಗಿ ಸಲ್ಲುವವು. ಶಿವ ಕಾರುಣ್ಯಕ್ಕೆ ಸಲ್ಲದಂತಹ ಪುಣ್ಯಂಗಳು ಪಾಪವಾಗಿ ಸಲ್ಲುವವು.

ಶಿವಭಕ್ತ ವ್ರತೇ ನಿಂದಾನ ಶ್ರಾವ್ಯಾ ಶ್ರೂಯತೇ ಯದಿ ।
ನಿಂದಕಾನ್ನಿಕ್ಷಯಾಮೀತಿ ಗಣಾಚಾರೋಽಯಮೀರಿತಮ್ ॥೨॥

ವೀರಮಾಹೇಶ್ವರರುಗಳ ಸದ್ವ್ರತಂಗಳಲ್ಲಿಯ ನಿಂದೆಯನು ಆರು ಕೆಲಂಬರು ಮಾಡುತ್ತಿಹರೋ ಆ ನಿಂದೆಯಂ ಸದ್ಭಕ್ತರು ಕೇಳಲಾಗದು. ಎತ್ತಲಾನು ಭಕ್ತನಿಂದೆಯಂ ಕೇಳಿದಡೆ ಆ ಶಿವನಿಂದಕರುಗಳನು ಶಿಕ್ಷಿಸುವೆ ನೆಂಬ ಆವುದಾನೊಂದು ಅನ್ಯ ತಿರಸ್ಕಾರವುಂಟೋ ಅದು ಗಣಾಚಾರವೆಂದು ಹೇಳಲ್ಪಟ್ಟಿತು.

ಮಾತರಃ ಪಿತರಶ್ಚೈವ ಭ್ರಾತರೋ ಬಾಂಧವಾಂಸ್ತಥಾ ।
ಶಿವಕಾರ್ಯೇಷು ವಕ್ರಸ್ಥಾ ಹಂತವ್ಯಾಃ ಶೀಘ್ರಮೇವ ಚ ॥೩॥

ತಾಯಾಗಲಿ, ತಂದೆಯಾಗಲಿ, ಒಡಹುಟ್ಟಿದವರಾಗಲಿ, ಬಂಧುಗಳಾಗಲಿ ಶಿವ ಕಾರುಣ್ಯಕ್ಕೆ ವಕ್ರವಾದವರಂ ಅತಿ ಬೇಗನೇ ಕೊಲ್ಲುವುದು.

ಶಿವಧರ್ಮೇ—

ಅಹಿಂಸಾ ಶಿವಭಕ್ತಾನಾಮೇವ ಸ್ತಿಂದಾಕೃತೋಽಮುಮು ।
ತ್ರೈಲೋಕ್ಯಪ್ರಾಣಿನಃ ಸರ್ವೇ ಹಂತವ್ಯಾಕ್ಷ ಪ್ರಯತ್ನತಃ ॥೪॥

ಎಲ್ಲಾ ಪ್ರಾಣಿಗಳನ್ನು ಶಿವಭಕ್ತರು ಕೊಲ್ಲಲಾಗದು. ಶಿವನಿಂದಕರು ಮೂರುಲೋಕದವರಾದೊಡಂ ವಿಚಾರವಿಲ್ಲದೆ ಅವರಂ ಕೊಲ್ಲುವುದು.

ಶಿವಚಿನ್ಹಾಂಕಿತಂ ವೃಕ್ಷಂ ಹಂತಿಯೋ ದುರ್ಗುಣೀ ನರಃ ।
ತಂ ಹನ್ಯಾತ್ಸ್ವಸ್ಯಹಸ್ತೇನ ವೀರಮಾಹೇಶ್ವರೋ ವ್ರತೀ ॥೫॥

ಆವನಾನೊಬ್ಬ ದುರ್ಜನವಹ ಮನುಷ್ಯನು ಶಿವಚಿನ್ಹಾಂಕಿತವುಳ್ಳ ವೃಕ್ಷವನು ಕಡಿವನೋ ಅವನನ್ನು ವೀರಮಾಹೇಶ್ವರಾಚಾರವುಳ್ಳಾತನು ತನ್ನ ಹಸ್ತದಿಂದಲೇ ಕೊಲ್ಲುವುದು.

ಖನೇದ್ವಾ ಭುವಿ ತದ್ದೇಹಂ ದಹೇದ್ವಾಪ್ಯಾಶುಶುಕ್ಷಿಣಾ ।
ಕ್ಷಿಪೇದ್ವಾಂಭಸ್ಸು ಚೈನಂನ ತ್ಯಜೇದ್ವಾ ಕಾಷ್ಠ ಲೋಷ್ಟವತ್ ॥೬॥

ಕೊಂದಾತನ ಶರೀರವ ನಿಕ್ಷೇಪಿಸಿದಡಂ ಜ್ವಲಿಸುವ ಅಗ್ನಿಯಿಂ ಸುಟ್ಟಡಂ ಉದಕದಲ್ಲಿ ಬಿಟ್ಟಡಂ ಸೂತಕವಿಲ್ಲ ಆತಂಗೆ ಮುಂದೆ ಮಹತ್ತಪ್ಪ ಪದವಕ್ಕು ಕಾರಣ ಆತನನು ಕಟ್ಟಿಗೆ ಮಣ್ಣು ಹೆಂಟೆಗಳಂತೆ ಅಲಕ್ಷಿಸಬಾರದು.

ವಾತುಲ ತಂತ್ರೇ—

ಶಿವಪರಾಮಿಮಾಂ ನಿಂದಾಂ ಶಿವಭಕ್ತೋ ವಿವರ್ಜಯೇತ್ ।
ದೇಶತ್ಯಾಗೋಽಥ ಸಂಹಾರಃ ಶಪೇಚ್ಛ್ವೇಶ್ವರಂ ಸ್ಮರನ್ ॥೭॥

ಶಿವನ ನಿಂದಿಸುತ್ತಿರ್ದ್ದ ಕಡೆ ಶಿವಭಕ್ತನು ನಿಂದಕನನ್ನು ತೊಲಗುವುದು ಅಥವಾ ಆ ದೇಶವನೇ ಬಿಡುವುದು. ಇಲ್ಲದಿರೆ ನಿಂದಕನ ಸಂಹರಿಸುವುದು ಅಥವಾ ಶಿವನ ನಾಮಸ್ಮರಣೆಯಿಂ ಶಪಿಸುವುದು.

## ವಚನಗಳು

೧

ಅಯ್ಯಾ ಮಾತಾ ಪಿತೃಗಳಾಗಲಿ
ಸತಿಸುತರಾಗಲಿ ಸಹೋದರ ಬಂಧುಗಳಾಗಲಿ
ಅತ್ಯಂತ ಸ್ನೇಹದಲ್ಲಿ ಕೂಡಿದವರಾಗಲಿ
ಗುರು ಕಾರುಣ್ಯವ ಪಡೆದ ಶಿವಸೋದರರಾಗಲಿ
ಶಿವಜ್ಞಾನ ಶಿವಕಾರುಣ್ಯಕ್ಕೆ ಸಹಕಾರಿಗಳಲ್ಲದ ನಿಂದಕರನು
ಅತಿಬೇಗದಿಂದ ಕೊಲ್ಲುವುದು ಅದೆಂತೆಂದಡೆ

> ಮಾತರಃ ಪಿತರಶ್ಚೈವ ಭ್ರಾತರೋ ಬಾಂಧವಾಂಸ್ತಥಾ
> ಶಿವಕಾರ್ಯೇಷು ವಕ್ರಸ್ಥಾ ಹಂತವ್ಯಾಃ ಶೀಘ್ರಮೇವ ಚ ॥

ಎಂದುದನರಿದು ಶಿವಾಚಾರ ನಿಂದಕರನು ಎನ್ನ ಮನದಲ್ಲಿ
ಪತಿಕರಿಸಿ ಕೂಡಿಕೊಂಡು ನಡೆದೆನಾದಡೆ ಇಹಪರಕ್ಕೆ ಸಲ್ಲೆನು
ಅಘೋರ ನರಕದಲ್ಲಿಕ್ಕಯ್ಯಾ ಕಲಿದೇವರ ದೇವಾ

೨

ಶಿವಾಚಾರ ಶಿವಕಾರುಣ್ಯಕ್ಕೆ ವಕ್ರವಾದವರ
ಗುರುಲಿಂಗ ಜಂಗಮವ ನಿಂದಿಸಿ ನುಡಿದವರ
ಬಾಯಸೀಳಿ ನಾಲಿಗೆಯ ಕಿತ್ತು ಕೊಲುವೆನು ಅದೆಂತೆಂದಡೆ

> ಯೊವಾಪ್ಯುತ್ಪಾಟಯೋಜ್ಜಿಹ್ವಾಂ ಶಿವನಿಂದಾ ರತಸ್ಯತು
> ತ್ರಿಸಪ್ತಕುಲಮುದ್ಧೃತ್ಯ ಶಿವಲೋಕೇ ಮಹೀಯತೇ ॥

ಎಂದುದಾಗಿ ಮತ್ತಂ ಶಿವ ಭಕ್ತನಿಂದೆಯನು ಎನ್ನ ಕಿವಿಯಲ್ಲಿ ಕೇಳಿ
ಆ ನಿಂದಕರ ಕೊಲುವೆನು ಅಲ್ಲದಿರ್ದಡೆ ತಾನಾ ಸಾಯುವೆನು
ಅದೆಂತೆಂದಡೆ—

> ಶ್ರುತ್ವಾ ನಿಂದಾಂ ಶಿವಸ್ಯಾಥ ತತ್‌ಕ್ಷಣಾದ್ವಪುಸ್ಸಂತ್ಯಜೇತ್
> ತಸ್ಯ ದೇಹಂ ನಿಹಂತಾ ಚೇದ್ರುದ್ರಲೋಕಂ ಸ ಗಚ್ಛತಿ ॥

ಎಂದುದಾಗಿ ಇದನರಿತು ಶಿವನಿಂದಕರ
ಸಂಹರಿಸಿದಲ್ಲದೆ ಎನಗೆ ಸಂತೋಷವಿಲ್ಲವಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೩

ಮುರಿಸಬೇಕು ಹೊಲೆಯರ ಕೈಯಿಂದವರ ಮನೆಯನು
ಕೆರಿಸಬೇಕು ಮಂಡೆಯನೇಳು ಪಟ್ಟಿಯ ಮಾಡಿ
ಕುಳ್ಳಿರಿಸಬೇಕು ಕತ್ತೆಯ ನಡು ಬೆನ್ನ ಮೇಲೆ
ಹುಟ್ಟಿಗೆಯ ನುಡಿಸ ಬೇಕು
ಹಳೆಮರವ ಸತ್ತಿಗೆಯ ಹಿಡಿಯಬೇಕವಗೆ
ನಿಷ್ಠೂರಸಬೇಕು ನೊಸಲಕ್ಷರವ
ನಾಲಿಗೆಯ ಸರ‍್ರಸರ‍್ರನೇ ಶೀಳಬೇಕು
ಎಷ್ಟೊಡೆಯ ಮಹಾ ಮಹಿಮ ಸೊಡ್ಡಳಂಗೆ
ಅನ್ಯದೈವ ಸರಿಯೆಂಬ ಕುನ್ನಿ ಮಾನವನ

## ವಿಶ್ವಾಸ ಪ್ರತಿಷ್ಠಾ ಸ್ಥಲ ೪೩

ಇಂತೀ ಪ್ರಕಾರದಿಂ ವೀರಮಾಹೇಶ್ವರರು ಶಿವನಿಂದೆಯ ಮಾಡುವರಂ ಸಂಹರಿಸ ಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ವೀರಮಾಹೇಶ್ವರರು ಗುರುಲಿಂಗ ಜಂಗಮದಲ್ಲಿ ಗುಣಾವ ಗುಣಂಗಳ ನೋಡದೆ ಶಿವನೆಂದು ನಂಬಿ ವಿಶ್ವಾಸಮಂ ಮಾಡಬೇಕೆಂಬುದಂ ನುಡಿದ ವಚನಂಗಳು.

ಸ್ಕಾಂದೇ—

ಶಿಲಾವೃದ್ದಾರು ರೂಪೇಷು ಸ್ಥಿತಃ ಸರ್ವೇಶ್ವರೋ ಹರಃ ।
ಅತೌಕಿಕೇಷು ವಿದ್ವತ್ಸು ಭಾವವಸ್ಸು ನ ಕಿಂ ವಸೇತ್ ॥೧॥

ಶಿಲೆಯು ಮೃತ್ತಿಕೆಯು ಮರನು ಎಂಬ ಈ ಜಡವಸ್ತು ರೂಪುಗಳಲ್ಲಿ ಭಾವಿಸಿದಡೆ ಇರುತ್ತಿದ್ದ ಸರ್ವೇಶ್ವರನಾದ ಶಿವನು ಲೋಕದಂತವರುಗಳಲ್ಲದೆ ಚೈತನ್ಯವುಳ್ಳವರಾದ ವಿದ್ವಾಂಸರಲ್ಲಿರನೇ ? ಇರುವನು.

ಕೂರ್ಮೇ—

ಅಶರೀರಾದಿ ಸಂಬಂಧಃ ಪರಾತ್ಪರತರಃ ಶಿವಃ ।
ಅನನ್ಯಭಾವೈರೇತೈಶ್ಚ ಸ್ವಭಕ್ತೈರೇವ ಮೂರ್ತಿಮಾನ್ ॥೨॥

ದೇಹ ಮೊದಲಾಗಿಯುಳ್ಳವರೊಡತಣ ಸಂಬಂಧ ವಿಲ್ಲದಾತನಾಗಿ ಮೂಲ ಪ್ರಕೃತಿಯಿಂ ಮಿಗೆ ಮೇಲಣಾತನಾದ ಶಿವನು ಅನ್ಯಭಾಂಗಳಿಲ್ಲದವ ರಾಗಿ ಮಿಗೆ ನಿರ್ಮಲರಾದ ತನ್ನ ಈ ಸದ್ಭಕ್ತರುಗಳಿಂದಲೇ ಮೂರ್ತಿ ಯುಳ್ಳಾತನು.

ಶಿವಧರ್ಮೇ—

ಅಥವಾ ಕ್ರಿಮಿದಂ ಚಿತ್ರಂ ಶಿವಭಕ್ತಜನೇಷ್ವಹೋ ।
ಆವಿರ್ಭವೇತ್ಸ್ವಯಂ ರುದ್ರೋ ಯಥಾ ರುದ್ರಸ್ತಥಾರ್ಚಕಾಃ ॥೩॥

ರುದ್ರಭಕ್ತರು ತಾವೇ ರುದ್ರರಾದಕಾರಣ ಆ ಶಿವಭಕ್ತರಾದ ಜನರು ಗಳಲ್ಲಿ ಶಿವನು ತಾನೇ ಪ್ರಕಾಶವಹನೆಂಬುದೇನಾಶ್ಚರ್ಯ.

## ವಚನಗಳು

೧

ಗುರುಲಿಂಗ ಜಂಗಮುವ ನಂಬಿ ಕರೆದಡೆ ಓ ಎಂಬ ಶಿವನು
ನಂಬದೆ ಕರೆದಡೆ ಓ ಎಂಬನೇ ಶಿವನು
ನಂಬಲರಿಯರು ನಚ್ಚಲರಿಯರು ಡಂಭಿನ ಭಕ್ತರು
ನಂಬದೆ ನಚ್ಚದೆ ಬರಿದೆ ಕರೆದಡೆ ಶಂಭು ಮೌನದಲ್ಲಿಪ್ಪ
ನಮ್ಮ ಕೂಡಲ ಸಂಗಮದೇವರು

೨

ನೆರೆನಂಬೋ ನೆರೆನಂಬೋ ಗುರುಲಿಂಗ ಜಂಗಮುವ
ದರದುರವಿಲ್ಲದೆ ಸಾಮವೇದಿಗಳಂತೆ
ನೆರೆನಂಬೋ ನೆರೆನಂಬೋ ದಾಸದುಗ್ಗಳಿಯಂತೆ
ನೆರೆನಂಬೋ ನೆರೆನಂಬೋ ಶಿರಿಯಾಳ ಚಂಗಳೆಯರಂತೆ
ನೆರೆನಂಬೋ ನೆರೆನಂಬೋ ಕೆಂಭಾವಿಯ ಭೋಗಣ್ಣನಂತೆ
ನೆರೆನಂಬೋ ನೆರೆನಂಬೋ ಸಿಂಧು ಬಲ್ಲಾಳನಂತೆ
ನೆರೆನಂಬಿದೆಯಾದಡೆ ತನ್ನನೀವ ಕೂಡಲಸಂಗಮದೇವನು

೩

ಸಟೆಯ ದಿಟವ ಮಾಡಿ ಸ್ವಭಾವವಾಗಿ ಸದ್ಭಾವಲಿಂಗವಾಗಿ
ಲಿಂಗವ ಸದ್ಭಕ್ತಿಯಿಂ ಪೂಜಿಸಿ ವರವಂ ಪಡೆದರು
ಶಿವಪಥವ ಪಡೆದರು ಪುರಾತನರು ಅದೆಂತೆನಲು ಕೇಳಿರೇ
ಬಳ್ಳವು ಲಿಂಗವೇ? ಅಲ್ಲ ಅದು ಸಟೆ ಸದ್ಭಾವದಿಂದ ಲಿಂಗವಾಯಿತ್ತು
ಬಳ್ಳೇಶ್ವರ ಮಲ್ಲಯ್ಯಗಳಿಗೆ
ಆಡಿನ ಹಿಕ್ಕೆ ಲಿಂಗವೇ? ಅಲ್ಲ ಅದು ಸಟೆ ಸದ್ಭಾವದಿಂದ
ಲಿಂಗವಾಯಿತ್ತು ಗೊಲ್ಲಳಂಗೆ
ನರಮಾಂಸವ ಭಕ್ಷಿಸುವನೆಂಬುದು ಜಂಗಮ ಸ್ಥಲವೇ
ಅಲ್ಲ ಅದು ಸಟೆ ಸದ್ಭಾವದಿಂದ ಪ್ರಸನ್ನನಾದ ಶಿವನು ಶಿರಿಯಾಳಂಗೆ
ವೀಣೆ ಕಂಕರಿಗೋಲ ಹಿಡಿದು ಬಪ್ಪುದು ಜಂಗಮ ಸ್ಥಲವೇ

ಅಲ್ಲ ಅದು ಸಟೆ ಸದ್ಭಾವದಿಂದ ಪ್ರಸನ್ನನಾದ ಶಿವನು ಭೋಗಣ್ಣಂಗೆ
ಸತ್ತ್ರಕರುವ ಹೊತ್ತುಕೊಂಡು ಬಹುದು ಜಂಗಮಸ್ಥಲವೇ
ಅಲ್ಲ ಅದು ಸಟೆ ಸದ್ಭಾವದಿಂದ ಪ್ರಸನ್ನನಾದ ಶಿವನು ಸಾಮವೇದಿಗಳಿಗೆ
ಡೊಂಬತಿ ಗುರುವೇ ಅಲ್ಲ ಅದು ಸಟೆ ಸದ್ಭಾವದಿಂದ
ಪ್ರಸನ್ನನಾದ ಶಿವನು ಬಿಲ್ಲಮರಾಯಂಗೆ
ಇಂತಿವರು ಮೊದಲಾಗಿ ಅನಂತರುಂಟು
ಸಟೆಯ ದಿಟವ ಮಾಡಿ ನಿಜ ಪದವ ಸೈದಿದವರು ಅದಂತಿರಲಿ
ಇನ್ನು ದಿಟವ ಸಟೆಯ ಮಾಡಿ ಆರಾರು ಕೆಟ್ಟರೆಂಬುದ ಕೇಳಿರಣ್ಣಾ
ದೇವ ಜಾತಿಗಳೆಲ್ಲರೂ ದೇವ ಶಿಖಾಮಣಿಯ ಹತ್ತಿರೆಯಲಿದ್ದು
ಬ್ರಹ್ಮನಿರಾಕಾರವೆಂದು ಪರಬ್ರಹ್ಮವಂ ಹುಸಿಯಮಾಡಿ
ಸನತ್ಕುಮಾರನು ಒಂಟೆಯಾಗನೇ
ಅನಂತ ಆ ಬ್ರಹ್ಮಾದಿಗಳ ಹೆತ್ತ ತಂದೆಯ ಹುಸಿಯಮಾಡಿ
ತಾನು ಕರ್ತನೆಂದು ಶಿರಸ್ಸ ಹೋಗಾಡನೇ ಬ್ರಹ್ಮನು
ಸರ್ವಲೋಕಂಗಳಿಗೆ ಸುಖವ ಮಾಡುವ ಶಂಕರನ
ಹುಸಿಯಮಾಡಿ ಕರ್ಮದಿಂದ ಸುಖವನೇ ಪಡೆವೆನೆಂದು
ದಕ್ಷ ತಲೆಯ ನೀಗಿ ಕುರಿದಲೆಯ ಮಾಡಿ ಕೊಳ್ಳನೇ

"ಪ್ರಭುಃ ಪ್ರೇರಕ ವಿಶ್ವಭುಕ್"

ಎಂದು ಶ್ರುತಿಹೊಗಳುವ ಮಹಾ ಕಾರಣಿಕನಂ ಹುಸಿಮಾಡಿ
ತಾನೇ ಜಗತ್ಸಂಹಾರ ಕಾರಕನೆಂದು ನರಸಿಂಹನು ತೊಗಲ
ಸುಲಿಸಿ ಕೊಳ್ಳನೇ
ಇಂತಿವರು ಮೊದಲಾದ ಮದಾಂಧರನಂತರುಂಟು
ದಿಟವ ಸಟೆಯ ಮಾಡಿ ಶಿಕ್ಷೆಗೊಳಗಾದರು ಕೇಳಿರೇ
ಅಯ್ಯಗಳಿರಾ ಅದಂತಿರಲಿ ಆ ಪುರಾತನರಂತೆ
ಸಟೆಯ ದಿಟವ ಮಾಡುವುದು ಅಘಟಿತಘಟಿತತ್ವವು ಅದು ಬೇಡ
ಆ ಮದಾಂಧರುಗಳಂತೆ ದಿಟವ ಸಟೆಯಮಾಡುವ
ಸಾಮರ್ಥ್ಯ ಪುರುಷರುಗಳಲ್ಲ ಅದೂ ಸಲ್ಲದು
ಮತ್ತೆಂತೆನಲು ಕೇಳಿರೇ ಸಟೆದಿಟಂಗಳ ಸಂಶಯವ ಬಿಡಿಸಿ

ಸಹಜಲವ ನೆಲೆಗೊಳಿಸುವ ಶ್ರೀಗುರುಲಿಂಗ ಜಂಗಮವ ನಂಬಿ
ಸದ್ಭಾವ ಶುದ್ಧಿಯಿಂದ ಭಜಿಸಿ ಮುಕ್ತರಾಗಿರೇ
ಸಟೆಯೆಂದು ನರಕಕ್ಕಿಳಿಯದೆ ದಿಟವೆಂದು ರುದ್ರಲೋಕವನರಸದೆ
ಸಹಜವೆಂದು ತ್ರಿವಿಧ ಲಿಂಗವ ನಂಬಿದಿರಾಯಿತ್ತಾದಡೆ
ಕೇವಲ ಮುಕ್ತಿಯನೀವ ನಮ್ಮ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರನು

೪

ಬಳ್ಳಿ ಬೇವಿನ ಕೊರಡು ಆಡಿನ ಹಿಕ್ಕೆ ಲಿಂಗವೇ ?
ಅಲ್ಲ ಅದು ಸಟೆ ಸದ್ಭಾವದಿಂದ ಭಾವಿಸಿ
ಲಿಂಗವ ಮಾಡಿ ಸದ್ಭಕ್ತರಾದರು ಪುರಾತನರು
ಕೇವಲ ಪರಶಿವ ಮೂರ್ತಿ ತಾನೇ ಶ್ರೀಗುರುಲಿಂಗ ಜಂಗಮವಾದ
ಆ ಶ್ರೀಗುರುಲಿಂಗ ಜಂಗಮವನು ವಿಶ್ವಾಶಿಸಿ ಮುಕ್ತರಾಗಲರಿಯದೆ
ಅವಿಶ್ವಾಸದಿಂದ ಸಟೆಯ ಮಾಡಿ ನರಕಕ್ಕಿಳಿವವರ ನೋಡಾ
ಅಕಟಕಟಾ ಅವರು ಆದಂತಾಗಲಿ
ಮನವೇ ನಾನಿನ್ನ ಬೇಡಿಕೊಂಬೆನು
ನಂಬು ಕಂಡೆಯಾ ಸಹಜವೆಂದು
ಶ್ರೀಗುರುಲಿಂಗ ಜಂಗಮವ ನಂಬಿದೆಯಾದಡೆ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರ ಕೂಡಿಕೊಂಬನು

## ಶಿವಲಿಂಗ ವಿಕಳಾವಸ್ಥೆಯ ಸ್ಥಲ ೪೪

ಇಂತೀ ಪ್ರಕಾರದಿಂ ಸದ್ಭಕ್ತರು ಗುರುಲಿಂಗ ಜಂಗಮವ ಶಿವನೆಂದು ಸದ್ಭಾವದಿಂ ಭಾವಿಸಿ ಶಿವನ ಪ್ರಸನ್ನತೆಯಂ ಮಾಡಿಕೊಳ್ಳಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಹಾ ಪುರಾತನರು.

ಇಂತಹ ಸದ್ಭಕ್ತರು ಗುರುಲಿಂಗ ಜಂಗಮವನೇಕೀಕರಿಸಿ ಶಿವನೆಂದೇ ನಿಶ್ಚಯಿಸಿ ಮನ ಮಗ್ನವಾಗಿ ತನುಧರ್ಮವನು ಮರೆದು ನುಡಿದ ವಚನಂಗಳು.

ಶಿವಧರ್ಮೇ—

ಪೂಜಾಕಾಲೇ ಪ್ರಸನ್ನೋsಪಿಪ್ರತ್ಯಕ್ಷೇತು ನ ಜಲ್ಪಸಿ ।
ತ್ವ ದಾಗಮನ ಕಾಂಕ್ಷಾಂಚ ಚಿಂತಯಾಮಿ ಮಹೇಶ್ವರ ॥೧॥

ಎಲೈ ಶಿವನೇ ನಿನ್ನನ್ನು ಪೂಜಿಸುವ ವೇಳೆಯಲ್ಲಿ ಪ್ರಸನ್ನನಾಗಿರ್ದು ಪ್ರತ್ಯಕ್ಷದಲ್ಲಿ ನುಡಿಯಲೇಕೊಲ್ಲೆ ನಿನ್ನ ಬರವ ಹಾರಿ ಚಿಂತಿಸುತ್ತಿರ್ದೆನು.

ಶಿವಧರ್ಮೋತ್ತರೇ—

ಏಹ್ಯೇಹಿ ಭೋಮಹಾದೇವ ತವರೂಪಂ ಪ್ರಕಾಶಯ
ಯದಾಮಾಂ ಪ್ರತಿನಾಯಾಸಿತದಾ ಶುಷ್ಕದ್ರುಮೋsಸ್ಮ್ಯಹಮ್ ॥೨॥

ಬಾರಯ್ಯ ಬಾರಯ್ಯಾ ಎಲೆ ಶಿವನೇ ನಿನ್ನ ಸ್ವರೂಪವನ್ನು ಪ್ರಕಾಶಿಸಯ್ಯಾ ನೀನಾವಾಗ ಬಾರದಿರ್ದಡೆ ಆಗಲೇ ನಾನು ಒಣಗಿದ ಮರನಾಗುತ್ತಿದ್ದೇನೆ.

ಶುಕಪರಪುಷ್ಟಮಯೂರಾ ಯಂೂಯಂ ನ್ಯೈಕ್ಷೇತ ಕುತ್ರ ಮನ್ನಾಥಮ್ ।
ದೃಷ್ಟಶ್ಚೇತ್ ಖಲು ಬ್ರೂಥ ಪರಪುರುಷಾರ್ಥ ಪರಾಯಣಾ ಭವಂತಃ ॥೩॥

ಎಲೆ ಗಿಳಿ ಕೋಗಿಲೆ ನವಿಲುಗಳಿರಾ ನೀವು ನಮ್ಮ ಶಿವನ ಕಾಣಿರೇ ? ಕಂಡರೆ ಹೇಳಿರೇ ನೀವು ಪರ ಪುರುಷಾರ್ಥ ಪರಾಯಣರು.

ಶಿವರಹಸ್ಯೇ—

ಸ್ನಾನ ವಸ್ತ್ರಾದ್ಯಲಂಕಾರೈರ್ಗಂಧ ಮಾಲ್ಯಾನು ಲೇಪನೈಃ ।
ಶಯ್ಯಾ ತಾಂಬೂಲ ಸಂರಂಭೈಃ ಸನ್ನದ್ಧಾಸ್ಮಿ ನಾಯಾತಿಸಃ ॥೪॥

ಸ್ನಾನ ವಸ್ತ್ರ ಮೊದಲಾದ ಅಲಂಕಾರಗಳಿಂದಲೂ ಗಂಧ ಪುಷ್ಪ ಮಾಲ್ಯಾನು ಲೇಪನಗಳಿಂದಲೂ ಹಾಸಿಗೆ ತಾಂಬೂಲ ಮೊದಲಾದ ಸಂಭ್ರಮ ಗಳಿಂದ ಅತ್ಯಂತ ಸನ್ನದ್ಧೆಯಾಗಿದ್ದೇನೆ ಆ ನನ್ನೊಡೆಯನು ಬರಲೊಲ್ಲನು.

ಸೌರಸಂಹಿತಾಯಾಮ್—

ಬಾಹ್ಯಸಂರಂಬಣಂ ಕೃತ್ವಾ ಶಂಭೋರಾಭ್ಯಂತರಂ ಶುಭಮ್
ಸದ್ಭಾವ ಸಂಭ್ರಮಾದೇವ ಮಯಿತಿಷ್ಠ ಮಾಹೇಶ್ವರ ॥೫॥

ಎಲೈ ಪರಮೇಶ್ವರಾ ನನ್ನ ಬಾಹ್ಯ ಕರಣಂಗಳನ್ನು ಸಂಭ್ರಮಿಸಿ ಅಂತ ರಂಗವನು ಶೋಧಿಸಿಹೆನು. ನನ್ನ ಸದ್ಭಾವ ಸಂಭ್ರಮದೊಡನೆ ಬಂದು ನನ್ನೊಳಗೆ ಚನ್ನಾಗಿರು.

## ವಚನಗಳು

೧

ಬಾರೆಯೇಕಯ್ಯಾ ನಿಮ್ಮ ಬರವ ಹಾರುತ್ತಿಹೆನು
ಸಾರೆಯೇಕಯ್ಯಾ ನಿಮ್ಮ ಸರವ ಹಾರುತ್ತಿಹೆನು
ತೋರೆಯೇಕಯ್ಯಾ ನಿಮ್ಮ ಲಿಂಗರೂಪವನು ನಿಜಜ್ಞಾನವನು
ಪೂಜೆಗೊಂಬಾಗಲಲ್ಲದೆ ಬರಲಾಗದೇ
ಮಹಾಲಿಂಗ ಕಲ್ಲೇಶ್ವರಾ ಕರುಣೆಯಿಲ್ಲವೇ ತಂದೇ

೨

ಅಯ್ಯಾ ನಿಮ್ಮ ವಿಕಳದಲ್ಲಿ ನೆನೆವುತ್ತ
ಗಾಳಿಯ ಸರವೇ ನೀವೆಂದು ಬಗೆದೆ ಕಂಡಯ್ಯಾ
ಕಪಿಲಸಿದ್ಧ ಮಲ್ಲಿನಾಥಯ್ಯಾ ನಿಮ್ಮ ವಿಕಳದಲ್ಲಿ
ಮಹಾ ಭ್ರಾಂತನಾಗಿಹೆನಯ್ಯಾ

೩

ಅಯ್ಯಾ ನೀನೇಕೆ ಬರಲೊಲ್ಲೆ ಹೇಳಯ್ಯಾ

ನೀ ಬಾರದಿರಲಾನು ಕಲ್ಲು ಮರನಾಗಿಹೆನಯ್ಯಾ
ಕಪಿಲ ಸಿದ್ಧಮಲ್ಲಿನಾಥಯ್ಯಾ ನೀ ಬಾರಯ್ಯ ನಿಮ್ಮ ಧರ್ಮ ಹೇಳಯ್ಯಾ

೪

ಚಿಲಿಮಿಲಿಯೆಂದೋದುವ ಗಿಳಿಗಳಿರಾ
ನೀವು ಕಾಣಿರೇ ನೀವು ಕಾಣಿರೇ
ಕೊಳನ ತಡೆಯಲಾಡುವ ಹಂಸೆಗಳಿರಾ
ನೀವು ಕಾಣಿರೇ ನೀವು ಕಾಣಿರೇ
ಸರವೆತ್ತಿ ಪಾಡುವ ಕೋಗಿಲೆಗಳಿರಾ
ನೀವು ಕಾಣಿರೇ ನೀವು ಕಾಣಿರೇ
ಎರಗಿ ಬಂದಾಡುವ ತುಂಬಿಗಳಿರಾ
ನೀವು ಕಾಣಿರೇ ನೀವು ಕಾಣಿರೇ
ಗಿರಿ ಗಹ್ವರದೊಳಗಾಡವ ನವಿಲುಗಳಿರಾ
ನೀವು ಕಾಣಿರೇ ನೀವು ಕಾಣಿರೇ
ಚೆನ್ನಮಲ್ಲಿಕಾರ್ಜುನದೇವನೆಲ್ಲಿದ್ದಾನೆಂಬುದಂ
ಬಲ್ಲರೆ ನೀವು ಹೇಳಿರೇ

೫

ಹೊಳೆವ ಕೆಂಜೆಡೆಯ ಮೇಲೆ ಎಳೆವೆಳದಿಂಗಳು
ಫಣಾ ಮಣಿ ಕರ್ಣ ಕುಂಡಲ ನೋಡವ್ವಾ
ರುಂಡ ಮಾಲೆಯು ಕೊರಳಗರುವನ ಕಂಡರೆ ಒಮ್ಮೆ ಬರ ಹೇಳವ್ವಾ
ಗೋವಿಂದನ ನಯನವವನ ಉಂಗುಟದ ಮೇಲಿಪ್ಪುದು
ಚೆನ್ನಮಲ್ಲಿಕಾರ್ಜುನದೇವಂಗಿದು ಕುರುಹವ್ವಾ

೬

ಭಾವನೇಕೆ ಬಾರನೆನ್ನ ಮನೆಗೆ
ಹರಿಯ ಮಗನನುರುಹಿದ ಗರ್ವದ ಭಾವನೇಕೆ ಬಾರನೆನ್ನ ಮನೆಗೆ
ಅಸುರರ ಪುರವ ಸುಟ್ಟ ವೀರವೈಭವನೇಕೆ ಬಾರನೆನ್ನ ಮನೆಗೆ
ದಕ್ಷನ ಶಿರವನರಿದು ಯಾಗವ ಕೆಡಿಸಿ ಕುರಿದಲೆಯ ಹತ್ತಿಸಿದ
ಬಿನ್ನಾಣದ ಬಲುಹ ಮೆರೆವ ಏಕೋ ಭಾವನೇಕೆ ಬಾರನೆನ್ನ ಮನೆಗೆ
ಹರಿಯ ನಯನದ ಪೂಜೆಯು ಚರಣದೊಳೊಪ್ಪಿತೆಂಬ

ದುರುಳತನವು ತನಗೆ ಬೇಡವವ್ವಾ
ಪರ ವಧುವಿಂಗಳುಪಿದ ಮಿಂಡತನದ ದುರುಳ ತನವು ತನಗೆ ಬೇಡವ್ವಾ
ಆತನ ಕರೆದು ತಾರವ್ವಾ ಶಂಭು ಜಕ್ಕೇಶ್ವರನ
ನೆರೆದು ನೋಡುವೆ ಮನ ಬಂದ ಪರಿಯಲ್ಲಿ
ಒತ್ತಂಬರಿಸಿ ಗಂಡುದೋರಿ ಮೀರಿದನಾದಡೆ
ಶರಣರಿಗೆ ಸಾರಿದೂರುವೆನು

೭

ಅಯ್ಯಾ ನೀ ಬಾರಯ್ಯಾ
ಬಂದೆನ್ನ ಹೃದಯದಲ್ಲಿ ಸಿಂಹಾಸನವ ಮಾಡಿ ನಿಲ್ಲಯ್ಯಾ
ಆಹಾ ಅಯ್ಯಾ ನೀ ಬಾರ ನಿಮ್ಮ ಧರ್ಮ ಕಪಿಲಸಿದ್ಧಮಲ್ಲಿನಾಥಯ್ಯಾ
ನಿಮ್ಮ ಬರವ ಹಾರಿ ಕಣ್ಣು ಮುಚ್ಚದೆನ್ನ ಮನ ನೀ ಬಾರಯ್ಯಾ

೮

ಹೊನ್ನ ಹಾವುಗೆಯ ಮೆಟ್ಟಿದಾತನ
ಮಿಡಿಯ ಮುಟ್ಟಿದ ಕೆಂಜಡೆಯವನ
ಮೈಯ್ಯಲಿ ವಿಭೂತಿಯ ಪೂಸಿದವನ
ಕರದಲ್ಲಿ ಕಪಾಲವ ಹಿಡಿದವನ
ಶರೀರದರ್ಧವ ಸತಿಗೆ ಕೊಟ್ಟವನ
ಬಾಣನ ಬಾಗಿಲ ಕಾಯ್ದವನ
ನಂಬಿಗೆ ಕುಂಟಣಿಯಾದವನ
ಚೋಳಂಗೆ ಹೊನ್ನ ಮಳೆ ಕರೆದವನ
ಎನ್ನ ಮನಕ್ಕೆ ಬಂದವನ
ಸದ್ಭಕ್ತರ ಹೃದಯದಲಿಪ್ಪವನ
ಮಾಡುವ ಪೂಜೆಯ ಕೊಂಬವನ
ಕೊಂಡು ಬಾರೆಲಗವ್ವಾ ಕೂಡಲಸಂಗಯ್ಯನೆಂಬವನ

ಅರಸಿನವನೇ ಮಿಂದು ಹೊಂದೊಡಗೆಯನೇ ತೊಟ್ಟು
ದೇವಾಂಗವನುಟ್ಟು ಪುರುಷ ಬಾರಾ

ಪ್ರಣ್ಯರತ್ನವೇ ನಿನ್ನ ಬರವು ಎನ್ನಸುವಿನ ಬರವು ಬಾರಯ್ಯ
ಚೆನ್ನಮಲ್ಲಿಕಾರ್ಜುನಯ್ಯ ಬಂದಾನೆಂದು
ಬಟ್ಟೆಗಳ ನೋಡಿ ನಾನು ಬಾಯಾರುತ್ತಿಹೆನು

೧೦

ಒಳಗೆ ಶೋಧಿಸಿ ಹೊರಗಳವಡಿಸಿ
ಭಾವದಿಂ ಗುಡಿ ತೋರಣವ ಕಟ್ಟುವೆನಯ್ಯಾ
ಎನ್ನ ಲಿಂಗವೇ ಬಾರಯ್ಯ ಎನ್ನ ದೇವ ಬಾರಯ್ಯ
ಎನ್ನಂತ ರಂಗದ ಪರಂಜ್ಯೋತಿರ್ಲಿಂಗವ
ಇದಿರುಗೊಂಬೆನು ಬಾರಯ್ಯ
ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಧರ್ಮವು ಬಾರಯ್ಯ

೧೧

ಮನವ ಮಂಚವ ಮಾಡಿ ಚಿತ್ತವ ಪಚ್ಚಡಿಸುವೆ ಬಾರಯ್ಯ
ಎನ್ನ ಶಿವಲಿಂಗವೇ ಬಾರಯ್ಯ
ಎನ್ನ ಭಕ್ತವತ್ಸಲನೇ ಬಾರಯ್ಯ
ಎನ್ನ ಭಕ್ತದೇಹಿಕ ದೇವನೇ ಬಾರಯ್ಯ
ಎನ್ನ ಅಂತರಂಗದೊಳಿರು ಬಾರಯ್ಯ
ಎನ್ನ ಬಹಿರಂಗದೊಳಿರು ಬಾರಯ್ಯ
ಓಂ ನಮಃ ಶಿವಾಯ ಎಂದು ಕರೆವೆನುಳಿಯುಮೇಶ್ವರಾ

## ಶಿವಲಿಂಗ ಕೋಟಾತುರ ಸ್ಥಲ ೪೫

ಇಂತೀ ಪ್ರಕಾರದಿಂ ಸದ್ಭಕ್ತರ ಮನಭಾವ ಕರಣಂಗಳು ಲಿಂಗದಲ್ಲಿ ನೆಲೆಗೊಂಡು ದಶಾವಸ್ಥೆಯ ಮೋಹವಿರಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಸದ್ಭಕರು ಅರಿವು ಮರುವೆಗಳನತಿಗಳೆದು ಲಿಂಗದಲ್ಲಿ ಸಂಯೋಗವ ಮಾಡಬೇಕೆಂಬುದಂ ನುಡಿದ ವಚನಂಗಳು.

ಶಿವಧರ್ಮೇ—

> ಜ್ಯೋತಿಸ್ಮರಣಮಾತ್ರೇಣ ನ ನಶ್ಯತಿ ಯಥಾ ತಮಃ ।
> ತಥಾ ಸುಜ್ಞಾನರಹಿತೈಃ ಕ್ರಿಯಾದ್ಯೈರ್ನ ಶಿವೋ ಭವೇತ್ ॥೧॥

ಹೇಗೆ ಜ್ಯೋತಿಯ ನೆನೆದ ಮಾತ್ರದಲ್ಲಿ ಕತ್ತಲೆಯು ಕೆಡಲಾರದೋ ಹಾಗೆ ಸಮ್ಯಜ್ಞಾನರಹಿತವಾದ ಕ್ರಿಯಾದಿಗಳಿಂದ ಶಿವ ತತ್ವವನೈದ ಲಾಗದು.

ಲೈಂಗೇ—

> ಕಾತರೋ ನಾಸ್ತಿ ಸಾಥಸ್ಯ ಕ್ಷಾಂತಿರ್ನಾಸ್ತಿ ಮಮಾಪಿ ಚ ।
> ಆವಯೋಃ ಸಮಸಂಯೋಗೇ ಸಖೀ ನಾಸ್ತಿ ಮನಸ್ವಿನೀ ॥೨॥

ಎನ್ನೊಡೆಯಂಗೆ ಆತುರವಿಲ್ಲ ನನಗೆ ಸೈರಣೆಯಿಲ್ಲ ನಮ್ಮಿಬ್ಬರಿಗೆಯೂ ಮಾಡಿ ಕೊಡುವರೆ ವಿವೇಕಿಯಾದ ಸಂಗಡತಿಯೂ ಇಲ್ಲ.

ವೀರಾಗಮೇ—

> ಕಾಮಸಂಗೋ ಮಹಾಸಂಗಃ ಸಂಗಾಂತೇ ತ್ವಪ್ರಿಯಸ್ತಥಾ ।
> ಶಿವಸಂಗೋ ಮಹಾಸಂಗೋ ಮಹಾ ಪ್ರೀತಿಃ ಪುನಃ ಪುನಃ ॥೩॥

ಕಾಮ ಸಂಗವ ಮಾಡುವ ಹಾಗೆ ಗುರುಲಿಂಗ ಜಂಗಮದ ಸಂಗವ ಮಾಡಬೇಕು. ಆ ಕಾಮ ಸಂಗವು ಅಂತ್ಯದಲ್ಲಿ ಅಪ್ರಿಯವಹುದು ಗುರುಲಿಂಗ

ಜಂಗಮದ ಸಂಗವು ಎಂದೆಂದಿಗೂ ಅಪ್ರಿಯವಾಗಲಾರದು ಆ ಗುರುಲಿಂಗ ಜಂಗಮದ ಸಂಗದಲ್ಲಿ ಮರಳಿ ಮರಳಿ ಅತ್ಯಂತ ಪ್ರೀತಿಯನ್ನು ಮಾಡುವುದು.

## ವಚನಗಳು

೧

ಶಿವನ ನೆನೆದಡೆ ಭವಹರಿವುದೆಂಬ
ವಿವರಗೇಡಿಗಳ ಮಾತ ಕೇಳಲಾಗದು ಅದೇನು ಕಾರಣವೆಂದಡೆ
ಜ್ಯೋತಿಯ ನೆನೆದರೆ ಕತ್ತಲೆ ಹರಿವುದೇ
ಮೃಷ್ಟಾನ್ನವ ನೆನೆದರೆ ಹೊಟ್ಟೆ ತುಂಬುವುದೇ
ರಂಭೆಯ ನೆನೆದರೆ ಕಾಮದ ಕಳವಳವು ಹಿಂಗುವುದೇ
ನೆನೆದಡಾಗದು ನಿರ್ಧರಿಸಿ ದ್ವಯ ಕುಳುವಳಿದು ಬೆರಸ ಬಲ್ಲಡೆ
ಸದ್ಗುರು ಸಿದ್ಧ ಸೋಮೇಶ್ವರ ಲಿಂಗವು ತಾನೇ

೨

ಗಿಡ ಮರದ ಕುರುಬಿತಿಯ ಜವ್ವನದಂತೆ
ನುಡಿಯಲರಿಯದ ಮುಗ್ಧೆಯಾಗಿದ್ದೆನವ್ವಾ
ಹಗಲನರಿಯದ ಜಕ್ಕವಕ್ಕಿಯಂತೆ
ಮನ ಬಯಸುತ್ತಲಿದ್ದೆನವ್ವಾ
ಹಲವು ಕಾಲ ಎಲವದ ಮರನ ಸಾರಿದ ಗಿಳಿಯಂತಾದೆನವ್ವಾ
ಇದು ಮಹಾಲಿಂಗ ಗಜೇಶ್ವರ ದೇವನ ನೆರೆಯಲರಿಯದೆ
ಇವರೆಲ್ಲರ ವಿಧಿಯಂ ಹೊತ್ತೆನವ್ವಾ

೩

ಕಾಮನ ಕೊಂದಂದು ಪಟ್ಟಕ್ಕೆನಿಂದ
ಗುರು ಕಾಮರಾಜ ರಾಜನವ್ವಾ ರಾಜಾಧಿರಾಜ
ಕಂಡವರೆಲ್ಲರ ಹೆಂಡರ ಮಾಡಿ ನೆರೆವ ಮಹಾಕಾಮಿಯು ಕೇಳಾ
ಇಂತಪ್ಪ ಕಾಮಿಯನತಿ ಕಾಮದಿಂದ ಕಾಮಿಸಿದೆನವ್ವಾ ಉರಿಲಿಂಗ ದೇವನ

೪

ಇನಿಯಂಗೆ ತವಕವಿಲ್ಲ ಎನಗೆ ಸೈರಣೆಯಿಲ್ಲ
ಮನದಿಚ್ಛೆಯನರಿವ ಸಖಿಯರಿಲ್ಲ

ಮನ್ಮಥ ವೈರಿಯನು ಭಾವದಲ್ಲಿ ಮನ ಸಿಲುಕಿ ಬಿಡದು
ಇನ್ನೇವೆ ನಿನ್ನೇವೆ ದಿನ ವೃಥಾ ಹೋಯಿತ್ತು
ಯೌವನ ಬೀಸರ ಹೋಗದ ಮುನ್ನ ಪಿನಾಕಿಯ ತಂದು ನೆರಹವ್ವಾ
ಶಂಭು ಜಕ್ಕೇಶ್ವರನ

೫

ತಾನು ದಂಡು ಮಂಡಲಕ್ಕೆ ಹೋದನೆಂದಡೆ
ನಾನು ಸುಮ್ಮನಿಹೆನಲ್ಲದೆ
ತಾನೆನ್ನ ಕೈಯೊಳಗಿದ್ದು ಎನ್ನ ಮನದೊಳಗಿದ್ದು
ಎನ್ನ ಕೂಡದಿದ್ದಡೆ ನಾನೆಂತು ಸೈರಿಸುವೆನವ್ವಾ
ನೆನಹೆಂಬ ಕುಂಟಣಿ ಚೆನ್ನಮಲ್ಲಿಕಾರ್ಜುನನ
ನೆರಹದಿರ್ದಡೆ ನಾನೇವೆ ಸಖಿಯೇ

೬

ಕಳಿವರಿದ ಮನವು ತಲೆಕೆಳಗಾದುದವ್ವಾ
ಸುಳಿದು ಬೀಸುವ ಗಾಳಿ ಉರಿಯಾಯಿತ್ತವ್ವಾ
ಬೆಳದಿಂಗಳು ಬಿಸಿಲಾಯಿತ್ತು ಕೆಳದೀ
ಹೊಳಲ ಸುಂಕಿಗನಂತೆ ತೊಳಲುತ್ತಿದ್ದೇನವ್ವಾ
ತಿಳುಹಾ ಬುದ್ಧಿಯ ಹೇಳಿ ಕರೆತಾರವ್ವಾ
ಚೆನ್ನಮಲ್ಲಿಕಾರ್ಜುನಂಗೆ ಎರಡರ ಮುನಿಸವ್ವಾ

೭

ಮುನಿಸ ಮುನಿದಡೆ ಶ್ರೀಗಂಧದ ಮುರುಡಿ ನಂತಿರಬೇಕವ್ವಾ
ತೇದಡೆ ತೆಗೆದಡೆ ಚಂದನದ ಶೀತಲದ ಹಾಗೆ ಯಾಗಿರಬೇಕವ್ವಾ
ಹೆಣಗುವಲ್ಲಿ ಕೈ ಹಿಡಿದು ಹೆಣಗುತ್ತಿರಬೇಕವ್ವಾ
ಮಹಾಲಿಂಗ ಕಲ್ಲೇಶ್ವರನ ನೆರೆವ ಭರದಿಂ ನೊಂದು
ಉದಕ ಮೇಲ್ವಾಯ್ದ ಹಾಗಿರಬೇಕವ್ವಾ

೮

ಅಯ್ಯಾ ನಾ ಸಂತೈಸೆ ಸಂತೈಸಲಾರೆನಯ್ಯಾ
ಆಹಾ ಅಯ್ಯಾ ನಿನ್ನ ಕೂಟದ ಸವಿಗಲೆಗಳ ನೆನೆನೆನೆದು

ಬೇಯದ ಬೇಗೆಯ ಬೆಂದೆ ನೋಡಯ್ಯಾ
ಅಯ್ಯಾ ಎನಗಂತಿಂತೆಂದು ಹೇಳುವನಲ್ಲ
ಮರೆಯದ ಕಿಚ್ಚನಿಕ್ಕಿ ಮರೆಗೆ ಹೋದೆಯಲ್ಲಾ
ಎನ್ನ ಕಪಿಲ ಸಿದ್ಧ ಮಲ್ಲಿನಾಥಯ್ಯ

೯

ಎಮ್ಮ ನಲ್ಲ ನೊಲ್ಲನೆಂದು ಕಳುಹಿದಡೆ
ಎಲ್ಲಿ ಅರತು ಹೊಹೆನಲ್ಲಾ
ಗಂಗೆಯ ನೋನೆನೆ ಗೌರಿಯ ನೋನೆನೆ
ಎಲ್ಲಿ ಅರಿತು ಹೊಹೆನವ್ವಾ
ಎನ್ನಂತರಂಗದ ಆತ್ಮ ಜ್ಯೋತಿ ಉರಿಲಿಂಗದೇವಾ
ಎಂದು ಇಲ್ಲಿಯೇ ಅರತು ಹೋಹೆನವ್ವಾ

೧೦

ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವಾ
ಏರಿಲ್ಲದ ಗಾಯದಲ್ಲಿ ನೊಂದೆನವ್ವಾ
ಸುಖವಿಲ್ಲದೆ ದಾವತಿಗೊಂಡೆನವ್ವಾ
ಚೆನ್ನಮಲ್ಲಿಕಾರ್ಜುನ ದೇವಂಗೊಲಿದು
ಬಾರದ ಭವಂಗಳ ಬಂದೆನವ್ವಾ

೧೧

ಒಮ್ಮೆ ಕಾಮನ ಕಾಲ ಹಿಡಿವೆ
ಮತ್ತೊಮ್ಮೆ ಚಂದ್ರಮಂಗೆ ಶರಗೊಡ್ಡಿ ಬೇಡುವೆ
ಸುಡಲೀ ವಿರಹವ ನಾನಾರಿಗೆ ಧೃತಿಗೆಡುವೆ
ಚೆನ್ನಮಲ್ಲಿಕಾರ್ಜುನದೇವನೆನ್ನ ನೊಲ್ಲದ ಕಾರಣ
ಎಲ್ಲರಿಗೆ ಹಂಗುಗಿತ್ತಿಯಾದೆನವ್ವಾ

೧೨

ಎಲುವೊಡೆದು ತನು ಕರಗಿ ಮನವು ಜಜ್ಝರಂಭೋಗಿ
ಲಿಂಗದಲ್ಲಿ ನೀರು ನೀರು ಕೂಡಿದಂತಿರಬೇಕು

ಜಂಗಮದೊಳಗೆ ಆಲಿಕಲ್ಲಿನಂತೆ ಕರಗಿರಬೇಕು
ಸರ್ವಾಂಗ ಪುಳಕಂಗಳೊಡೆದು ಕಡಲುಗಳಾಗಿ
ಸದ್ಗುರುವಿನೊಳು ಬೇರಿಲ್ಲದಂತೆ ಬೆರೆಸಿರಬೇಕು
ಇಂತೀ ತ್ರಿವಿಧ ಲಿಂಗವ ಕೂಡಿಲ್ಲದೇ ಸುಖವಿಲ್ಲ ನೋಡಾ
ಇಂತಪ್ಪ ನಿರ್ವಾಣ ಪದವು ಎನಗೆಂದಿಗೆ
ದೊರಕೊಂಬುದೋ ಉಳಿಯುಮೇಶ್ವರಾ

## ಶಿವಲಿಂಗ ಯೋಗಾನಂದ ಸ್ಥಲ ೧

ಇಂತೀ ಪ್ರಕಾರದಿಂ ಸದ್ಭಕ್ತರು ಶಿವಲಿಂಗದಲ್ಲಿ ಬೆರೆಸುವ ತವಕ ವಿರಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಸದ್ಭಕ್ತರು ಶಿವಲಿಂಗದಲ್ಲಿ ಬೆರೆಸಿ ಅಂಗ ಪ್ರಾಣ ಮನವೇಕೀಕರಿಸಿ ಲಿಂಗಾಂಗವಾಗಿ ವರ್ತಿಸುತ್ತಿರಬೇಕೆಂದು ನುಡಿದ ವಚನಂಗಳು.

ಶಿವರಹಸ್ಯೇ—

ಕರ್ಪೂರಮನಲಗ್ರಾಹ್ಯಂ ರೂಪಂ ನಾಸ್ತಿ ನಿರಂಜನವತ್ ।
ತಥಾ ಲಿಂಗಾಂಗಸಂಯೋಗೇ ತದ್ದೇಹಂ ನಿರ್ವಯಾಂಗವತ್ ॥೧॥

ಕರ್ಪುರವನು ಉರಿನುಂಗಿದರೆ ರೂಪಿಲ್ಲ ಮಸಿಯಿಲ್ಲ ಅದು ಹೇಗೋ ಹಾಗೆ ಲಿಂಗಾಂಗ ಸಂಯೋಗವಾಗಲು ಅಂಗರಹಿತನಹನು.

ಸೂತಸಂಹಿತಾಯಾಮ್—

ತೈಲಯುಕ್ತಂ ಚ ಕಾರ್ಪಾಸಂ ಜ್ಯೋತಿಸ್ಪರ್ಶಂ ಕರೋತಿ ಚೇತ್ ।
ತಥಾ ಲಿಂಗಾಂಗಸಂಯೋಗೇ ತದ್ದೇಹಂ ನಿರ್ವಯಾಂಗವತ್ ॥೨॥

ಎಂಣೆ ಸಹಿತವಾದ ಬತ್ತಿಯನು ದೀಪವ ಮುಟ್ಟಿಸಿದಡೆ ಹ್ಯಾಗೆ ದೀಪವಹುದೋ ಹಾಗೆ ಲಿಂಗಾಂಗಸಂಯೋಗವಾಗಲು ಅಂಗರಹಿತನಹನು.

ಸರ್ಪದಷ್ಟಂ ತು ಯದ್ದೇಹಂ ತದ್ದೇಹಂ ವಿಷದೇಹವತ್ ।
ತಥಾ ಲಿಂಗಾಂಗಸಂಯೋಗೇ ತದ್ದೇಹಂ ನಿರ್ವಯಾಂಗವತ್ ॥೩॥

ಸರ್ಪದಷ್ಟವಾದ ಆವುದಾನೊಂದು ದೇಹವುಂಟೋ ಆ ದೇಹವು ವಿಷದೇಹವಹುದು ಹಾಗೆ ಲಿಂಗಾಂಗಸಂಯೋಗವಾಗಲು ಅಂಗರಹಿತನಹನು.

ಲೈಂಗೇ—

ಚಿಂತಯಾಮಿ ಶಿವಂ ತೇನ ಜಾತಂ ಶಿವಮಯಂ ಪುನಃ ।
ಪಯೋನಿಮಗ್ನವಪುಷೋ ಜಲತೃಷ್ಣಾ ನ ಜಾಯತೇ ॥೪॥

ಶಿವನನು ಮನದಿಂದ ಧ್ಯಾನವಂ ಮಾಡುವೆನು ಅದರಿಂದ ಮನವು ಶಿವಮಯವಾಯಿತು. ಅದು ಹೇಗೆಂದಡೆ ಉದಕದೊಳಗೆ ಮುಳುಗಿದಾತಂಗೆ ಉದಕದ ತೃಷೆಯಿಲ್ಲದೆ ಜಲಮಯವಾದಂತೇದು ಅರ್ಥವು.

## ವಚನಗಳು

೧

ತಮ್ಮ ತಮ್ಮ ಗಂಡರು ಚೆಲುವರೆಂದು
ಕೊಂಡಾಡುವ ಹೆಣ್ಣುಗಳು ಪುಣ್ಯ ಜೀವಿಗಳವ್ವಾ
ನಾನು ನನ್ನ ನಲ್ಲನೆಂಥವನೆಂದರಿಯೆನವ್ವಾ
ಆ ಮಹಾಲಿಂಗ ಗಜೇಶ್ವರ ನಿರಿಯ ಸೆರಗ ಸಡಿಲಿಸಲೊಡನೆ
ನಾನೋ ತಾನೋ ಎಂದರಿಯೆನವ್ವಾ

೨

ಎನ್ನ ನಲ್ಲನ ಕೂಡಿದ ಕೂಟವನಿದಿರಿಂಗೆ ಹೇಳ ಬಾರದವ್ವಾ
ನೀವೆಲ್ಲ ನಿಮ್ಮ ನಲ್ಲನ ಕೂಡಿದ ಕೂಟವ ಬಲ್ಲಂತೆ ಹೇಳಿ
ಉರಿಲಿಂಗದೇವ ಬಂದೆನ್ನ ನಿರಿಯ ಸೆರಗ ಹಿಡಿಯಲೊಡನೆ
ನಾನೋ ತಾನೋ ಏನೆಂದರಿಯೆನವ್ವಾ

೩

ಆತನ ನೋಡಿದಂದು ದಸೆಗಳ ಮರೆದೆ ನಿನ್ನೆಂತವ್ವಾ
ಅವ್ವಾ ಅವ್ವಾ ಆತನ ನುಡಿಸಿದಡೆ ಮೈಯ್ಯೆಲ್ಲಾ ಬೆವೆತುದಿನ್ನೆಂತವ್ವಾ
ಅವ್ವಾ ಅವ್ವಾ ಕೈಹಿಡಿದಡೆ ನಿಮ್ಮ ನಿರಿಗಳು ಸಡಿಲದವಿನ್ನೆಂತವ್ವಾ
ಇಂದೆಮ್ಮ ಮಹಾಲಿಂಗ ಗಜೇಶ್ವನ ನಪ್ಪಿದೆ ನೆಂದಡೆ
ನಾನಪ್ಪುಮರದೆ ನಿನ್ನೆಂತವ್ವಾ

೪

ನಲ್ಲನ ಕೂಡುವ ಭರದಲ್ಲಿ ಎನ್ನುವ ನಿದಿರುವನೇನೆಂದರಿಯೆನವ್ವಾ
ನಲ್ಲನ ಕೂಡುವಾಗ ಎನ್ನುವ ನಲ್ಲನನೇನೆಂದರಿಯೆನವ್ವಾ
ಉರಿಲಿಂಗ ದೇವನ ಕೂಡಿದ ಬಳಿಕ ನಾನೋ ತಾನೋ
ಏನೆಂದರಿಯೆನವ್ವಾ

೫

ಆತನ ಬೆರೆಸಿದ ಕೂಟವನೇನೆಂದು ಹೇಳುವೆನವ್ವಾ
ಕೇಳಲು ಬಾರದು ಏನ ಹೇಳುವೆನವ್ವಾ
ಶಿಖಿಕರ್ಪುರ ಬೆರೆಸಿದಂತೆ ಮಹಾಲಿಂಗ ಗಜೇಶ್ವರನ
ಕೂಡಿದ ಕೂಟವ ಹೇಳಬಾರದವ್ವಾ

೬

ಎಲವೆಲವೋ ನಿನ್ನ ಕೂಡಿದನ್ನಕ್ಕರ ಮುನ್ನಕಾಣೆ
ಕೂಡಿದ ಬಳಿಕ ಮತ್ತೆ ಕಾಣೆನಯ್ಯಾ
ನಿನ್ನ ಕೂಡಿದ ಸುಖದಿಂದ ನಾನೇನೆಂದರಿಯೆನಯ್ಯಾ
ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನೀನೇ ಬಲ್ಲೆ

೭

ನಲ್ಲನ ಕೂಡಿದನ್ನಕ್ಕರ ಸುಖದ ಸುಗ್ಗಿಯನೇನೆಂದರಿಯೆ ಕೇಳಾ ಕೆಳದಿ
ಸುಖದ ಸುಗ್ಗಿ ಸವಿಯಾಯಿತ್ತು ಹೇಳಲು ನಾಚಿಕೆ ಕೇಳು ಕೆಳದಿ
ಸುಖರಸ ಮಡುಗಟ್ಟಿದಲ್ಲಿ ಉರಿಲಿಂಗದೇವನ ಕೂಡ
ಸುಖ ಸಾಗರದಲ್ಲಿ ಕ್ರೀಡಿಸುತ್ತಿರ್ದೆ ಕೆಳದಿ

೮

ಇಂಬಿನ ಚುಂಬನವನಮೃತಾಹಾರ
ಆ ಲಿಂಗನವೇ ಆಭರಣ ಸೋಂಕೇಸುವಸ್ತ್ರ
ನೋಟವೇ ಕೂಟ ಒಡನಾಟವೇ ಅಷ್ಟಭೋಗವೆನಗೆ
ಉರಿಲಿಂಗದೇವನ ಕೂಟ ಪರಾತ್ಪರ ವಾಙ್ಮನೋತೀತ ಪರಮ ಸುಖವು

೯

ಬಿಟ್ಟತಲೆಯ ಬಿಡುಮುಡಿಯ ಬರುಮಯ್ಯ
ಕವಿಯ ಬಿಚ್ಚೋಲೆಯ ಉಟ್ಟ ಸೀರೆಯ ಸಡಿಲಿದ ಕಳೆಯ
ಘಳಿಲನೆ ನಡೆತಂದಳು ನಚ್ಚಿ ಮಚ್ಚಿ ಮನ ಸಂಧಾನವನು
ಬಂದಪ್ಪಿದ ಸೋಂಕಿನ ಸುಖವನು
ಮಹಾಲಿಂಗ ಗಜೇಶ್ವರ ತಾನೇ ಬಲ್ಲನು

೧೦

ಆಲಿಕಲ್ಲಿನ ಹರಳಿನಂತೆ ಅರಗಿನ ಪುತ್ಥಳಿಯಂತೆ

ತನು ಕರಗಿ ನೆರೆವ ಸುಖವ ನಾನೇನೆಂಬೆ
ಕಡೆಗೂಡಿವರಿದವೆನಗೆ ಅತಿನಯನ ಜಲ ಸುಖಂಗಳು
ನಮ್ಮ ಕೂಡಲ ಸಂಗಮದೇವರ ಮುಟ್ಟಿ
ನೆರೆವ ಸುಖವ ನಾನೇನೆಂಬೆ

೧೧

ನಲ್ಲನ ರೂಪೆನ್ನ ನೇತ್ರವ ತುಂಬಿತ್ತು
ನಲ್ಲನ ನುಡಿಯೆನ್ನ ಶ್ರೋತ್ರವ ತುಂಬಿತ್ತು
ನಲ್ಲನ ಗಂಧವೆನ್ನ ಘ್ರಾಣವ ತುಂಬಿತ್ತು
ನಲ್ಲನ ಆ ಲಿಂಗನವೆನ್ನ ಸರ್ವಾಂಗವ ತುಂಬಿತ್ತು
ನಲ್ಲನ ಚುಂಬನವೆನ್ನ ಜಿಹ್ವೆಯ ತುಂಬಿತ್ತು
ನಲ್ಲನ ಪ್ರೇಮವೆನ್ನ ಮನವ ತುಂಬಿತ್ತು
ನಲ್ಲನ ಕೂಟವೆನ್ನ ಅಂತರಂಗ ಬಹಿರಂಗದಲ್ಲಿ ಕಂಡು
ಸುಖಿಯಾದ ಉರಿಲಿಂಗದೇವಾ

## ಬಾಹ್ಯಾಭ್ಯಂತರಲಿಂಗ ಸಂಯೋಗ ಸ್ಥಲ ೨.

ಇಂತೀ ಪ್ರಕಾರದಿಂ ಅಂಗಮನ ಭಾವವೇಕೀಕರಿಸಿ ಲಿಂಗವಕೂಡಿ ಆನಂದ ವನೈದಿದರೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಹಾ ಪುರಾತನರು.

ಇಂತಹ ಸದ್ಭಕ್ತರು ಅಂತರಂಗ ಬಹಿರಂಗದಲ್ಲಿ ಲಿಂಗವ ಕೂಡಿರ್ದ ಭೇದವನರುಪಲೋಸ್ಕರ ನುಡಿದ ವಚನಂಗಳು.

ಶಿವರಹಸ್ಯೇ—

ಬಾಹ್ಯಾಂಗೇ ದೃಶ್ಯತೇ ಲಿಂಗಂ ಪ್ರಾಣೋ ದೇಹಸ್ಯ ಮಧ್ಯತಃ ।
ಪ್ರಾಣಸ್ಯ ಲಿಂಗಸಂಬಂಧಂ ಬ್ರೂಹಿ ಮೇ ಪರಮೇಶ್ವರ ॥೧॥

ದೇಹದ ಮೇಲೆ ಲಿಂಗವು ಕಾಣಲ್ಪಡುವದು ದೇಹದೊಳಗೆ ಪ್ರಾಣ ವಿಹುದು ಪ್ರಾಣಲಿಂಗ ಸಂಬಂಧವಾದ ಪ್ರಕಾರವನು ದೇವಿಯು ಕೇಳಿದಳು.

ತಥಾಪಿ ಪ್ರಾಣಲಿಂಗಸ್ಯ ವೇದ್ಯತೇ ಸರ್ವಮಿಂದ್ರಿಯಮ್ ।
ವೇದ್ಯತೇ ಸರ್ವದೇಹೀನಾಂ ಪಾವಕೋ ಸಲಿಲಂ ಯಥಾ ॥೨॥

ಅಗ್ನಿಯು ಉದಕವನ್ನು ಹೇಗೆ ಉಷ್ಣವ ಮಾಡುವುದೇ ಆ ಪ್ರಕಾರ ದಲ್ಲಿ ಲಿಂಗಸಂಪರ್ಕದಿಂದ ಸರ್ವೇಂದ್ರಿಯಗಳುಳ್ಳ ಪ್ರಾಣನು ತನ್ನ ಪೂರ್ವ ಗುಣಮಂ ಬಿಟ್ಟು ಲಿಂಗ ಕಳೆವೇದಿಸಿ ಪ್ರಾಣಲಿಂಗವೆನಿಸಿದನೆಂದು ಈಶ್ವರನು ಹೇಳಿದನು.

ಯಥಾ ಕುಂಭೇ ಜಲಂ ದೇವಿ ಲೀಯತೇ ಅಗ್ನಿಸಂಪುಟಾತ್ ।
ಜ್ಞಾನಂ ಬಾಹ್ಯಕ್ರಿಯಾವ್ಯೇದ್ಯಂ ತತ್ಪ್ರಾಣೋ ಲಿಂಗವೇದಿತಃ ॥೩॥

ಎಲೈ ಪಾರ್ವತಿ ಅಗ್ನಿಯ ಸಂಪರ್ಕದ ದಶೆಯಿಂದ ಘಟದೊಳಗಿರ್ದ ಉದಕವು ಹೇಗೆ ಬತ್ತಿಲಯವಾಗುವುದೋ ಆ ಪ್ರಕಾರದಲ್ಲಿ ಬಾಹ್ಯದ ಸತ್ಕ್ರಿಯಾ ಜ್ಞಾನವು ವೇದಿಸಿ ಪ್ರಾಣನು ಲಿಂಗ ಸಂಬಂಧವ ನೈದಿದನೆಂದು ಈಶ್ವರನು ಹೇಳಿದನು.

## ವಚನಗಳು

೧

ಅಂ... ಬಹಿರಂಗವೆಂದೆಂಬುವರು
ಆವುದು ಹಿಂದು ಆವುದು ಮುಂದು ಎಂದರಿಯರು
ಎಳ್ಳೊಳಗಣ ಎಣ್ಣೆಯಂತೆ ಕಲ್ಲೊಳಗಣ ಹೇಮದಂತೆ
ಹಾಲೊಳಗಣ ತುಪ್ಪದಂತೆ ಕಾಷ್ಠದೊಳಗಣ ಅಗ್ನಿಯಂತೆ
ಪುಷ್ಪದೊಳಗಣ ಪರಿಮಳದಂತೆ ಭಾವದೊಳಗೆ ಶಿವನಿಪ್ಪನೆಂದಡೆ
ಆ ಶಿವನು ತನಗೆ ಕಾಣಿಸಿ ಕೊಳ್ಳನು ಮಥನದಿಂದಲ್ಲದೆ

> ತಿಲಮಧ್ಯೇ ಯಥಾ ತೈಲಂ ಕ್ಷೀರಮಧ್ಯೇಯಥಾ ಘೃತಮ್ ।
> ಪುಷ್ಪಮಧ್ಯೇ ಯಥಾ ಗಂಧೋ ಭಾವಮಧ್ಯೇ ತಥಾ ಶಿವಃ ॥

ಎಂದುದಾಗಿ ಇಂತಪ್ಪ ಚಿನ್ಮೂರ್ತಿಯನು
ಮಸ್ತಕದಲ್ಲಿ ಶ್ರೀಗುರು ತನ್ನ ಹಸ್ತಾಬ್ಜಮಥನದಿಂದ
ಆಕರ್ಷಣವ ಮಾಡಿ ತೆಗೆದು ತಲ್ಲಿಂಗವನಲ್ಲಿ ಸ್ಥಾಪ್ಯವ ಮಾಡಿ
ಸುಜ್ಞಾನ ಕ್ರಿಯೋಪದೇಶವಂ ಮಾಡಲು
ಘಟದ ಹೊರಗಿಹ ಅನಲ ಘಟವ ವೇದಿಸಿ
ತಜ್ಜಲವ ಹಿಡಿದು ತೆಗೆದು ಕೊಂಬಂತೆ
ಬಾಹ್ಯದಲ್ಲಿ ಮಾಡುವ ಸತ್ಕ್ರಿಯಾ ಮಥನದಿಂದ
ಶಿವ ಜೀವ ಸಂಯೋಗವಹ ಬಟ್ಟೆಯನರಿಯದೆ
ಕೆಟ್ಟರೆಲ್ಲಾ ಅದ್ವೈತಿಗಳು ಅದೆಂತೆಂದಡೆ—

> ಘಟಮಧ್ಯಸ್ಥಿತಿಂ ತೋಯಮಗ್ನಿರ್ಜ್ವಲತಿ ಬಾಹ್ಯತಃ
> ಅಗ್ನಿಜ್ವಲನಸಂಯೋಗ ಉಷ್ಣಂ ಭವತಿ ವಾರಿಣಾಮ್ ॥

ಎಂದುದಾಗಿ ಈ ಮರ್ಮಕುಳ ಸ್ಥಳವನರಿಯದೆ
ಶಿವಲಿಂಗ ಪೂಜೆಯ ಬಿಟ್ಟು ಅನ್ಯ ಬಟ್ಟೆಯಲ್ಲಿ ಹರಿವರು
ಕರ್ಮ ನಿರ್ಮೂಲವಾಗದ ಜಡರು
ಗುರು ವಚನ ಪರಾಙ್ಮುಖರು ಲಿಂಗನಿಷ್ಠಾ ವಿರಹಿತರು
ಗುರುಕೊಟ್ಟ ಇಷ್ಟಲಿಂಗದಲ್ಲಿ ಅಷ್ಟವಿಧಾರ್ಚನೆ ಷೋಡಶೋಪ
ಚಾರಂಗಳಂ

ಕ್ರಿಯೆವಿಡಿದು ಮಾಡಿ ಪ್ರಾಣವೇದಿಸಿ ಪ್ರಾಣಲಿಂಗ ಸಂಬಂಧಿಗಳಾಗ ಲರಿಯದೆ
ಕೊಟ್ಟರಲ್ಲಾ ಅದ್ವೈತಿಗಳು ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೨

ಜಾತವೇದಿಯಲ್ಲಿ ಶೋಧಿಸಿ ಪುಟವಿಟ್ಟ
ಬೂದಿಯಂತಾದೆನಯ್ಯಾ ನಿಮ್ಮನಾರಾಧಿಸಿ ಅದೆಂತೆಂದಡೆ —

" ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ಯಥಾ "

ಎಂದುದಾಗಿ ಕಾದಲೋಹದ ಮೇಲೆ ಉದಕವನೆರೆದಂತಾದೆನಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೩

ಬೆಡಗಿನಲ್ಲಿ ಅಗ್ನಿ ಮೈದೋರದಿದ್ದಲ್ಲಿ ಆಕಾರ ನಾಸ್ತಿಯಾಗದು
ಇಷ್ಟ ಲಿಂಗಕ್ಕೆ ಕಾಯದ ಕೈಮುಟ್ಟಿ ಮಾಡುವ
ಅಷ್ಟ ವಿಧಾರ್ಚನೆ ಷೋಡಶೋಪಚಾರದಿಂದ
ಬೆಡಗಿನಲ್ಲಿಪ್ಪ ಜ್ಞಾನಾಗ್ನಿ ಮೈದೋರಿದಡೆ ಆಕಾರ ನಾಸ್ತಿಯಾಯಿತ್ತು
ಅಂಗದ ಮೇಲೆ ಲಿಂಗದ ಜವನಿಕೆ ಒಗೆದೆಗೆವಡೆ
ಕಾಯದ ಪರಿ ನಷ್ಟವಾಗಿ ಜ್ಞಾನಾಗ್ನಿಯಿಂದ ಪ್ರಾಣನ ಭೋಗನಷ್ಟ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ
ನಿಮ್ಮ ಪೂಜಿಸುವ ಶರಣನ ಮರ್ತ್ಯನೆಂದಡೆ ನಾಯಕ ನರಕ ತಪ್ಪದು

## ಭಿನ್ನ ಭಾಜನ ನಿರಸನ ಸ್ಥಲ ೩.

ಇಂತೀ ಪ್ರಕಾರದಿಂ ಸದ್ಭಕ್ತನ ಒಳ ಹೊರಗೆ ಎಡೆದೆರಹಿಲ್ಲದೆ ಲಿಂಗ ಸಂಯೋಗವಾಗಿರುತ್ತಿಹುದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಸದ್ಭಕ್ತಂಗೆಯೂ ಲಿಂಗಕ್ಕೆಯೂ ಭೇದವಿಲ್ಲೆಂದು ನುಡಿದ ವಚನಂಗಳು.

ಶಿವರಹಸ್ಯೇ—

ಸಹಭಾಜನಭೇದಃ ಕಿಂ ಕಿಂ ಭೇಧಃ ಸಹವರ್ತಿನಾಂ ।
ಇತಿ ಭೇದಂ ನ ಜಾನಾಮಿ ಬ್ರೂಹಿ ಮೇ ಪರಮೇಶ್ವರ ॥೧॥

ಸಜಭಾಜನ ಭೇದವಾವುದು? ಸಹವರ್ತಿಗಳ ಭೇದವಾವುದು? ನಾನೀ ಭೇದವನರಿಯೆನು ಎಲೈ ಪರಮೇಶ್ವರನೇ ಹೇಳು ಎಂದು ದೇವಿಯು ಕೇಳಿದಳು.

ಶಿವಧರ್ಮೇ—

ಭಾಂಡಂ ಚ ಭಾಜನಂ ಚೈವ ಭೋಜನಂ ತು ನಿರಂತರಮ್ ।
ಪ್ರಸಾದೋsಯಮನುಸ್ಯೂತ ಮಿತ್ಥಂ ಸ್ಯಾನ್ಮಹಿಮಾ ಖಲು ॥೨॥
ಭಕ್ತಕಾಯಂ ಮಹಾದೇವಂ ಭಕ್ತಾತ್ಮಕಸದಾಶಿವಮ್ ।
ಸರ್ವಭೋಗೋಪಭೋಗಂ ಚ ಸಹ ಭೋಗೋ ವಿಧೀಯತೇ ॥೩॥

ಭಾಂಡ ಭಾಜನ ಭೋಜನವೆಂಬವು ನಿರಂತರವೂ ಪ್ರಸಾದವೆಂದು ಹೇಳಿಸಿಕೊಳ್ಳುವವಾಗಿರಬೇಕು ಪ್ರಸಾದದ ಭೇದವು ಇದರ ಮಹಿಮೆಯು ಎಂತೆಂದಡೆ: ಭಕ್ತದೇಹಿಕನಾದ ಮಹಾದೇವನನ್ನು ಭಕ್ತಾತ್ಮಕನಾದ ಸದಾಶಿವನನ್ನು ಕುರಿತು ಭಕ್ತನು ಸಕಲ ಭೋಗೋಪಭೋಗಂಗಳನು ಶಿವ ಸಹಿತವಾಗಿ ಭೋಗಿಸಬೇಕು.

### ವಚನಗಳು

೧

ಸದ್ಭಕ್ತಂಗೆಯೂ ಜಂಗಮಲಿಂಗಕ್ಕೆಯೂ ಭಾಜನ ಬೇರೆಂಬ
ಶಾಸ್ತ್ರವ ಸಾಧಕರು ನೀವು ಕೇಳಿರೋ

ಭಕ್ತದೇಹಿಕ ದೇವನೆಂದು ಶ್ರುತಿ ಸಾರುತ್ತಿದೆ ಅರಿದು ಮರೆವಿರಿ
ಮರೆವೆಯಿಂದ ಬ್ರಹ್ಮನ ಶಿರಹೋಯಿತ್ತು
ಮರೆವೆಯಿಂದ ದಕ್ಷನು ತಲೆಯ ನೀಗಿ ಕುರಿದಲೆಯಾದುವನರಿಯಿರೇ
ಮರೆಯದೆ ವಿಚಾರಿಸಿ ನೋಡಿ ಭಕ್ತಂಗೂ ಲಿಂಗಕ್ಕೂ ಭೇಧವಿಲ್ಲ
ಇನ್ನು ಆ ಭಕ್ತಂಗೆಯೂ ಆ ಜಂಗಮ ಲಿಂಗಕ್ಕೆಯೂ ಭೇದವಿಲ್ಲ-
ಬೇರ್ಪಡಿಸಿ ನುಡಿಯಲುಂಟೇ ?
ಇನ್ನು ಆ ಗುರುವಿಂಗೆಯೂ ಆ ಭಕ್ತಂಗೆಯೂ ಸಂಕಲ್ಪವಿಲ್ಲ
ಅದೆಂತೆಂದಡೆ— ಮೆಟ್ಟುವ ರಕ್ಷೆ ಮುಟ್ಟುವ ಯೋನಿ
ಅಸನ ಸಂಯೋಗ ಮಜ್ಜನ ಭೋಜನ ಇಂತಿವನು
ಗುರುಲಿಂಗಜಂಗಮ ಸಹಿತವಾಗಿ ಭೋಗಿಸುವ ಸದ್ಭಕ್ತಂಗೆ
ನಾನು ನಮೋ ನಮಃ ಎಂಬೆನು ಅದೆಂತೆಂದಡೆ

> ಅರ್ಥಪ್ರಾಣಾಭಿಮಾನಾಶ್ಚ ಗುರುರ್ಲಿಂಗಂ ತು ಜಂಗಮಃ ।
> ತಲ್ಲಿಂಗಂ ಜಂಗಮಪ್ರಾಣಭಕ್ತಿಸ್ಥಲಂ ಸುಬುದ್ಧಿಮಾನ್ ॥

ಎಂದುದಾಗಿ ಇದನರಿತು ಅರ್ಥಪ್ರಾಣಾಭಿಮಾನಗಳನು
ಗುರುಲಿಂಗಜಂಗಮಕ್ಕೆ ಸಮರ್ಪಿಸಿ
ಆ ಗುರುಲಿಂಗಜಂಗಮವೇ ಪ್ರಾಣವಾಗಿಹ ಸದ್ಭಕ್ತಂಗೆಯು
ಆ ಗುರುಲಿಂಗಜಂಗಮಕ್ಕೆಯು ಏಕಭಾಜನವಲ್ಲದೆ
ಏಕ ಭೋಜನವಲ್ಲದೆ ಭಿನ್ನಭಾಜನ ಭಿನ್ನಭೋಜನವುಂಟೇ
ಇಲ್ಲವಾಗಿ ಅದೇನು ಕಾರಣವೆಂದರೆ
ಆ ಸದ್ಭಕ್ತನ ಅಂಗವೆಂಬ ಗೃಹದಲ್ಲಿ ಜಂಗಮವಿಪ್ಪನಾಗಿ
ಇದನರಿದು ಬೇರೆ ಮಾಡಿ ನುಡಿಯಲಾಗದು
ಚೆನ್ನಯ್ಯನೊಡನುಂಬುದು ಆವ ಶಾಸ್ತ್ರ
ಕಣ್ಣಪ್ಪ ಸವಿದುದ ಸವಿವುದಿದಾವ ಶಾಸ್ತ್ರ
ಭಕ್ತದೇಹಿಕ ದೇವನಾದ ಕಾರಣ ಅದೆಂತೆಂದಡೆ

> ಭಕ್ತಜಿಹ್ವಾಗ್ರಕೇ ಲಿಂಗಂ ಲಿಂಗಜಿಹ್ವಾಗ್ರಕೇ ರುಚಿಃ ।
> ರುಚಿಜಿಹ್ವಾಗ್ರೇ ಪ್ರಸಾದಂ ಪ್ರಸಾದಂ ಪರಮಂ ಪದಮ್ ॥

ಇಂತೆಂಬ ಪುರಾಣವಾಕ್ಯವನರಿದು
ಸದ್ಭಕ್ತನು ಗುರುಲಿಂಗಜಂಗಮವು ಈ ನಾಲ್ವರು

ಒಂದೇ ಭಾಜನದಲ್ಲಿ ಸಹ ಭೋಜನವಂ ಮಾಡುವವರಿಗೆ
ಇನ್ನೆಲ್ಲಿಯ ಸಂಕಲ್ಪವೋ ಇನ್ನೆಲ್ಲಿಯ ಸೂತಕವೋ
ಇನ್ನೆಲ್ಲಿಯ ಪಾತಕವೋ ಕೂಡಲ ಸಂಗಮದೇವಾ

೨

ಶಿವನೇ ನೀನು ಗುರುವಾದೆ ಲಿಂಗವಾದೆ ಜಂಗಮವಾದೆ ಭಕ್ತನಾದೆ
ಗುರುವಾಗಿದ್ದು ಭಕ್ತನೊಳಡಗಿದೆ ಅದೇನು ಕಾರಣವೆಂದಡೆ
ಗುರುವಿಂಗೆ ಅರ್ಥಪ್ರಾಣಾಭಿಮಾನವನು ಕೊಟ್ಟು
ಆತ ಭೋಗಿಸಿದ ಬಳಿಕ ತಾನಾ ಪ್ರಸಾದ ಮುಖ ಮುಂತಾಗಿ
ಭೋಗಿಸುವನಾಗಿ ಆ ಗುರು ತನ್ನೊಳಡಗಿದ
ಲಿಂಗವಾಗಿರ್ದು ಭಕ್ತನೊಳಡಗಿದೆ ಅದೇನು ಕಾರಣವೆಂದಡೆ
ಅರ್ಥಪ್ರಾಣಾಭಿಮಾನವನು ಕೊಟ್ಟು
ತಾನಾ ಪ್ರಸಾದ ಮುಂತಾಗಿ ಭೋಗಿಸುವನಾಗಿ
ಆ ಲಿಂಗವು ಭಕ್ತನೊಳಡಗಿತು
ಜಂಗಮವಾಗಿ ಭಕ್ತನೊಳಡಗಿದೆ ಅದೇನು ಕಾರಣವೆಂದಡೆ
ಅರ್ಥಪ್ರಾಣಾಭಿಮಾನವನು ಕೊಟ್ಟು
ಆ ಜಂಗಮವು ಭೋಗಿಸಿದ ಬಳಿಕ
ತಾನಾ ಪ್ರಸಾದ ಮುಂತಾಗಿ ಭೋಗಿಸುವನಾಗಿ
ಆ ಜಂಗಮವು ಭಕ್ತನೊಳಡಗಿತು
ಇಂತಡಗುವರೇ ಹಿರಿಯರು ಇಂತಡಗುವರೇ ಗರುವರು
ಇಂತಡಗುವರೇ ಮಹಿಮರು
ಇವರಿಗೆ ಭಾಜನವೊಂದೇ ಭೋಜನವೊಂದೇ
ಈ ನಾಲ್ವರು ಒಂದಾದ ಘನಕ್ಕೆ ಪರಿವಾಣ ಬೇರೆಂಬ
ಶಾಸ್ತ್ರದ ಸೂತಕಿಗಳೆನಗೆ ತೋರದಿರಾ
ಮಸಣಯ್ಯ ಪ್ರಿಯ ಗಜೇಶ್ವರಾ

## ಸಾವಧಾನಾರ್ಪಿತ ಸ್ಥಲ ೪.

ಇಂತೀ ಪ್ರಕಾರದಿಂ ಮಹಾಘನಲಿಂಗಕ್ಕೆ ಸದ್ಭಕ್ತನ ಅಂಗವೇ ಭಾಜನ ವಲ್ಲದೆ ಬೇರೆ ಭಾಜನವಿಲ್ಲೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಏಕಭಾಜನವ ಮಾಡಿದ ಸದ್ಭಕ್ತನ ಅಂಗದಲ್ಲಿ ಸಕಲ ದ್ರವ್ಯಂಗಳ ಭೋಗಿಸುವನೆಂಬುದನರುಪಲೋಸ್ಕರ ನುಡಿದ ವಚನಂಗಳು.

ಶಿವರಹಸ್ಯೇ—

ಅಭಾವೇ ಭಾವಮಾಸಾಧ್ಯ ಹ್ಯಸ್ಥಾನೇ ಸ್ಥಾನಮಾಚರೇತ್ ।
ಏತದ್ವಯ ಪರಿಜ್ಞಾನೀ ಪ್ರಸಾದೀ ಸಾವಧಾನಿಕಃ ॥೧॥

ಅಭಾವದಲ್ಲಿ ಭಾವವಂ ಮಾಡಿ ಸ್ಥಲವಿಲ್ಲದಿದ್ದಲ್ಲಿ ಸ್ಥಲವನಾಚರಿಸು ವುದು ಈ ಎರಡರ ಭೇದವ ಬಲ್ಲಾತನು ಸಾವಧಾನಪ್ರಸಾದಿಯೆನಿಸಿ ಕೊಳ್ಳುವನು.

ಸಂಯೋಗೇ ಚ ವಿಯೋಗೇ ಚ ಅಣು ಬಿಂದು ಸುಖಾರ್ಪಣವ್ ।
ಯಃ ಕುರ್ಯಾದಿಷ್ಟ ಲಿಂಗೇ ತು ಸಾವಧಾನೀ ನಿರಂತರವ್ ॥೨॥

ಆವನಾನೊಬ್ಬನು ಸಂಯೋಗ ವಿಯೋಗಂಗಳಲ್ಲಿ ಅಣು ಬಿಂದು ಸುಖ ವನು ಇಷ್ಟಲಿಂಗಕ್ಕರ್ಪಿಸುವನೋ ಆತನು ಸಾವಧಾನ ಪ್ರಸಾದಿಯೆನಿಸಿ ಕೊಂಬನು.

ತದ್ದೇಹಮಿಂದ್ರಿಯಾಣ್ಯೇವ ಸರ್ವದಾ ಲಿಂಗ ಭೋಗಿನಾವ್ ।
ತನ್ಮುಖಂ ಪಂಚವಕ್ತ್ರಂಚ ಪ್ರಾಣ ಲಿಂಗಸ್ಯ ಲಕ್ಷಣವ್ ॥೩॥

ಪ್ರಾಣನ ಗುಣವಳಿದು ಪ್ರಾಣಲಿಂಗಿಯಹ ದೇಹವು ಆವಾಗಲೂ ಲಿಂಗ ಸಹಿತವಾಗಿ ಇಂದ್ರಿಯಭೋಗವ ಭೋಗಿಸುವುದು ಪ್ರಾಣ ಲಿಂಗದ ಲಕ್ಷಣವು ಹೇಗೆಂದಡೆ ಈಶ್ವರನ ಪಂಚಮುಖಕ್ಕೆ ಪಂಚೇಂದ್ರಿಯಂಗಳ ಮುಖಂಗಳಲ್ಲಿ ಸಮರ್ಪಿಸುವುದು.

## ವಚನಗಳು

೧

ಅಧರ ತಾಗುವ ರುಚಿಯ ಉದರ ತಾಗುವ ಸುಖವ
ಲಿಂಗಾರ್ಪಿತವಿಲ್ಲದೆ ಕೊಂಡರೆ ಕೃತಕಿಲ್ಬಿಷನೋಡಾ
ನೇತ್ರ ಶ್ರೋತ್ರ ಜಿಹ್ವೆ ಘ್ರಾಣ ತ್ವಕ್ಕು ಮೊದಲಾದ
ಸರ್ವೇಂದ್ರಿಯಂಗಳಲ್ಲಿ ಮುಟ್ಟುವ ಸಕಲ ಪದಾರ್ಥಂಗಳನು
ಸಾವಧಾನದಿಂದ ಲಿಂಗಕ್ಕೂ ಕೊಟ್ಟು ಕೊಂಡರೆ
ಅದು ಮಹಾಪ್ರಸಾದವಯ್ಯಾ ಕೂಡಲಸಂಗಮದೇವಾ

೨

ನಡೆವ ನುಡಿವ ಚೈತನ್ಯವುಳ್ಳನ್ನಕ್ಕರ
ಒಡಲ ಗುಣಂಗಳಾರಿಗೆಯೂ ಬಿಡವು ಕೇಳಿರಣ್ಣಾ
ನೋಡುವ ನಯನ ಕೇಳುವ ಶ್ರೋತ್ರ
ವಾಸಿಸುವ ಘ್ರಾಣ ಮುಟ್ಟುವ ತ್ವಕ್ಕು ರುಚಿಸುವ ಜಿಹ್ವೆ
ನೋಡುತ್ತ ಕೇಳುತ್ತ ವಾಸಿಸುತ್ತ ಮುಟ್ಟುತ್ತ ರುಚಿಸುತ್ತ
ಲಿಂಗಾರ್ಪಿತವ ಮಾಡಿ ಲಿಂಗ ಭೋಗೋಪಭೋಗಿಯಾದ ಪ್ರಸಾದಿಗೆ
ಸರ್ವಾಂಗ ಶುದ್ಧವೆಂದಿತ್ತಯ್ಯಾ
ಕಾಯತ್ರಯಂಗಳು ಜೀವತ್ರಯಂಗಳು ಭಾವತ್ರಯಂಗಳ-
ನೊಂದು ಮಾಡಿ
ಸುಖ ದುಃಖ ಗುಣ ನಿರ್ಗುಣಂಗಳು ಇಂತೀ ಉಭಯವ
ಲಿಂಗದಲ್ಲಿ ಏಕವ ಮಾಡಿ
ಅಹುದು ಅಲ್ಲ ಬೇಕು ಬೇಡೆಂಬ ಸಂತೆಯವ ಕಳೆದು
ಕೂಡಲ ಚೆನ್ನಸಂಗಯ್ಯನಲ್ಲಿ ಆದಿಯ ಪುರಾತನರು ಕೂಡಿದ ಪಥವಿದು

೩

ಇಷ್ಟಲಿಂಗಕ್ಕೆ ಅಂಗವನರ್ಪಿತವ ಮಾಡಬೇಕು
ಪ್ರಾಣಲಿಂಗಕ್ಕೆ ಮನವ ನರ್ಪಿತವ ಮಾಡಬೇಕು
ಭಾವಲಿಂಗಕ್ಕೆ ತೃಪ್ತಿಯನರ್ಪಿತವ ಮಾಡಬೇಕು
ಈ ಮರ್ಮವನರಿಯದು ಮಾಡಬಲ್ಲಡೆ ಪ್ರಸಾದಿ ಅದೆಂತೆಂದಡೆ

ಇಷ್ಟಲಿಂಗಾರ್ಪಿತಂ ತ್ವಂಗಂ ಪ್ರಾಣಲಿಂಗಾರ್ಪಿತಂ ಮನಃ ।
ಭಾವಲಿಂಗಾರ್ಪಿತಂ ತೃಪ್ತಿ ರೀತಿ ಭೇದಂ ವರಾನನೇ ॥

ಎಂದುದಾಗಿ ಲಿಂಗಕ್ಕೆಯೂ ತನಗೆಯೂ ಎಡೆದೆರಹಿಲ್ಲದೆ
ಲಿಂಗಸಹಿತವಾಗಿಯೇ ಕೇಳುವ ಲಿಂಗಸಹಿತವಾಗಿಯೇ ಘ್ರಾಣಿಸುವ
ಲಿಂಗಸಹಿತವಾಗಿಯೇ ರುಚಿಸುವ ಲಿಂಗಸಹಿತವಾಗಿಯೇ ನೋಡುವ
ಲಿಂಗಸಹಿತವಾಗಿಯೇ ಸಂಗವ ಮಾಡುವ ಲಿಂಗಸಹಿತವಾಗಿಯೇ ತೊಳಗುವ
ಇಂತಪ್ಪ ಮಹಾಮಹಿಮ ಸದ್ಭಕ್ತನ
ಅಂಗವೆಲ್ಲವೂ ಲಿಂಗ ಸಂಗಮವೆಲ್ಲವೂ ಲಿಂಗ
ಅಂಗ ಸಂಗಮವೆಲ್ಲವೂ ಲಿಂಗಸಂಗವಾದ ಕಾರಣ
ಅಂಗ ಕ್ರಿಯೆಗಳೆಲ್ಲವೂ ಲಿಂಗಕ್ರಿಯೆಗಳಾದ ಕಾರಣ
ಅಂಗ ಭೋಗವೆಲ್ಲವೂ ಲಿಂಗಭೋಗವಾದ ಕಾರಣ
ಇಂತಪ್ಪ ಮಹಾಮಹಿಮ ಸದ್ಭಕ್ತನ ಶ್ರೀಚರಣಕ್ಕೆ
ಎನ್ನ ಶಿರವನಿರಿಸಿ ಪೂಜಿಸುವೆ ಕಾಣಾ
ಶುದ್ಧ ಸಿದ್ಧಿ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತ ಚೆನ್ನಮಲ್ಲಿಕಾರ್ಜುನಯ್ಯಾ
ನಿಮ್ಮ ಸದ್ಭಕ್ತನ ನಿಲವಿನ ಪರಿಯ ನೀವೇ ಬಲ್ಲಿರಲ್ಲದೆ
ನಾನೆತ್ತ ಬಲ್ಲೆನಯ್ಯಾ ನಿಮ್ಮಧರ್ಮ ನಿಮ್ಮಧರ್ಮ ನಿಮ್ಮಧರ್ಮ

೪

ಶ್ರೋತ್ರದಲ್ಲಿ ಕೇಳುವ ಸುವಾಕ್ಯದ ಪರಿಣಾಮವನು
ಮನದ ಅವಧಾನದಲ್ಲಿ ಲಿಂಗಕ್ಕೆ ಸಮರ್ಪಿಸಬೇಕು
ನೇತ್ರದಲ್ಲಿ ಕಂಡರೂಪದ ಪರಿಣಾಮವನು
ಮನದ ಅವಧಾನದಲ್ಲಿ ಲಿಂಗಕ್ಕೆ ಸಮರ್ಪಿಸಬೇಕು
ನಾಶಿಕದಲ್ಲಿ ಬಂದ ಸುಗಂಧದ ಪರಿಣಾಮವನು
ಮನದ ಅವಧಾನದಲ್ಲಿ ಲಿಂಗಕ್ಕೆ ಅರ್ಪಿಸಬೇಕು
ಜಿಹ್ವೆಯಲ್ಲಿ ಬಂದ ಸುರುಚಿಯ ಪರಿಣಾಮವನು
ಮನದ ಅವಧಾನದಲ್ಲಿ ಲಿಂಗಕ್ಕೆ ಅರ್ಪಿಸಬೇಕು
ರತಿಸಂಗದಲ್ಲಿ ಬಂದ ಸುಖದ ಪರಿಣಾಮವನು

ಮನದ ಅವಧಾನದಲ್ಲಿ ಲಿಂಗಕ್ಕೆ ಅರ್ಪಿಸಬೇಕು
ಇದೇ ಅರ್ಪಿತ ಮುಖ ಕೇಳಿರಣ್ಣಾ ಅದೆಂತೆಂದಡೆ—

ಸಂಯೋಗೇ ಚ ವಿಯೋಗೇ ಚ ಅಣುಬಿಂದು ಸುಖಾರ್ಪಿತವರ್ ।
ಯಃ ಕುರ್ಯಾದಿಷ್ಟಲಿಂಗೇತು ಸಾವಧಾನೀ ನಿರಂತರವರ್ ॥

ಎಂದುದಾಗಿ ನಮ್ಮ ಶುದ್ಧಸಿದ್ಧಪ್ರಸಿದ್ಧ ಪ್ರಸನ್ನ ಪ್ರಭುವೇ
ಶಾಂತ ಮಲ್ಲಿಕಾರ್ಜುನನಲ್ಲಿಯೂ ಈ ಅರ್ಪಿತ ಮುಖವನರಿದು
ಅರ್ಪಿಸ ಬಲ್ಲಡೆ ತೃಪ್ತಿಯನೈದುವನು

೫೩

ಅರ್ಪಿತದನುವನು ಪ್ರಸಾದದ ಮಹಿಮೆಯನು
ಆರಿಗೆಯೂ ಅರಿಯಬಾರದು ನೋಡಾ
ಬ್ರಹ್ಮ ವಿಷ್ಣು ದೇವಾದಿ ದೇವತೆಗಳಿಗೆಯೂ ಅರಿಯಬಾರದು ನೋಡಾ
ಋಷಿಜನಗಳಿಗೆಯೂ ಅರಿಯಬಾರದು
ದೇವ ದಾನವ ಮಾನವರಿಗೆಯೂ ಅರಿಯಬಾರದು
ಕಿಂಚಿತ್ತರಿದಡೆಯೂ ಅರ್ಪಿಸಬಾರದು
ಕಿಂಚಿತ್ತರ್ಪಿಸಿದಡೆಯೂ ಪ್ರಸಾದವ ಪಡೆಯಬಾರದು
ಕಿಂಚಿತ್ಪ್ರಸಾದವ ಪಡೆದಡೆಯೂ
ಆ ಪ್ರಸಾದವ ಭೋಗಿಸಿ ಮುಕ್ತರಾಗಬಾರದು
ಅದೆಂತೆಂದರೆ ತನುವ ಗುರುವಿಂಗರ್ಪಿಸಿ
ಗುರು ಪ್ರಸಾದವ ಪಡೆಯಲರಿಯರು ನೋಡಾ
ಮನವ ಲಿಂಗಕ್ಕರ್ಪಿಸಿ ಲಿಂಗ ಪ್ರಸಾದವ ಪಡೆಯಲರಿಯರು ನೋಡಾ
ಧನವ ಜಂಗಮಕ್ಕರ್ಪಿಸಿ ಜಂಗಮ ಪ್ರಸಾದವ ಪಡೆಯ-
ಲರಿಯರು ನೋಡಾ
ತನು ಮನ ಧನವನು ಗುರುಲಿಂಗಜಂಗಮಕ್ಕೆ ಕೊಟ್ಟು
ಆ ತ್ರಿವಿಧಲಿಂಗವ ಏಕೀಕರಿಸಿ ಭಾವಸ್ಥಾನದಲ್ಲಿ ಧರಿಸಿ
ಪರಿಣಾಮ ಪದಾರ್ಥವನರ್ಪಿಸಿ ಭಾವಲಿಂಗ ಪ್ರಸಾದವ
ಪಡೆಯಲರಿಯರು ನೋಡಾ
ಆ ಮಹಾಭಾವ ಲಿಂಗಮಂ ಮನೋ ಮಧ್ಯದಲ್ಲಿರಿಸಿ

ಸಕಲ ನಿಷ್ಕಲ ದ್ರವ್ಯಂಗಳನರ್ಪಿಸಿ
ಮನೋಮಯ ಲಿಂಗಪ್ರಸಾದಮಂ ಪಡೆಯಲರಿಯರು ನೋಡಾ
ಮನೋಮಯ ಲಿಂಗಮೂರ್ತಿಯಂ ತಂದು
ಶ್ರೋತ್ರದ ಬಾಗಿಲದಲ್ಲಿ ಕುಳ್ಳಿರಿಸಿ ಘಂಟಾದಿ ನಾದಂಗಳಂ ಸಮರ್ಪಿಸಿ
ಶಬ್ದ ಪ್ರಸಾದಮಂ ಪಡೆಯಲರಿಯರು ನೋಡಾ
ಆ ಮನೋಮಯ ಮೂರ್ತಿ ಲಿಂಗಮಂ ತಂದು
ತ್ವಕ್ಕಿನ ಬಾಗಿಲಲ್ಲಿ ಕುಳ್ಳಿರಿಸಿ ಕಠಣಾದಿ ಸ್ಪರ್ಶಂಗಳಂ ಸಮರ್ಪಿಸಿ
ಸ್ಪರ್ಶನ ಪ್ರಸಾದಮಂ ಪಡೆಯಲರಿಯರು ನೋಡಾ
ಆ ಮನೋಮಯ ಮೂರ್ತಿ ಲಿಂಗಮಂ ತಂದು
ನೇತ್ರದಬಾಗಿಲಲ್ಲಿ ಕುಳ್ಳಿರಿಸಿ ಶ್ವೇತಾದಿ ವರ್ಣಂಗಳಂ ಅರ್ಪಿಸಿ
ವರ್ಣಪ್ರಸಾದಮಂ ಪಡೆಯಲರಿಯರು ನೋಡಾ
ಆ ಮನೋಮಯ ಮೂರ್ತಿ ಲಿಂಗಮಂ ತಂದು
ಜಿಹ್ವೆಯ ಬಾಗಿಲಲ್ಲಿ ಕುಳ್ಳಿರಿಸಿ ಮಧುರಾದಿ ರಸಂಗಳನರ್ಪಿಸಿ
ರಸಪ್ರಸಾದಮಂ ಪಡೆಯಲರಿಯರು ನೋಡಾ
ಆ ಮನೋಮಯ ಮೂರ್ತಿ ಲಿಂಗಮಂ ತಂದು
ಘ್ರಾಣದ ಬಾಗಿಲಲ್ಲಿ ಕುಳ್ಳಿರಿಸಿ ಗಂಧಾದಿ ಪರಿಮಳಂಗಳನರ್ಪಿಸಿ
ಗಂಧ ಪ್ರಸಾದಮಂ ಪಡೆಯಲರಿಯರು ನೋಡಾ
ಆ ಮನೋಮಯ ಮೂರ್ತಿ ಲಿಂಗಮಂ ತಂದು
ವಾಙ್ಮೂರ್ತಿಯಂ ಮಾಡಿ ಸತ್ಯ ಸುಭಾಷೆಗಳನರ್ಪಿಸಿ
ವಚನ ಪ್ರಸಾದಮಂ ಪಡೆಯಲರಿಯರು ನೋಡಾ
ಇಂತಪ್ಪ ಏಕಾದಶಸ್ಥಾನದಲ್ಲಿ ಏಕಾದಶಾರ್ಪಣವಂ ಮಾಡಿ
ಪ್ರಸಾದಮಂ ಪಡೆಯಲರಿಯದ ಕಾರಣ
ಪ್ರಸಾದ ಭೋಗದಿಂದಪ್ಪ ಕೇವಲ ಮುಕ್ತಿಯಾರಿಗೆಯೂ ಸಂಭವಿಸದು
ಇದು ಕಾರಣ ಇಂತಪ್ಪ ಮಹಾಪ್ರಸಾದ ಸ್ಥಳಕುಳವನು
ನಿಮ್ಮ ಪ್ರಸಾದಿ ಚೆನ್ನಬಸವಂಣಂಗೊಬ್ಬಂಗಲ್ಲದೆ
ಮತ್ತಾರಿಗೆಯೂ ಅರಿಯಬಾರದಯ್ಯಾ
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ಭಕ್ತದೇಹಿಕ ಲಿಂಗ ಸ್ಥಲ ೫

ಇಂತೀ ಪ್ರಕಾರದಿಂ ಸದ್ಭಕ್ತನ ಮುಖದಲ್ಲಿಯೇ ಮಹಾ ಘನಲಿಂಗವು ತೃಪ್ತಿಯನೈದುವದೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು

ಇಂತಪ್ಪ ಸದ್ಭಕ್ತನ ಕಾಯಮಂ ಭಕ್ತಿ ಕಾರಣ ವಾಗಿ ತಾನೇ ಧರಿಸಿ ಚರಿಸುತ್ತಿಹನೆಂಬುದಂ ಪ್ರಸಿದ್ಧ ವಾಗಿ ಅರುಪಲೋಸ್ಕರ ನುಡಿದ ವಚನಂಗಳು

ಶೈವರತ್ನಾಕರೇ—

> ಸಮಾಧೀತರಕಾಲೇಽಪಿ ಭಕ್ತವಾತ್ಸಲ್ಯತಃ ಶಿವಃ ।
> ಭಕ್ತದೇಹಸ್ಥಿತೋ ಯಸ್ಮಾದ್ಭಕ್ತದೇಹಿಕ ಲಿಂಗಿಕಃ ॥೧॥

ಸಮಾಧಿಗಿಂತಲೂ ಉಳಿದಾವ ಕಾಲದಲ್ಲಿಯೂ ಸದ್ಭಕ್ತರುಗಳಲ್ಲಿಯ ವಾತ್ಸಲ್ಯದಿಂದಲೂ ಶಿವನು ಆವುದಾನೊಂದು ಕಾರಣದಿಂದ ಸದ್ಭಕ್ತರ ದೇಹ ದಲ್ಲಿರುನನೋ ಅದು ಕಾರಣದಿಂದ ಸದ್ಭಕ್ತನೇ ದೇಹಾವಾಗಿವುಳ್ಳುದು ಶಿವ ಲಿಂಗವು.

ಶಿವರಹಸ್ಯೇ—

> ಸದ್ಭಾವಃ ಸದ್ಗುಣಶ್ಚೈವ ಸದ್ಧರ್ಮಃ ಸಾವಧಾನತಾ ।
> ತತ್ಸಂಗಸ್ತು ಸುಸಂವೇದ್ಯಂ ತತ್ರತಿಷ್ಠಾಮಿ ಪಾರ್ವತಿ ॥೨॥

ಸದ್ಭಾವವು ಸದ್ಗುಣವು ಸದ್ಧರ್ಮವು ಸಾವಧಾನ ಭಾವವು ಸತ್ಸಹ ವಾಸವು ಸುಜ್ಞಾನವು ಇವುಗಳು ಎಲ್ಲಿ ಇರುವವೋ ಅಲ್ಲಿ ಇಹೆನೆಂದು ದೇವಿ ಯರಿಗೆ ಶಿವನು ನಿರೂಪಿಸಿದನು.

> ಸದ್ಭಕ್ತಿಶ್ಚ ಸದಾಚಾರಃ ಸದ್ಗೋಷ್ಠೀಚ ಸದಾಶುಚಿಃ ।
> ಸಮ್ಯಜ್ಞಾನಂ ಸದಾನದ ಸ್ತತ್ರ ತಿಷ್ಠಾಮಿ ಪಾರ್ವತಿ ॥೩॥

ಸದ್ಭಕ್ತಿಯು ಸದಾಚಾರವು ಸದ್ಗೋಷ್ಠಿಯು ಶುಚಿತ್ವವು ಸಮಜ್ಞಾನವು ಸದಾನಂದವು ಎಲ್ಲಿ ಉಂಟೋ ಅಲ್ಲಿರುವೆನೆಂದು ಪಾರ್ವತೀದೇವಿಯರಿಗೆ ಶಿವನು ನಿರೂಪಿಸಿದನು.

ನಾಹಂವಸಾಮಿ ಕೈಲಾಸೇ ನಮೇರೌನ ಚ ಮಂದರೇ ।
ಮದ್ಭಕ್ತಾ ಯತ್ರತಿಷ್ಠಂತಿ ತತ್ರತಿಷ್ಠಾಮಿ ಪಾರ್ವತಿ ॥೪॥

ಎಲೈ ಪಾರ್ವತಿ ನಾನು ಕೈಲಾಸವಾಸದಲ್ಲಿಯೂ ಇರುವುದಿಲ್ಲ ಮೇರು ಪರ್ವತದಲ್ಲಿಯೂ ಇರುವುದಿಲ್ಲ ಮಂದರ ಪರ್ವತದಲ್ಲಿಯೂ ಇರುವದಿಲ್ಲ ನನ್ನ ಸದ್ಭಕ್ತರು ಎಲ್ಲಿರುವರೋ ನಾನು ಅಲ್ಲಿಹೆನು ಎಂದು ಈಶ್ವರನು ಹೇಳಿದನು.

ಶಿವಧರ್ಮೇ—

ಅನೇನೈವತು ದೇಹೇನ ರುದ್ರಃ ಸಂತಿಷ್ಠತಿ ಕ್ಷಿತೌ ।
ಪಾಪಹಾ ಸರ್ವ ಮರ್ತ್ಯಾನಾಂ ಸಲ್ಲಾಪಾದ್ದರ್ಶನಾದಪಿ ॥೫॥

ಶಿವನು ಸದ್ಭಕ್ತರೆಂಬ ದೇಹದಿಂದಲೇ ನುಡಿಯಿಂದಲೂ ನೋಟದಿಂದಲೂ ಸರ್ವ ಮನುಷ್ಯರುಗಳ ಪಾಪಂಗಳ ಕೆಡಿಸುವಾತನಾಗಿ ಭೂತಲದಲ್ಲಿರುತ್ತಿಹನು

## ವಚನಗಳು

೧

ಹಸಿಯ ಕಪಾಲದಲ್ಲಿ ಉಂಬನೆಂಬರು ಅದು ಹುಸಿ
ಸದ್ಭಕ್ತನ ಮುಖದಲ್ಲಿ ಉಂಬನಾಗಿ
ಅಸ್ಥಿಗಳ ತೊಟ್ಟನೆಂಬರು ಅದು ಹುಸಿ
ಸದ್ಭಕ್ತದೇಹಿಕ ದೇವನಾಗಿ
ಚರ್ಮವ ಹೊದ್ದನೆಂಬರು ಅದು ಹುಸಿ
ಸದ್ಭಕ್ತನ ದೇಹದಲ್ಲಿ ಸದಾ ಸನ್ನಿಹಿತನಿಪ್ಪನಾಗಿ
ಅದೆಂತೆಂದಡೆ ಬ್ರಹ್ಮಾಂಡ ಪುರಾಣದಲ್ಲಿ

ನೈವೇದ್ಯಂ ಪುರತೋನ್ಯಸ್ತಂ ದರ್ಶನಾತ್ಸ್ವೀಕೃತಂ ಮಯಾ ।
ರಸಾನ್ಭಕ್ತಸ್ಯ ಜಿಹ್ವಾಗ್ರಾದಶ್ನಾಮಿ ಕಮಲೋದ್ಭವ ॥

ಮತ್ತಂ ವಾತುಲತಂತ್ರದಲ್ಲಿ—

ಯಾವನ್ನಿರ್ವಹತೇ ಯಸ್ತು ಯಾವಜ್ಜೀವಂ ಪ್ರತಿಜ್ಞಯಾ ।
ಮನುಷ್ಯ ಚರ್ಮಣಾ ಬದ್ಧಃ ಸರುದ್ರೋನಾತ್ರ ಸಂಶಯಃ ॥

ಎಂದುದಾಗಿ ಮಹಾಲಿಂಗ ಕಲ್ಲೇಶ್ವರದೇವಾ
ನಿಮ್ಮ ಸುಳುಹು ಪರಕಾಯ ಪ್ರವೇಶವಾಗಿಹುದು

೨

ದೇವರೆದ್ದಡೆ ನಾವೇಳುವೆವಯ್ಯಾ
ದೇವ ಬಿದ್ದಡೆ ನಾವು ಬೀಳುವೆವಯ್ಯಾ
ದೇವ ಸತ್ತಡೆ ನಾವು ಸಾವೆವಯ್ಯಾ
ದೇವ ಬದುಕಿದಡೆ ನಾವು ಬದುಕುವೆವಯ್ಯಾ
ನಾವು ಸತ್ತು ದೇವ ಹಿಂದುಳಿದನಾದರೆ
ಎನ್ನಿಂದ ವ್ರತಗೇಡಿಗಳಾರು ಹೇಳಾ ಸಕಳೇಶ್ವರಾ

೩

ಗುರುಲಿಂಗಜಂಗಮಕ್ಕೆ ದಾಸೋಹ ಮಾಡುವ ಸದ್ಭಕ್ತನ
ಪರ್ಯಾಯವ ನೋಡಿರಯ್ಯಾ
ಶ್ರೀಗುರು ಶಿಷ್ಯಂಗೆ ಅನುಗ್ರಹವ ಮಾಡಲೊಡನೆ
ಆ ಶಿಷ್ಯನು ಆ ಶ್ರೀಗುರುವ ಕೊಂದು ನುಂಗಿದ ಪರಿಯ ನೋಡಿರಯ್ಯಾ
ಲಿಂಗ ಬಂದು ಪೂಜೆಯ ಮಾಡಿಸಿಕೊಂಡೆನೆಂದಡೆ
ಆ ಸದ್ಭಕ್ತನು ಆ ಲಿಂಗವ ಕೊಂದು ನುಂಗಿದ ಪರಿಯ ನೋಡಿರಯ್ಯಾ
ಜಂಗಮವು ಬಂದು ಪೂಜೆಯ ಕೈಕೊಂಡೆನೆಂದಡೆ
ಆ ಸದ್ಭಕ್ತನು ಜಂಗಮವ ಕೊಂದು ನುಂಗಿದ ಪರಿಯ ನೋಡಿರಯ್ಯಾ
ಇಂತೀ ಮೂವರ ಕೊಂದು ನುಂಗಿದವನನೆಂತು ಭಕ್ತನೆಂಬೆನಯ್ಯಾ
ಆತನನಾಚಾರಿ ಆತ ವ್ರತಗೇಡಿ ಆತ ಕ್ರಿಯಾವಿರಹಿತನು
ಇಂತಾತನ ನುಡಿಯ ಕೇಳಲಾಗದು ಹೇಳಲಾಗದು
ಆತ ಮರ್ತ್ಯ ಲೋಕಕ್ಕೆ ಸಲ್ಲ ಆತ ದೇವ ಲೋಕಕ್ಕೆಯೂ ಸಲ್ಲ
ಆತನಾವಲೋಕಕ್ಕೆಯೂ ಸಲ್ಲ
ಇಂತೀ ನೀತಿ ಬಾಹಿರನನು ಭಕ್ತನೆಂದೆಂತೆಂಬೆನಯ್ಯಾ
ಅಂತಪ್ಪ ಸದ್ಭಕ್ತನು ನಿಂದ ನಿಲುವಿನ ಪರಿಯ ನೀವೇ ಬಲ್ಲಿರಲ್ಲದೆ
ನಾನೆತ್ತ ಬಲ್ಲೆನಯ್ಯಾ ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ
ಶಾಂತ ಮಲ್ಲಿಕಾರ್ಜುನಯ್ಯಾ ನಿಮ್ಮ ಧರ್ಮ ನಿಮ್ಮ ಧರ್ಮ ನಿಮ್ಮ ಧರ್ಮ

## ಅನಾಗಮ ಸ್ಥಲ ೬.

ಇಂತೀ ಪ್ರಕಾರದಿಂ ಶ್ರೀ ಮಹಾದೇವಂಗೆ ಸದ್ಭಕ್ತನೇ ದೇಹವಲ್ಲದೆ ಬೇರೊಂದು ದೇಹವಿಲ್ಲೆಂದು ಭಕ್ತದೇಹಿಕ ಸ್ಥಲವಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಭಕ್ತದೇಹಿಕ ದೇವನಾದ ಶಿವನು ವೇದಶಾಸ್ತ್ರ ಪುರಾಣಾಗಮಂಗಳಿಗೆ ಒಲಿಯನೆಂಬುದನರುಪಲೋಸ್ಕರ ನುಡಿದ ವಚನಂಗಳು.

> ಯಸ್ಯಾಸ್ತಿ ಶಿವೇ ಭಕ್ತಿಃ ಶಾಸ್ತ್ರಾಂತಸ್ಯ ಕರೋತಿ ಕಿಂ ।
> ಲೋಚನಾಭ್ಯಾಂ ವಿಹೀನಸ್ಯ ದರ್ಪಣಂ ಕಿಂ ಕರಿಷ್ಯತಿ ॥೧॥

ಎಲ್ಲಾ ಶಾಸ್ತ್ರಂಗಳನರಿವಡೆಯೂ ಶಿವನಲ್ಲಿ ಭಕ್ತಿಯಿಲ್ಲದಿದ್ದರೆ ಕಣ್ಣಿಲ್ಲದ ಕುರುಡನು ಕನ್ನಡಿಯಂ ನೋಡಿದಂತಾಗುವದು.

ತತ್ತ್ವಸಾರೇ—

> ಸರ್ವಯಜ್ಞೇಷು ಜಪೇ ಪ್ರಾಪ್ತೇ ಸರ್ವಜ್ಞಂ ಮನ ಉಚ್ಯತೇ
> ತತ್ತ್ವಸಾರಂ ವಿಜಾನಂತಿ ಪರಮಃ ಶಾಸ್ತ್ರಚೋದಿತಾಃ ॥೨॥

ಸಮಸ್ತಯಜ್ಞ ಜಪಂಗಳಂ ಮಾಡಿದವರ ಮನವು ಎಲ್ಲವನ್ನು ಬಲ್ಲುದೆನಿಸಿಕೊಂಡಡೆಯೂ ತತ್ತ್ವಸಾರವಾದ ಪರತತ್ತ್ವ ಜ್ಞಾನವನರಿಯುವ ಕಾರಣ ಇಂತಹವುಗಳು ಶಾಸ್ತ್ರದಲ್ಲಿ ಮೋಹವುಳ್ಳ ಪಶುಗಳೆನಿಸುವರು.

> ಏವಂ ಮಂತ್ರಮಯಂ ಸರ್ವೇ ಪರಮಃ ಶಾಸ್ತ್ರಚೋದಿತಾಃ ।
> ಗೋಪನೀಯಂ ಪರಂ ತತ್ತ್ವಂ ತವಭಕ್ತ್ಯಾ ಮಯಾಖ್ಯಾತಂ ॥೩॥

ರಹಸ್ಯವಾದ ಪರತತ್ತ್ವವನು ನಿನ್ನ ಮೇಲಣ ಅನುಗ್ರಹದಿಂದ ನಿನ್ನ ಭಕ್ತಿಯಿಂ ನಿನಗೆ ನಾನು ಹೇಳಿದೆನು.

> ವರ್ಣಾಶ್ರಮಾಭಿಮಾನೇನ ಶ್ರುತಿದಾಸೋ ಭವೇನ್ನರಃ
> ಅಭಿಮಾನ ವಿನಿರ್ಮುಕ್ತೋ ವರ್ತತೇ ಶ್ರುತಿಮೂರ್ಧನಿ ॥೪॥

ವರ್ಣಾಶ್ರಮಾಭಿಮಾನ ಮೊದಲಾದ ಕುಲಗೋತ್ರ ವ್ಯವಹಾರದಿಂದ ಮನುಷ್ಯನು ಅಭಿಮಾನದ ಬಂಟನೆಂದು ವೇದದಲ್ಲಿ ಹೇಳುವದು. ಆ ಕುಲಗೋತ್ರಾಭಿಮಾನವಂ ಬಿಟ್ಟವನು ವೇದದ ಶಿರಸ್ಸಿನಲ್ಲಿ ಹೇಳಿದ ಹಾಗೆ ನಡೆಯುವದು.

## ವಚನಗಳು

೧

ಹೋ ಹೋ ವೇದವೇ ತತ್ವವಾದಡೆ ಸೂದ್ರಾರನ
ನುಡಿಯಲುಂಡುಂಡು
ಒಬ್ಬ ವಿಧಾನವುಳ್ಳ ಉಪಾಧ್ಯಾಯರಾದರೂ ಇಲ್ಲವಾದರೇ
ಶಾಸ್ತ್ರವೇ ತತ್ವವಾದಡೆ ಶಿವರಾತ್ರಿಯ ಜೇಡಂಗಿತ್ತುದು
ಒಬ್ಬನಾದರೂ ಸ್ತ್ರೋತ್ರಮಂ ಸೈಯ್ಯಲಾಗದೇ
ಆಗಮ ವಿಧಿಯಲ್ಲಿ ಮಂತ್ರ ಮೂರ್ತಿಯೊಂದೆಂಬ ಮಾತದಂತಿರಲಿ
ಅದು ಕೇಳಲಾಗದು ಭ್ರಾಂತಿಬೇಡ ಭಾವಮೂರ್ತಿ ಒಲ್ಲಿ
ಪ್ರಮಾಣಿಸಿದೆ
ಅಕುಲ ಕುಲವೆಂದರೆ ಕಕ್ಕಯ್ಯನ ಮನೆಯ ಅಕ್ಕರು
ನಿಮ್ಮ ತರ್ಕ ಮುಕ್ಕಾಯಿತ್ತು ಲೋಕವರಿಯದೆ
ಕಲ್ಲಲಿಟ್ಟು ಕಾಲಿಲೊದ್ದರೆ ಅಲ್ಲಿ ಮೂರ್ತಿ ಸುರಿಯಿತ್ತಲ್ಲಾ
ಇಂಬಿಲ್ಲದ ದ್ವಿಜರೆಲ್ಲರೂ ಹೇಳಿರೇ ಸಲ್ಲದು ನಿಮ್ಮ ಮಾತು ನಿಲ್ಲಿ ನಿಲ್ಲಿ
ಬಲ್ಲಿದ ನಡೆದುದೇ ಬಟ್ಟೆ
ಮಹಾಲಿಂಗ ಕಲ್ಲೇಶ್ವರನಲ್ಲಿ ಲಿಂಗಾಚಾರಿಗಳು ನಿಸ್ಸೀಮರು

೨

ಆಗಮಾಚಾರವಿಲ್ಲದೆ ಶಿವಭಕ್ತರಲ್ಲೆಂಬ ಘಾತಕರೆಲ್ಲರೂ ನಿಮ್ಮ
ಕೇಳಿರೋ
ಮುಕ್ಕುಳಿಸಿದ ನೀರ ಮಜ್ಜನಕ್ಕೆರೆವುದು ಆವಾಗಮಾಚಾರ
ಸರುವ ಕಟ್ಟಿ ಪತ್ರೆಯ ಹರಿದು ಹಾಕುವುದಾವ ಮಂತ್ರದೊಳಗು
ಸರ್ಪನೇ ಹರಿತಂದು ಕಲ್ಲಲಿಡುವುದಾವ ಪೂಜೆಯೊಳಗು
ಬಹು ಬುದ್ಧಿಬೇಡ ಶರಣೆಂದು ಬದ್ಧರಪ್ಪುದು
ಮಹಾಲಿಂಗ ಕಲ್ಲೇಶ್ವರದೇವರೆಲ್ಲವ ಒಲ್ಲರು

೩

ಕಪ್ಪನ ಮನೆಯಲ್ಲಿ ಸೃಷ್ಟಿಗೀಶ್ವರನುಂಬಾಗ
ಎತ್ತ ಹೋದುವು ನಿಮ್ಮ ಶಾಸ್ತ್ರಂಗಳು

ಶಬ್ದಗಾಂಭೀರ್ಯ ಶ್ರುತಿಕೋಟಿ ಚರಣಕಮಲಸೆಂಬ ಲಿಂಗದ ಕೈಯ್ಯಲ್ಲಿ
ಕಲಿತ ವೇದಂಗಳು ಅಜ್ಞಾನ ಸಂಗವಾಗಿ ಅಗೋಚರವಾಗಿ ನುಡಿದವು

ಋಗ್ವೇದ "ನಾಹಂಕಾರಸಂಭವಂ ಬ್ರಹ್ಮತೇಜಃ" ಎಂದುದಾಗಿ
ಯಜುರ್ವೇದ "ನಾಹಂಕಾರ ಲಕ್ಷ್ಮೀಪತಿರ್ವಿಷ್ಣುತೇಜಃ" ಎಂದುದಾಗಿ
ಸಾಮವೇದ "ನಾಹಂದೇವ ರುದ್ರತೇಜಃ" ಎಂದುದಾಗಿ
ಅಥರ್ವಣವೇದ "ನಾಹಂ ಸ್ಥಲಂ ಸ್ಥಲವಾ" ಎಂದುದಾಗಿ

ಕುಲಮದದಿಂದ ಬ್ರಹ್ಮಕೆಟ್ಟ ಬಲಮದದಿಂದ ವಿಷ್ಣುಕೆಟ್ಟ
ದೈವಮದದಿಂದ ರುದ್ರಕೆಟ್ಟ ಛಲಮದದಿಂದ ಇಂದ್ರಕೆಟ್ಟ
ಇಂತೀ ನಾಲ್ಕು ಶ್ರುತಿಗಳು ತಮ್ಮ ಗರ್ವದಿಂದ ನೂಂಕಿಸಿಕೊಂಡವು
ಶಿವಸರಮನೆಯ ಬಾಗಿಲಲ್ಲಿ
ನುತಪ್ತ ಚತುರ್ವೇದಂಗಳು ಬಂದು ಲಿಂಗದ ಚತುರ್ದಶೆಯಲ್ಲಿ
ಓಲೈಸಿ
ಕೈಮುಗಿದುಕೊಂಡು ಹೊಗಳುತ್ತಿದ್ದವು ಅದೆಂತೆಂದಡೆ--

ಓಂ ಜಯುತಶ್ಯಾನಾಂ ಪುರುಷ ಮೇರುಕಾಮ್ಯಾನಾಂ
ಪುಣ್ಯ ಜಪಧ್ಯಾನಾನಾಂ ಸರ್ವಜನ್ಮ ವಿನಾಶನಾಂ ಆದಿ ಅನಾದಿ ಪಿತ್ರುಣಾಂ
ಅಜಕೋಟಿ ಸಹಸ್ರವಂದ್ಯಾನಾಂ ದೇವಕೋಟಿ ಚರಣ ಕಮಲಾನಾಂ

ಎಂದು ವೇದಂಗಳು ದೇವಚರಣದ ಕುರುಹು ಕಾಣವು
ಆದಿಯಲ್ಲಿ ನಮ್ಮ ಪುರಾತನರು ವೇದವನೋದಿದರೇ ಇಲ್ಲ
ಕಲ್ಲಲಿಟ್ಟರು ಕಾಲಲೊದೆದರು
ಬಿಲ್ವ ಪತ್ರವ ಮರದ ಕೆಳಗೆ ಲಿಂಗವಂ ಪೂಜಿಸಿ ನಿಷ್ಠೆಯಂ ಪಡೆದರು
ಮನೆಯ ಬಾಗಿಲ ಕಾಯಿಸಿಕೊಂಡರು
ಆಡಿಸಿದರು ಅಡಗಿಸಿದರು
ಓಡಿವ ಲಿಂಗಮಂ ತಂದು ಪ್ರತಿಷ್ಠೆಯಂ ಮಾಡಿದರು
ಇಂತಪ್ಪ ದೃಷ್ಟವ ಸಾಧಿಸಿದರು ನಮ್ಮ ಪುರಾತನರು
ನಿಮ್ಮವರು ವೇದವನೋದಿದವರೆಂಬುದನರಿದು
ಅವರನೊಲ್ಲದೆ ಬಿಟ್ಟಕಾಣಾ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

## ಶರಣ ಚಾರಿತ್ರ ಸ್ಥಲ ೭

ಇಂತೀ ಪ್ರಕಾರದಿಂ ಮಹಾಘನಲಿಂಗವು ಭಕ್ತಂಗೆ ಒಲಿವುದಲ್ಲದೆ ಉಳಿದಾದ ವೇದಾಗಮ ಪುರಾಣಂಗಳಿಗೆ ಶಿವನೊಲಿಯನೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಶಿವನೊಲಿದ ಶರಣರು ಸಂಸಾರದೊಳಗಿದ್ದು ಇಲ್ಲದಂತಿರಬೇಕೆಂಬುದನರುಪಲೊಸ್ಕರ ನುಡಿದ ವಚನಂಗಳು.

ಶಿವಧರ್ಮೇ—

> ಬಕಮಧ್ಯಸ್ಥಿತೋ ಹಂಸಃ ಕಾಕಮಧ್ಯಸ್ಥಿತಃ ಪಿಕಃ ।
> ಮೃಗಮಧ್ಯಸ್ಥಿತಃ ಸಿಂಹಃ ಶಿವಯೋಗೀ ಜಗತ್ಸ್ಥಿತಃ ॥ ॥

ಬೆಳ್ಳಕ್ಕಿಗಳ ಮಧ್ಯದಲ್ಲಿ ಹಂಸವಿದ್ದಹಾಗೆ ಕಾಗೆಗಳ ಮಧ್ಯದಲ್ಲಿ ಕೋಗಿಲೆಯಿದ್ದಹಾಗೆ ಮೃಗಗಳ ಮಧ್ಯದಲ್ಲಿ ಸಿಂಹವಿದ್ದಹಾಗೆ ಶಿವಯೋಗಿಯಾದವನು ಜಗನ್ಮಧ್ಯದಲ್ಲಿಹನು.

> ಪರಪುರುಷರತಾ ನಾರೀ ಭರ್ತಾರಮನುವರ್ತತೇ ।
> ಪರಬ್ರಹ್ಮರತೋ ಯೋಗೀ ಸಂಸಾರಮನುವರ್ತತೇ ॥೨॥

ಪರಪುರುಷನಲ್ಲಿ ಆಸಕ್ತಿಯುಳ್ಳ ಸ್ತ್ರೀಯು ತನ್ನ ಗಂಡನಿಗೆ ಹೇಗೆ ಸೇವೆಯಂ ಮಾಡುವಳೋ ಹಾಗೆ ಪರಬ್ರಹ್ಮದಲ್ಲಿ ಪ್ರೀತಿಯುಳ್ಳ ಶಿವಯೋಗಿಯು ಸಂಸಾರದಲ್ಲಿ ಒಳಪಡಿರುಹನು

> ದಾಸೀ ಚಿತ್ತಂ ಯಥಾ ಕುಂಭೇ ವೇಶ್ಯಾಚಿತ್ತಂ ಯಥಾಧನೇ ।
> ಪದ್ಮಪತ್ರಂ ಜಲೇ ಭಿನ್ನಂ ಯೋಗಿಚಿತ್ತಂ ತಥಾ ಶಿವೇ ॥೩॥

ದಾಸಿಯ ಚಿತ್ತವು ನೀರ ಕೊಡದ ಮೇಲೆ ಇರುವ ಹಾಗೆ ವೇಶ್ಯೆಯ ಚಿತ್ತವು ಪರದ್ರವ್ಯದ ಮೇಲೆ ಇರುವ ಹಾಗೆ ತಾವರೆಯ ಉದಕವ ಮುಟ್ಟಿಯೂ ಮುಟ್ಟದಹಾಗೆ ಸಂಸಾರದಲ್ಲಿ ಯೋಗಿಯಿದ್ದರೂ ಚಿತ್ತವು ಶಿವನಲ್ಲಿಹುದು.

ಸುಮುಕ್ಷುಚಿತ್ತಭಕ್ತಾನಾಂ ತಮೋಮಾಯೋ ವಿವರ್ಜಿತೇ ।
ಮೋಕ್ಷನಿರ್ಮಲ ಕೋಯಾಸಿ ಪದ್ಮಪತ್ರಂ ನಥಾದಯೋತ್ ।೪॥

ಎನ್ನ ಸಾಹಿತ್ಯವುಳ್ಳ ಸದ್ಭಕ್ತರಿಗೆ ಅಜ್ಞಾನವೂ ಮಾಯೆಯೂ ಇಲ್ಲ. ಮೇಘದಿಂದ ಬಿದ್ದ ನಿರ್ಮಲೋದಕಗಳು ತಾವರೆಯೆಲೆಯ ಮುಟ್ಟದಂತೆ ಶಿವಯೋಗಿ ಸಂಸಾರದಲ್ಲಿದ್ದರೂ ಅಂಟದಿರುವನು.

ಗರುಡೋಽಹ್ಯಹಿಪಾಶೇನ ರಜ್ಜುಪಾಶೇನ ಪಾವಕಃ ।
ಯೋಗೀ ಸಂಸಾರಪಾಶೇನ ನ ಬದ್ಧ ಇತಿ ವಿಸ್ಮೃತೇ ॥೫॥

ಗರುಡಂಗೆ ಸರ್ಪಪಾಶವು ಹೇಗೆ ಇಲ್ಲವೋ ಅಗ್ನಿಗೆ ರಜ್ಜುಪಾಶವು ಹೇಗಿಲ್ಲವೋ ಹಾಗೆ ಶಿವಯೋಗಿ ಸಂಸಾರದಲ್ಲಿದ್ದರೂ ಸಂಸಾರ ಪಾಶ ಬಂಧವಿಲ್ಲ.

## ವಚನಗಳು

೧

ಜಲದೊಳಗಣ ಮತ್ಸ್ಯವು ಜಲವ ತನ್ನ ನಾಶಿಕದತ್ತ
ಹೊದಲಿಸದ ಪರಿಯ ನೋಡಾ ಅಯ್ಯಾ
ಶರಣನು ಸಂಸಾರ ಪ್ರಪಂಚದೊಳಗಿದ್ದು
ಆ ಸಂಸಾರ ಪ್ರಪಂಚವು ತನ್ನ ಹೊದ್ದಲೀಯದ ಪರಿಯ
ನೋಡಾ ಅಯ್ಯಾ
ಶರಣಂಗೆ ಈ ಬದ್ಧಿಯ ಮತ್ಸ್ಯಗೆ ಆ ಬುದ್ಧಿಯ
ನೀನು ಕರುಣಿಸಿದೆಯಲ್ಲಾ ಎನ್ನ ಕಪಿಲಸಿದ್ಧಮಲ್ಲಿನಾಥಯ್ಯಾ

೨

ಲೋಕವಿಡಿದು ಲೋಕದ ಸಂಗದಂತಿಪ್ಪೆನು
ಆಕಾರವಿಡಿದು ಸಾಕಾರ ಸಹಿತ ನಡೆವನು
ಹೊರಗೆ ಬಳಸಿ ಒಳಗೆ ಮರೆದಂತಿಪ್ಪೆನು
ಬೆಂದ ನುಲಿಯಂತೆ ಉರಿಗೊಂದದಂತಿಪ್ಪೆನು
ಎನ್ನದೇವ ಚೆನ್ನಮಲ್ಲಿಕಾರ್ಜುನಯ್ಯಾ
ಹತ್ತರೊಳಗೆ ಹನ್ನೊಂದಾಗಿ ನೀರ ತಾವರೆಯಂತಿಪ್ಪೆನು

೩

ಇಹಪರವೆಂಬ ಇದ್ವೈತಕ್ಕದ್ವೈತಿಯಾದವನ ಪರಿಹೊಸತು
ನೈಹತ್ತದ ನಾಲಿಗೆಯಂತೆ ಹುಡಿಹತ್ತದ ಗಾಳಿಯಂತೆ
ಕಾಡಿಗೆ ಹತ್ತದ ಆಲಿಯಂತಿರ್ದೆನಯ್ಯಾ
ನಿಮ್ಮಲಿಗೆಂಯು ಚೆನ್ನರಾಮನೆಂಬ ಲಿಂಗದಲ್ಲಿ
ಆಚರಿಸುತ್ತ ಆಚರಿಸದಂತಿದ್ದೆನಯ್ಯಾ

೪

ಮುಂಗಳ ಮಣ್ಣ ಬೆರಸದಂತೆ ಗಾಳಿಯ ಧೂಳು ಹತ್ತದಂತೆ
ಬಿಸಿಲು ಮಳೆಯಲ್ಲಿ ನೆನೆಯದಂತೆ ಬಯಲು ಮೂರ್ತಿಗೊಳ್ಳದಂತೆ
ಸಿದ್ಧಸೋಮನಾಥ ನಿಮ್ಮ ಶರಣನೆಲ್ಲಿಯೂ ಬಳಸಿ ಬಳಸದಂತಿಪ್ಪನು

೫

ಶಿವಶರಣನು ನಿದ್ರೆಗೈದಿದ್ದರೆ ಜಪ ಕಾಣಿರಣ್ಣಾ
ಶಿವಶರಣನು ಎಚ್ಚಿದ್ದರೆ ಶಿವರಾತ್ರಿ ಕಾಣಿರಣ್ಣಾ
ಶಿವಶರಣನು ನೋಡಿದಡೆ ಪಾಪಕ್ಷಯ ಕಾಣಿರಣ್ಣಾ
ಶಿವಶರಣನು ನಡೆದುದೇ ಪಾವನ ಕಾಣಿರಣ್ಣಾ
ಶಿವಶರಣನು ನುಡಿದುದೇ ಶಿವತತ್ವ ಶಿವಮಂತ್ರ ಕಾಣಿರಣ್ಣಾ
ಶಿವಶರಣ ಮುಟ್ಟಿದುದೇ ಸರ್ವಸಿದ್ಧಿ ಕಾಣಿರಣ್ಣಾ
ಶಿವಶರಣನ ಮನವೇ ಲಿಂಗ ಕಾಣಿರಣ್ಣಾ
ಶಿವಶರಣನ ಕಾಯವೇ ಕೈಲಾಸ ಕಾಣಿರಣ್ಣಾ
ಗುಹೇಶ್ವರಾ ನಿಮ್ಮ ಶರಣನ ಚಾರಿತ್ರವು ವಿಪರೀತವು

## ಸ್ತುತಿನಿಂದಾ ನಿರಸನಸ್ಥಲ ೮

ಇಂತೀ ಪ್ರಕಾರದಿಂ ಶಿವಶರಣರು ಸಕಲ ಪ್ರಪಂಚದೊಳಿದ್ದು ಲೇಪವಿಲ್ಲದೇ ಇದ್ದರೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ನಿರ್ಲೇಪಿಯಾದ ಶರಣರು ಸ್ತುತಿನಿಂದೆಗಳ ಮನದಲ್ಲಿ ತಾಳಲಾಗದೆಂದು ನುಡಿದ ವಚನಂಗಳು.

ಸಮಪ್ರಿಯಾ ಪ್ರಿಯೋಧೀರಃ ಸಮನಿಂದಃ ಸಮಸ್ತುತಿಃ
ಸರ್ವಾರಂಭ ಪರಿತ್ಯಾಗೀ ಅರಿಮಿತ್ರ ಸಮಸ್ತಥಾ ॥೧॥

ಶಿವಯೋಗಿಯು ಇಷ್ಟಾನಿಷ್ಟಂಗಳಂ ಬಗೆಯದವನು ಧೀರನು ಸ್ತುತಿನಿಂದೆಗಳಲ್ಲಿ ಸಮನಾಗಿಹನು ಎಲ್ಲಾ ಉದ್ಯೋಗವಂ ಬಿಟ್ಟಹನು ಹಾಗು ಶತ್ರುಮಿತ್ರರಲ್ಲಿ ಸಮನಾಗಿರುವನು.

ನಾಹಂ ಲೋಕೋ ನಲೋಕೋಽಹಂ ಲೋಕನಿಂದಾ ಕುತೋಮಮ
ಇತಿ ನಿಶ್ಚಯವಾನ್ಯಃ ಶಿವಜ್ಞಾನೀತಿ ಕಥ್ಯತೇ ॥೨॥

ನನಗೆ ಲೋಕವಿಲ್ಲ ಲೋಕಕ್ಕೆ ನಾನಿಲ್ಲ ಈ ರೀತಿಯ ನಿಜವುಳ್ಳಾತಂಗೆ ಲೋಕನಿಂದೆಯೆಲ್ಲಿಯದು. ಇಂಥಾತನು ಶಿವಜ್ಞಾನಿಯೆಂದು ಹೇಳಲ್ಪಡುವನು.

ಸುಖದುಃಖಸಮಃ ಶತ್ರುಬಂಧುವರ್ಗ ಸಮಸ್ತಥಾ ।
ಸಮಲೋಷ್ಟ ಸುವರ್ಣೋಽಹಿ ಜೀವೇಽಪಿ ಮರಣೇಽಸಮಃ ॥೩॥

ಸುಖದುಃಖಗಳನು ಸಮವಾಗಿ ತಿಳಿಯುವವನಾಗಿಯೂ ಶತ್ರುಗಳನ್ನು ಬಾಂಧವರನ್ನು ಸಮವೆಂದೆಣಿಸುವನಾಗಿಯೂ ಇಟ್ಟಿಗೆ ಕಾಂಚನಗಳನು ಸಮವಾಗಿ ಭಾವಿಸುವನಾಗಿಯೂ ಜೀವನ ಮರಣಗಳಲ್ಲಿ ಸಮವಾಗಿದ್ದಾತನು ಶಿವಯೋಗಿಯು.

### ವಚನಗಳು

೧

ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯಾ
ಸಮುದ್ರ ತಡೆಯಲೊಂದು ಮನೆಯ ಮಾಡಿ ನೊರೆತೆರೆಗಳಿಗಂಜಿದಡೆಂತಯ್ಯಾ

ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯಾ
ಚೆನ್ನಮಲ್ಲಿಕಾರ್ಜುನ ದೇವ ಕೇಳಯ್ಯಾ
ಲೋಕದೊಳಗೆ ಹುಟ್ಟಿರ್ದಬಳಿಕ ಸ್ತುತಿ ನಿಂದೆಗಳು ಬಂದಡೆ
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು

೨

ಲೋಕವೊಂದನೆಂದರೆ ತಾನೊಂದನೆನಬೇಡ
ಮತ್ತಾರನೆಂದಡೆಯೂ ತನ್ನನೆಂದರೆನಬೇಡ

> ನಾಹಂ ಲೋಕೋ ನ ಲೋಕೋಽಹಂ ಲೋಕಸಂಗಾ ಕುತೋ ಮಮ
> ಇತಿ ನಿಶ್ಚಯವದ್ಭಾವಃ ಶಿವ ಜ್ಞಾನೀತಿ ಕಥ್ಯತೇ ॥

ಎಂದುದಾಗಿ ಇದನರಿದು ಛತ್ರಕ್ಕೆ ಬೆಂಗುಂಡನಿಕ್ಕಿದಂತಿರಬೇಕು
ಹಿರಿಯರು ಗುಹೇಶ್ವರಾ

೩

ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ
ಅಭಿಮಾನವಾಗಿ ಕಾಡಿತ್ತು ನೋಡಾ
ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ
ಅಭಿಮಾನವಾಗಿ ಕಾಡಿತ್ತು ನೋಡಾ
ಲೋಕವೆಂಬ ಮಾಯೆಗೆ ಶರಣ ಚಾರಿತ್ರ ಮರುಳಾಗಿ
ತೋರುವುದು ನೋಡಾ
ಚೆನ್ನಮಲ್ಲಿಕಾರ್ಜುನನೊಲಿದ ಶರಣಂಗೆ-
ಮಾಯೆಯಿಲ್ಲ ಮರಹಿಲ್ಲ ಅಭಿಮಾನವೂ ಇಲ್ಲ

## ನಿರಹಂಭಾವಸ್ಥಲ ೯

ಇಂತೀ ಪ್ರಕಾರದಿಂ ಶಿವನೊಲಿದ ಶರಣರು ಸ್ತುತಿನಿಂದೆಯ ಸಮವೆಂಬು ಕಾಣಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಸ್ತುತಿನಿಂದೆಯಂ ಬಿಟ್ಟು ಸದ್ಭಕ್ತಿಯಾಡಿಯಾದ ಷಡ್ವಿಧಭಕ್ತಿ ಸಂಪನ್ನರಾದಡೆಯೂ ಸ್ವಾಮಿಭೃತ್ಯ ಸಂಬಂಧವನುಳ್ಳಂತಹ ಸದ್ಭಕ್ತರುಗಳು ತಮ್ಮ ಸಚ್ಚಾರಿತ್ರಗುಣಂಗಳು ತಮಗುಂಟೆಂದು ಪರಿಣಾಮಿಸುವುದು ಲಿಂಗ ಮೆಚ್ಚಲ್ಲವೆಂದು ನುಡಿದ ವಚನಂಗಳು.

ಶಿವಧರ್ಮೇ—

ಅನಾದರೋಹ್ಯಹಂಕಾರೋ ಮೋಹೋ ಭೀತಿರುಪಾಧಿಕಮ್
ಕೀರ್ತಿಶ್ಚ ಷಡ್ಗುಣೋ ನಾಸ್ತಿ ದಾಸೋಹಸ್ತು ಸ್ವಯಂ ಶಿವಃ ।೧

ಅನಾದರವು ಅಹಂಕಾರವು ಮೋಹವು ಭೀತಿಯು ಉಪಾಧಿಯು ಕೀರ್ತಿಯು ಇಂತೀ ಷಡ್ಗುಣಂಗಳಿಲ್ಲದುದೀಗ ನಿರಹಂಭಾವ ಲಕ್ಷಣವು. ಇಂತಪ್ಪ ದಾಸೋಹಿಯು ತಾನೇ ಶಿವನೆನಿಸಿಕೊಳ್ಳುವನು.

ನಿರಹಂಕಾರಃ ಸದಾಚಾರೋ ನಿರ್ವಿಕಾರಃ ಸುಭಾವಕಃ ।
ಕ್ಷಮೋ ಮುಕ್ತಿಪಥೋ ಭಾಹ್ಯುತ್ತಮೋ ಭಕ್ತಿಕಾರಣಃ ॥೨॥

ಅಹಂಕಾರ ರಹಿತನು ಸದಾಚಾರವುಳ್ಳಾತನು ವಿಕಾರರಹಿತನು ಕ್ಷಮೆಯುಳ್ಳಾತನು ಮೋಕ್ಷಮಾರ್ಗ ಸದ್ಭಾವವುಳ್ಳಾತನು ಇಂತಾತನೀಗ ಉತ್ತಮ ಭಕ್ತನೆನಿಸುವನು.

ಲೈಂಗೇ—

ಅಹಂಕಾರಸ್ಯ ವಿಲಯೇ ಸರ್ವಭಾವಾಂತರಸ್ಥಿತಃ
ಸಮುದೇತಿ ಪರಾನಂದಃ ಸ್ವಯಂಹಿ ಪರಮೇಶ್ವರಃ ॥೩॥

ಅಹಂಕಾರವು ಕೆಡಲಾಗಿ ಎಲ್ಲಾ ಭಾವಗಳ ಮಧ್ಯದಲ್ಲಿ ಪರಮಾನಂದವು ಪಯಿಸುವುದು ಅಂತಹನು ತಾನೇ ಪರಶಿವನು.

ಅಹಂ ಮಮತ್ವಂ ಚ ಭವಸ್ಯ ಬೀಜಂ ನಾಹಂ ಮಮೇತಿ ಭವಬೀಜನಾಶವ್ ।
ಬೀಜೇ ಪ್ರಣಷ್ಟೇ ಕುತ ಏವ ಜನ್ಮ ನಿರಿಂಧನೋ ವಹ್ನಿರುಪೈತಿ ಶಾಂತಿಮ್ ॥೪॥

ಅಹಂಕಾರ ಮಮಕಾರಂಗಳು ಸಂಸಾರಕ್ಕೆ ಬೀಜಗಳು ಆ ಅಹಂಕಾರ ಮಮಕಾರವಿಲ್ಲದುದೀಗ ಸಂಸಾರ ಬೀಜ ನಾಶವು. ಬೀಜವಿಲ್ಲದಿರ್ದಡೆ ಇನ್ನು ಅಂಕುರವಿಲ್ಲ ಹ್ಯಾಗೆಂದರೆ ಅಗ್ನಿಗೆ ಕಟ್ಟಿಗೆಯಿಲ್ಲದಿದ್ದರೆ ತಾನೇ ನಂದುವುದು.

## ವಚನಗಳು

೧

ಎನ್ನಲ್ಲಿ ಭಕ್ತಿಯು ಸಾಸುವೆಯ ಷಡ್ಭಾಗದಷ್ಟು ಇಲ್ಲವಯ್ಯಾ
ಎನ್ನ ಭಕ್ತನೆಂಬರು ನಾನಾವ ಪಾಪವ ಮಾಡಿದೆನೋ
ಬೆಳೆಯದ ಮುನ್ನವೆ ಕೊಯ್ವರೇ ಹೇಳಯ್ಯಾ
ಇರಿಯದ ವೀರ ಇಲ್ಲದ ಸೊಬಗು
ಎಲ್ಲ ಒಡೆಯರು ಎಂಸಿ ನುಡಿವರು ನೋಡಯ್ಯಾ
ಕೂಡಲಸಂಗಮದೇವಾ

೨

ಎನ್ನ ಭಕ್ತನೆಂಬರು ಎನ್ನ ಘೋರ ಹಂಚೆ ಒಳಬೊಳ್ಳೆತನವನರಿಯರು
ಎನ್ನ ಮಾಯಾಪಸಮಾಸವು ಶರಣರಲ್ಲಿ ಜಾತಿವಿಚಾರವು ಶರಣರಲ್ಲಿ
ತನುಮನಧನವು ಶರಣರಲ್ಲಿ ವಂಚನೆಯುಳ್ಳ ಡಂಭಕ ನಾನಯ್ಯಾ
ಶಿವಶಿವಾ ತಲೆಯೊಡೆಯಂಗೆ ಕಣ್ಣು ಬೈಚಿಡುವರೇ
ಕೂಡಲಸಂಗಮನೆಂತೊಲಿವನಯ್ಯಾ

೩

ನಾನು ಭಕ್ತ ನಾನು ಶರಣ ನಾನು ಲಿಂಗೈಕ್ಯನೆಂದಡೆ
ಪಂಚೇಂದ್ರಿಯಂಗಳು ನಗವೇ ಅರಿಷಡ್ವರ್ಗಂಗಳು ನಗವೇ
ಎನ್ನ ತನುವಿನೊಳಗಣ ಸತ್ವರಜಸ್ತಮೋಗುಣಂಗಳು ನಗವೆ
ಹೇಳಯ್ಯಾ ಉಳಿಯುಮೇಶ್ವರಾ

೪

ಎನಗೆ ಭಕ್ತಿಯುಂಟೆಂಬ ಮಾತದೆಲ್ಲಿ ಡಂಭನೋಡಯ್ಯಾ
ಎನಗಾಮಾತಿಂಗಧಿಕಾರವೆಲ್ಲಿಯದೋ

ತಲೆಹುಳಿತ ನಾಯಿಗೆ ಲಾಂಛನಬಂದುದೇ ಭಾಗ್ಯವು
ಒಂದರೊಳಗೊಂದ ನರಿಯೆನಯ್ಯಾ
ಬಸವಪ್ರಿಯ ಕೂಡಲಚೆನ್ನಸಂಗಮದೇವಾ

೫

ಕುಳಿತಾಗ ಭಕ್ತ ಮುನಿದಾಗ ಮಾನವ
ಪಾತಕ ಹೊಲೆಯನೇತಕ್ಕೆ ಬಾತೆ
ಗೋಸುಂಬೆಯಂತೆ ಎನ್ನ ಮನವು ಗಳಿಗೆಗೊಂದು ಪರಿ
ಈಶ್ವರಾ ನಿಮ್ಮ ಜಂಗಮವನುದಾಸೀನವ ಮಾಡಿ
ದಾಸೋಹವಿಲ್ಲದ ಅತಿದೂಷಕ ದ್ರೋಹಿ ನಾನಯ್ಯಾ
ಬೇಸತ್ತೆನೀಮನಕ್ಕೆ ಸುಬುದ್ಧಿಯ ಹೇಳಿ ಈಶ್ವರಾ
ಸಂತೈಸಯ್ಯಾ ಉರಿಲಿಂಗದೇವಾ

೭

ಆನೆಯು ಆ ದಾರಿಯಲ್ಲಿ ಹೋಯಿತ್ತೆನಬಹುದೇ
ಆಡು ಆ ದಾರಿಯಲ್ಲಿ ಹೋಯಿತ್ತೆನಬಹುದೇ
ಸಂಗಾ ನಿಮ್ಮ ಶರಣರಿಗೆ ಸರಿಯೇ ನಾನು
ಸರಿಯೆಂದು ಗಳಹಬಹುದೇ
ಜಂಗಮಕ್ಕೆ ಮಾಡುವ ಭಕ್ತಂಗೆ ನಾನು ಸರಿಯೇ
ಕೂಡಲಸಂಗಮದೇವಾ

೭

ಅಯ್ಯಾ ಎನ್ನವರೆನ್ನ ಕೊಂಡಾಡಿ ಬಿನ್ನಾಣವೆಂಬ
ಹೊನ್ನ ಶೂಲದ ಮೇಲಿಕ್ಕಿದರಯ್ಯಾ
ಗಾಯ ಪರಿಪೂರ್ಣವಾಗಿ ತಾಗಿತು
ಜಂಗಮ ರೂಪಾಗಿ ಬಂದೆನ್ನ ಹೊಯ್ದು ಬೈಯ್ದು
ಜರಿದು ಝುಂಕಿಸಿ ಪ್ರಸಾದವೆಂಬ ಮದ್ದನಿಕ್ಕಿ
ಸಲಹಯ್ಯಾ ಕೂಡಲಸಂಗಮದೇವಯ್ಯಾ

## ಸದ್ಭಕ್ತ ಶುಶ್ರೂಷಾ ಸ್ಥಲ ೧೦

ಇಂತೀ ಪ್ರಕಾರದಿಂ ಸಹಜ ಸದ್ಭಕ್ತಿಗುಣಂಗಳು ತಮ್ಮೊಳಗೆ ಪರಿಪೂರ್ಣ ಮಾಗಿದ್ದಡೆಯೂ ಶಿವನ ಸದ್ಭಕ್ತರಾದವರು ತಮ್ಮ ಗುಣಂಗಳಿಗೆ ಮ್ರಿಯ್ಯಾನದೆ ಹಮ್ಮಳಿದಿರಬೇಕೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಹಮ್ಮಿನ ಕಠಿಣಮಂ ತೊಡೆದು ನಿರ್ಮಲಮಂ ಮಾಡುವುದಕ್ಕೆ ಗುರುಲಿಂಗಜಂಗಮಕ್ಕೆ ಅರ್ಥ ಪ್ರಾಣಾಭಿಮಾನವಂ ಕೊಟ್ಟು ಹಂ ಮುನುತೆಯ ನಳಿದಿಹ ಮಹಾಲಿಂಗಾಂಗಿಗಳ ಸೇವೆಯೇ ಕಾರಣವೆಂಬುದ ನರುಪಲೋಸ್ವರ ನುಡಿದ ವಚನಂಗಳು.

ಶಿವಧರ್ಮೇ—

ಯಮಲೋಕಭಯಂ ನಾಸ್ತಿ ಸಂಸಾರಸ್ಯ ಭಯಂ ನ ಚ
ರುದ್ರ ಭಕ್ತಸ್ಯ ಶುಶ್ರೂಷಾ ದೇವಿ ಕಿಂ ಕಥಯಾಮಿ ತೇ ||೧||

ಸದ್ಭಕ್ತಂಗೆ ಆವನಾನೊಬ್ಬ ಶಿವಭಕ್ತನು ಶುಶ್ರೂಷೆಯಂ ಮಾಡುತ್ತಿಹನೋ ಆತಂಗೆ ಯಮಲೋಕ ಭಯವಿಲ್ಲ ಸಂಸಾರಭಯವೂ ಇಲ್ಲ ದೇವಿಯೇ ಏನೆಂದು ಹೇಳುವೆನೆಂದು ದೇವರು ಪೇಳ್ದರು.

ಶಂಕರಸ್ಯ ಚ ಯೇ ಭಕ್ತಾಃ ಶಾಂತಾಸ್ತದ್ಗತ ಮಾನಸಾಃ |
ತೇಷಾಂ ದಾಸಸ್ಯ ದಾಸೋಽಹಂ ಭವೇಜ್ಜನ್ಮನಿ ಜನ್ಮನಿ ||೨||

ಆರು ಕೆಲಂಬರು ಶಿವನ ಸದ್ಭಕ್ತರುಂಟೋ ಅವರು ಶಾಂತಿಗುಣದಿಂದ ಯುಕ್ತರಾದವರು ಶಿವನಲ್ಲಿಯೇ ನಿಷ್ಠೆಯುಳ್ಳ ಮನಸುಳ್ಳವರು ನಾನು ಅವರ ದಾಸರ ದಾಸನು ಜನ್ಮಜನ್ಮಂಗಳಲ್ಲಿಯೂ ಆಗುವೆನು.

ತ್ವತ್ಪಾದ ಭೃತ್ಯ ಭೃತ್ಯಾನಾಂ ಭೃತ್ಯ ಭೃತ್ಯತ್ವ ಮುತ್ತಮಮ್ |
ಮದಿಷ್ಟಾಂ ದೇಹಿ ದೇವೇಶ ದೇವಾನಾಮಪಿ ದುರ್ಲಭಮ್ ||೩||

ಶಿವನ ಸದ್ಭಕ್ತರ ಪಾದವನೊತ್ತುವ ಭೃತ್ಯರಿಗೆ ಭೃತ್ಯರಾದವರ ಭೃತ್ಯರ ಭೃತ್ಯತ್ವವು ಉತ್ತಮವು ದೇವತೆಗಳಿಗೆಯೂ ಇದು ದುರ್ಲಭವು ಎಲೈ ಪರಶಿವನೇ ನನ್ನ ಇಷ್ಟವಾದ ಈ ಭೃತ್ಯತ್ವವನ್ನು ನೀನು ಕೊಡು.

ಸೌರಸಂಹಿತಾಯಾಂ—

ಕರ್ಮಾವಲಂಬಿನಃ ಕೇಚಿತ್ ಕೇಚಿ ಜ್ಞಾನಾವಲಂಬಿನಃ ।
ಅಹಂ ತು ಶಿವಭಕ್ತಸ್ಯ ಪಾದುಕಸ್ಯಾವಲಂಬನಃ ॥೪॥

ಕೆಲವರು ಕರ್ಮವನವಲಂಬಿಸಿಕೊಂಡಿಹರು ಕೆಲವರು ಜ್ಞಾನವನವಲಂಬಿಸಿಕೊಂಡಿಹರು ನಾನಾದರೂ ಶಿವಭಕ್ತರ ಪಾದರಕ್ಷೆಯನು ಆಶ್ರಯಿಸಿಕೊಂಡಿರುವೆನು.

ವೀರಾಗಮೇ—

ಪರಮಾದ್ವೈತ ವಿಜ್ಞಾನ ನಿಷ್ಠಸ್ಯೇವ ಮಹಾತ್ಮನಃ ।
ಶುಶ್ರೂಷಾ ಕ್ರಿಯತೇ ಯೇನ ತತ್ಪಾದೌ ಮಮ ಮಸ್ತಕೇ ॥೫॥

ಉತ್ಕೃಷ್ಟವಾದ ಶಿವಾದ್ವೈತಜ್ಞಾನನಿಷ್ಠನೆನಿಸಿದ ಮಹಾಪುರುಷನಾದ ಶಿವಭಕ್ತನ ಸೇವೆಯನಾವಾತನು ಮಾಡುವನೋ ಆತನ ಪಾದಗಳು ಎನ್ನ ಮಸ್ತಕದ ಮೇಲಿರಲಿ.

ಯಾನಿ ಕಾನಿ ಚ ವರ್ಣಾನಿ ಜ್ಞಾನದೇಹೇ ಪ್ರತಿಷ್ಠಿತಾಃ ।
ತಸ್ಯ ದಾಸಸ್ಯ ದಾಸೋಽಹಂ ಭವೇ ಜನ್ಮನಿ ಜನ್ಮನಿ ॥೬॥

ಯಾವ ಜಾತಿಯಲ್ಲಾದರೂ ಆಗಲಿ ಶಿವಭಕ್ತಿಯುಳ್ಳ ಜ್ಞಾನಿಯಾದಡೆ ಆತನ ದಾಸನದಾಸನು ನಾನು ಜನ್ಮಜನ್ಮಂಗಳಲ್ಲಿಯೂ ಆಗುವೆನು.

ಬ್ರಹ್ಮಾಂಡಪುರಾಣೇ—

ಬ್ರಾಹ್ಮಣಃ ಪ್ರಥಮೋ ಭವೇಮ್ನ ವಯಂ ದೂರೇಣ ದಾಮೋದರಃ
ಕಾವಾರ್ತಾ ಸುರರಾಜಸಂಪದಿ ಕುತೋ ದೇವಾಂತರೇ ಸಂಸ್ಪೃಹಾ ।
ವತ್ಸ್ಯಾಮಃ ಸಹಭೂತಭಾವನ ಭವತ್ಸೇವಾಭಟಗ್ರಾಹಿಣಾಂ
ಹಾ ಹಾ ವಸ್ಕರಕೂಟಕೀಟ ವಿಘಸಗ್ರಾಸಾಭಿರ್ಮಂಡನೈಃ ॥೭॥

ನನಗೆ ನವಬ್ರಹ್ಮರ ಪದವೂ ಬೇಡ ವಿಷ್ಣುಪದವೂ ಬೇಡ ದೂರದಲ್ಲಿದ್ದ ದೇವೇಂದ್ರನ ಐಶ್ವರ್ಯದ ವಾರ್ತೆಯೆತ್ತಣದು ಉಳಿದ ದೇವತೆಗಳಲ್ಲಿಯ ಇಚ್ಛೆಯೆಲ್ಲಿಯದು ಎಲ್ಲಾ ಪ್ರಾಣಿಗಳಿಗೆ ಒಡೆಯನಾದ ಶಿವನ ಸದ್ಭಕ್ತರ ಮನೆಯ ತಿಪ್ಪೆಯ ಮೇಲಣ ಹುಳುವಹುದನು ಬಯಸುತ್ತಿಹೆನು.

## ವಚನಗಳು

೧

ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ
ಗುರುಲಿಂಗ ಜಂಗಮಕ್ಕೆ ತನುಮನಧನಂಗಳ ಕೊಟ್ಟು
ಅಹಂಕಾರವಳಿದಿಹ ಪುರಾತನರ ಮನೆಯಲ್ಲಿ ತೊತ್ತಾಗಿಪ್ಪುದು
ಕರಸ್ಥಲಸಂಗನಾ.

ತಾರೋ ಅಗ್ಘವಣಿಯನಿಡೋ ಪತ್ರಿಪುಷ್ಪವ
ಲಿಂಗಕ್ಕೆ ಬೋನವ ಹಿಡಿಯೋ ಎಂಬರು
ಕೂಡಲಸಂಗನ ಮಹಾಮನೆಯಲ್ಲಿ
ಒಕ್ಕುದನುಣ್ಣು ತೊತ್ತೇ ಎಂಬರು

೨

ಶ್ರೀಗುರುಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನವಕೊಟ್ಟು
ಅಹಂಕಾರವಳಿದಂತಹ ಪುರಾತನರ ಮನೆಯಲ್ಲಿ
ಎತ್ತಾಗಿ ಹುಟ್ಟಿಸಯ್ಯಾ ತೊತ್ತಾಗಿ ಹುಟ್ಟಿಸಯ್ಯಾ
ಬಾಗಿಲ ಕಾಯ್ದಿಪ್ಪಂತೆ ಸೊಣಗನಾಗಿ ಹುಟ್ಟಿಸಯ್ಯಾ
ಜಂಗಮಲಿಂಗವೇ ಶಿವನೆಂದು ನಂಬಿ ನಮಸ್ಕರಿಸುವ
ಪುರಾತನರ ಮನೆಯ ಹಿತ್ತಲಬೇಲಿಯಾಗಿ ಹುಟ್ಟಿಸಯ್ಯಾ ರಾಮನಾಥಾ

೩

ಆವಾವ ಪರಿಯಲ್ಲಿ ಆವಾವ ಭಾವದಲ್ಲಿ
ಗುರುಲಿಂಗ ಜಂಗಮಕ್ಕೆ ದಾಸೋಹ ಮಾಡುವೆ ಕೊಡುವೆ
ಎಂಬ ಸದ್ಭಕ್ತರ ಬಾಗಿಲ ತೋರಿ ಬದುಕಿಸಯ್ಯಾ
ತನುವನೊಪ್ಪಿಸಿದವರ ಮನವನೊಪ್ಪಿಸಿದವರ
ಧನವನೊಪ್ಪಿಸಿದವರ ಬಾಗಿಲತೋರಿ ಬದುಕಿಸಯ್ಯಾ
ಇವೆಲ್ಲವನೊಪ್ಪಿಸಿ ಜಂಗಮ ಲಿಂಗವೆನ್ನ ಪ್ರಾಣೇಶ್ವರನೆಂಬ
ಪುರಾತನರ ಪಾದರಕ್ಷೆಯ ಹತ್ತಿರಿರಿಸೆನ್ನನು
ಕೂಡಲ ಚೆನ್ನಸಂಗಮದೇವಾ

೬

ಸದ್ಭಕ್ತರಿಗೆ ಸಮಯೋಚಿತವ ಮಾಡುವವನ
ಸದ್ಭಕ್ತರಿಗೆ ನೀಡಿ ತನ್ನ ಹಸಿವ ಮರೆದಿಪ್ಪವನ
ಸದ್ಭಕ್ತರಿಗೆ ಉಳ್ಳುದೆಲ್ಲವ ಕೊಟ್ಟು, ಐನರೇ ಎಂದು ಮರಗುವ
ಏಕಗ್ರಾಹಿ ಶರಣನ ತೋರ್ಪನೆ ತೊಳಲಿ ಅರಸಿ ಕಾಣೆನು
ಮೂರುತರದ ಮುಕ್ತಿಯೆಂತಪ್ಪ ವರವ ಕೊಟ್ಟಡೆಯೊಲ್ಲೆನು
ಜಂಗಮಲಿಂಗಕ್ಕೆ ಅರ್ಥಪ್ರಾಣಾಭಿಮಾನವ ಕೊಟ್ಟು
ಅಹಂಕಾರವಿಲ್ಲದಿಹ ಪುರಾತನರ ಮನೆಯ
ಬಚ್ಚಲ ಬಾಲಹುಳುವಾಗಿ ಹುಟ್ಟಿಸಯ್ಯಾ
ಸಕಳೇಶ್ವರಾ ನಿಮ್ಮ ಧರ್ಮ ನಿಮ್ಮ ಧರ್ಮ

೫

ಆವಜಾತಿಯಲ್ಲಾದರೂ ಆಗಲಿ ಪುರಾತನರ ಚಾರಿತ್ರದಲ್ಲಿ ನಡೆದು
ಗುರುಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನವಂ ಕೊಟ್ಟು
ಅಹಂಕಾರವಳಿದಂಥಾ ಪುರಾತನರ ಬಾಯ ತಂಬುಲವ ಮೆಲುವೆ
ಬೀಳುಡಿಗೆಯ ಹೊದೆವೆ ಆತನ ಪಾದರಕ್ಷೆಗಳೆರಡನೂ
ಮುಂಡೆಂಗು ಮೇಳೆ ಹೊತ್ತುಕೊಂಡು ಬದುಕವೆನಯ್ಯಾ
ಆ ಗಣಂಗಳ ದಾಸನ ದಾಸನಾನು ಜನ್ಮ ಜನ್ಮದಲ್ಲಿ ಆಗುವೆ
ಕಾಣಾ ಗುಹೇಶ್ವರಾ

೬

ಗುರುಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನವಂ ಕೊಟ್ಟು
ಅಹಂಕಾರವಳಿದಿಹಂಥಾ ಪ್ರಮಥಗಣಂಗಳು
ಇಂದೆನ್ನ ಮನೆಗೆ ಬಂದಿಹರೆಂದು ಗುಡಿತೋರಣವ ಕಟ್ಟಿ
ಷಡು ಸಮ್ಮಾರ್ಜನೆಯ ಮಾಡಿ ರಂಗವಲ್ಲಿಯನಿಕ್ಕಿ
ಉಘೇ ಚಾಂಗು ಭಲಾ ಎಂಬೆನು ಮಹಾಲಿಂಗ ಕಲ್ಲೇಶ್ವರಾ
ನಿಮ್ಮ ಪುರಾತನರು ತಮ್ಮ ಒಕ್ಕುದನಿಕ್ಕಿ ಸಲಹುವರಾಗಿ

೭

ಭಕ್ತನು ರುದ್ರಗಣಂಗಳ ಮಠಕ್ಕೆ ಬಂದರೆ ಭೃತ್ಯನಾಗಿರಬೇಕು
ಕರ್ತನಾಗಿ ಕಾಲ ತೊಳೆಯಿಸಿಕೊಂಡರೆ
ಹಿಂದೆ ಮಾಡಿದ ಭಕ್ತಿ ಹಾನಿಯಪ್ಪುದು
ಲಕ್ಷಗಾವುದ ಹೋಗಿಯಾದರೂ

ಭಕ್ತನು ಗಣಂಗಳ ಕಾಂಬುದು ಸದಾಚಾರ
ಅಲ್ಲಿ ಕೂಡಿ ದಾಸೋಹವಂ ಮಾಡಿ
ಗುರುಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿ ಮಾನವಂ ಕೊಟ್ಟು
ಅಹಂಕಾರವಳಿದಂತಹ ಪುರಾತನರು ಮೆಟ್ಟುವ
ಪಾದರಕ್ಷೆಗಳೆನ್ನ ಮಸ್ತಕದ ಮೇಲಿರಿಸಿ ಕೊಂಡು
ನಾನು ಕೃತಾರ್ಥನಾದೆನಯ್ಯಾ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

೮

ಬ್ರಹ್ಮ ಪದವಿಯನೊಲ್ಲೆ ವಿಷ್ಣು ಪದವಿಯನೊಲ್ಲೆ
ರುದ್ರ ಪದವಿಯನೊಲ್ಲೆ ಇಂದ್ರಪದವಿಯನೊಲ್ಲೆ
ಉಳಿದ ದೇವತೆಗಳ ಪದವಿಯನೊಲ್ಲೆ
ಎಲ್ಲಕ್ಕೂ ಒಡೆಯನಾದ ಶಿವನ ಪ್ರಮಥಗಣಂಗಳ
ತಿಪ್ಪೆಯ ಮೇಲಣ ಹುಳುವಾಗಿ ಹುಟ್ಟುವ ಪದವಿಯ
ಕರುಣಿಸು ಮಹಾ ಮಹಿಮ ಸೊಡ್ಡಳಾ

೯

ಆಯತ ಸ್ವಾಯತ ಅನುಭಾವವ ನಾನೆತ್ತ ಬಲ್ಲೆನಯ್ಯಾ
ಗುರುಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನವಂ ಸಮರ್ಪಿಸಿ
ಅಹಂಕಾರವಳಿದಿಹಂಥಾ ಪುರಾತನರ ಮನೆಯ
ಭೃತ್ಯರ ಭೃತ್ಯನಾಗಿಪ್ಪೆನಯ್ಯಾ
ಇದು ಕಾರಣ ಚೆನ್ನಮಲ್ಲಿಕಾರ್ಜುನಯ್ಯನ
ಗಣಂಗಳಲ್ಲದನ್ಯವ ನಾನರಿಯೆನಯ್ಯಾ

## ಸದ್ಭಕ್ತ ನಮಸ್ಕಾರ ಸ್ಥಲ ೧೧

ಈ ಪ್ರಕಾರದಿಂ ಶಿವನಿಂದ ಪಡೆದಂತಹ ಸದ್ಭಕ್ತಿ ಶಿವಮಾಹೇಶ್ವರರ ಸೇವೆಯ ಮಾಡುವವರಿಂಗೆ ದೊರಕೊಂಬುದೆಂದು ಶುಶ್ರೂಷಾಸ್ಥಲಮಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಸದ್ಭಕ್ತಿ ಲಕ್ಷಣವಾಗಿರ್ದವರುಗಳಿಗೆ ಅನವರತವು ತಲೆವಾಗಿ ನಮಸ್ಕಾರವಂ ಮಾಡುತ್ತಿರ್ದಲ್ಲದೆ ಅಹಮಾದಿ ನಾನಾ ಜಡಭಾವಂಗಳಳಿಯವೆಂಬುದನರುಪಲೋಸ್ಕರ ನುಡಿದ ವಚನಂಗಳು.

ಭಾಗವತೇ—

> ಭಕ್ತಾನ್ಸ್ವಲಾಭಸಂತುಷ್ಟಾನ್ ಸಾದೂನ್ಭೂತ ಸುಹೃತ್ತಮಾನ್ ।
> ನಿರಹಂಕಾರಿಣಃ ಶಾಂತಾನ್ನಮಾಮಿ ಶಿರಸಾಽಸಕೃತ್ ॥ ೧ ॥

ಪ್ರಾಪ್ತವಾದ ಲಾಭದಿಂದಲೇ ಸಂತುಷ್ಟನಾಗಿ ಸಮಸ್ತರುಗಳಿಗೆಯೂ ಮಿಗೆ ಬಂಧುಗಳಾಗಿ ಅಹಂಕಾರವಿಲ್ಲದವರಾಗಿ ಶಾಂತರಾಗಿ ಸಜ್ಜನರಾಗಿಹ ಸದ್ಭಕ್ತರುಗಳಂ ಕುರಿತು ನಾನು ಅಡಿಗಡಿಗೆ ಶಿರಸ್ಸಿನಿಂದ ನಮಸ್ಕಾರವಂ ಮಾಡುವೆನು.

ಶಿವರಹಸ್ಯೇ—

> ಭಕ್ತಪ್ರಾಣೋಽಹ್ಯಹಂ ದೇವಿ ಭಕ್ತಃಪ್ರಾಣೋ ಮಮೈವತು ।
> ಮತ್ತೋಽಧಿಕೋಽಪಿ ಭಕ್ತಶ್ಚ ತಸ್ಮಾದ್ಭಕ್ತಂ ನಮಾಮ್ಯಹಂ ॥ ೨ ॥

ಎಲೈ ಪಾರ್ವತಿ ಸದ್ಭಕ್ತರಿಗೆ ಪ್ರಾಣವು ನಾನು. ನನಗೆ ಪ್ರಾಣವು ಸದ್ಭಕ್ತನು. ಆ ಸದ್ಭಕ್ತನು ನನಗಿಂತಲು ಅಧಿಕವು ಆವಕಾರಣ ಸದ್ಭಕ್ತನನು ನಾನು ಸದಾ ನಮಸ್ಕರಿಸುತ್ತಿಹೆನು.

> ಯೇ ರುದ್ರಲೋಕಾದವತೀರ್ಯ ರುದ್ರಾ ಮನುಷ್ಯಮಾಶ್ರಿತ್ಯ ಜಗದ್ಧಿತಾಯ।
> ಚರಂತಿ ನಾನಾವಿಧಚಾರುಚೆಷ್ಟಾಸ್ತೆಭ್ಯೋನಮಸ್ತ್ರ್ಯಂಬಕಪೂಜ್ಯಕೇಭ್ಯಃ॥೩॥

ರುದ್ರಲೋಕದಿಂದವತರಿಸಿ ಬಂದ ರುದ್ರ ಗಣಂಗಳು ಮನುಷ್ಯಶರೀರವಂ ಮರೆಗೊಂಡು ಲೋಕವನ್ನುದ್ಧರಿಸಲೆಂದನಂತ ಮುಖದಿಂದ ಅನೇಕ

ವಿಧದಿಂ ಆರು ಚರಿಸುತ್ತಿಹರೋ ಶಿವನನರ್ಚಿಸುತ್ತಿಹ ಅಂತಹರಿಗೆ ನಮ ಸ್ಕಾರಗಳು.

ಶಿವಧರ್ಮೇ—

> ಶಿವಭಕ್ತಂ ಯಥಾಯಾಂತಂ ದೃಷ್ಟ್ವಾಪಿ ಸುಮುಖಪ್ರಿಯಃ ।
> ಪ್ರಣಮಾದಿ ಕರೋತ್ಯೇವಂ ಮಹಾದೇವಂ ಯಥಾತಥಾ ॥
> ಸರ್ವೈಭವ ಇತಿ ಜ್ಞೇಯಃ ಪುನಾತಿ ಚ ಜಗತ್ತ್ರಯಂ ॥ ೩ ॥

ಆವನಾನೊಬ್ಬನು ಪ್ರೀತಿಯಿಂದ ಬರುತ್ತಿದ್ದ ಗಣಂಗಳಂ ಕಂಡು ಸಂತೋಷಯುಕ್ತವಾದ ಮುಖವುಳ್ಳವನಾಗಿ ಶಿವನಿಗೆ ನಮಸ್ಕರಿಸುವ ಹಾಗೆ ಸದ್ಭಕ್ತಂಗೆ ನಮಸ್ಕರಿಸುತ್ತಿಹನೋ ಆತನು ಭಕ್ತನೆಂದರಿಯಲ್ತ ಕ್ಕಾತನಾಗಿ ಮೂರು ಲೋಕವನೆಲ್ಲವಂ ಪಾವನವಂ ಮಾಡುತ್ತಿಹನು.

## ವಚನಗಳು

### ೧

ಎಲ್ಲರಿಗಿಂದಧಿಕರು ಪುರಾತನರೆಂದು ಶರಣು ಶರಣೆನ್ನುತ್ತಿದೆ ವೇದ
ಶರಣು ಶರಣೆಂದು ಸಾರುತ್ತಿದೆ ವೇದ ನೋಡಾ

> ಅಘೋರ ಯೇ ಅಸ್ಯ ಸತ್ವಾನೋ ಹಂತೇಭ್ಯೋಕರಂ ನಮಃ
> ಪ್ರಮುಂಚ ಧನ್ವನಸ್ತ್ವಮುಭಯೋರಾತ್ನಿಯೋರ್ಜ್ಯಾಂ
> ಯಾಶ್ವತೇ ಹಸ್ತ ಇಷವಃ ಪರಾತಾ ॥

ಎಂಬ ಶ್ರುತಿ ಬಸವ ಪ್ರಿಯ ಕೂಡಲಚೆನ್ನಸಂಗಮದೇವಾ
ಸದ್ಭಕ್ತರಿಗೆ ಶರಣೆನ್ನುತ್ತಿದ್ದೇನೆ.

### ೨

ಲಿಂಗದಿಂದುದಯಿಸಿ ಅಂಗವಿಡಿದಿಪ್ಪ
ಪುರಾತನರ ಇಂಗಿತವನೇನೆಂದು ಬೆಸಗೊಂಬಿರಯ್ಯಾ
ಅವರ ನಡೆಯೇ ಆಗಮ ಅವರ ನುಡಿಯೇ ವೇದ
ಅವರ ಲೋಕದ ಮಾನವರೆಂದೆನ್ನಬಹುದೇ ಅದೆಂತೆಂದಡೆ

> ವೃಕ್ಷಾದ್ಭವಂತಿ ಬೀಜಾನಿ ತದ್ವೃಕ್ಷೋ ಲೀಯತೇ ಪುನಃ ।
> ರುದ್ರಲೋಕಂ ಪರಿತ್ಯಕ್ತ್ವಾ ಶಿವಲೋಕೇ ಭವಿಷ್ಯತಿ ॥

ಎಂದುದಾಗಿ ಅಂಕೋಲೆಯ ಬೀಜದಿಂದಾಯಿತ್ತು ವೃಕ್ಷವು
ಆ ವೃಕ್ಷವು ಮರಳಿ ಬೀಜದೊಳಗಡಗಿತ್ತು
ಆ ಪ್ರಕಾರದಿಂ ಲಿಂಗದೊಳಗಿದ್ದ ಪುರಾತನರು ಉದ್ಭವಿಸಿದರು
ಮರಳಿ ಆ ಪುರಾತನರು ಆ ಲಿಂಗದೊಳಗೆ ಬೆರೆಸಿದರು ನೋಡಿರಯ್ಯಾ
ಇಂತಪ್ಪ ಪುರಾತನರಿಗೆ ನಾನು ಶರಣೆಂದು
ಹುಟ್ಟುಗೆಟ್ಟೆನಯ್ಯಾ ಚೆನ್ನ ಮಲ್ಲಿಕಾರ್ಜುನಾ

೩

ಕಟ್ಟಿದಿರಿನಲ್ಲಿ ಸದ್ಭಕ್ತರ ದೃಷ್ಟಿಯಾರೆ ಶರಣೆಂದರೆ
ಹುಟ್ಟೇಳು ಜನ್ಮದ ಪಾಪ ಬಿಟ್ಟು ಹಿಂಗುವುದು ನೋಡಾ
ಮುಟ್ಟಿ ಚರಣಕ್ಕೆರಗಿದೊಡೆ ತನುವಪ್ಪಿದಂತೆ ಪರುಷವಾಯಿತ್ತು
ಕರ್ತೃ ಕೂಡಲ ಚೆನ್ನ ಸಂಗಮದೇವಾ
ನಿಮ್ಮ ನೊಲಿಸಿದ ಪುರಾತನರ ಸಂಗದಿಂದ
ಮತ್ತೆ ಭವ ಮಾಲೆಗೆ ಹೊದ್ದಲೀಯದು ನೋಡಾ

೪

ಎನಗೆ ನಾನೇ ಹಗೆ ನೋಡಯ್ಯಾ
ಎನಗೆ ನಾನೇ ಕೆಳೆ ನೋಡಯ್ಯಾ
ನಿಮ್ಮ ಸದ್ಭಕ್ತರೊಡನೆ ವಿರೋಧವ ಮಾಡಿದಡೆ ಎನ್ನ ಕೊಲುವುದಾಗಿ
ನಿಮ್ಮ ಪುರಾತನರಿಗಂಜಿ ಬೆಸಗೊಂಡಡೆ ಎನ್ನ ಕಾಯ್ವುದಾಗಿ
ಅನ್ಯರು ಹಗೆಯಲ್ಲಿ ಕೆಳೆಯಲ್ಲಿ
ಬಾಗಿದ ತಲೆಯ ಮುಗಿದ ಕೈಯ್ಯಾಗಿರಿಸು ಕೂಡಲಸಂಗಮದೇವಾ

೫

ಗಣಂಗಳ ಬರವ ಕಂಡು ಕೈಮುಗಿದು ಅಂಜಲೇಬೇಕು
ಶರಣೆನ್ನಲೊಲ್ಲದೀ ಮನವು
ಆಗಿನ ಭಕ್ತಿಯನರಿಯದಾಗಿ ಶರಣೆನ್ನಲೊಲ್ಲದೀ ಮನವು
ಆಳ್ದನೆಂದು ನಂಬಿ ನಂಬಲೊಲ್ಲದಾಗಿ
ಮಹಾಲಿಂಗ ಚೆನ್ನರಾಮನೆನ್ನ ಕಡೆನೋಡಿ ನಗುತ್ತಲೈದಾನೆ

೬

ಮೃಡನೇ ನಿಮ್ಮ ಪುರಾತನರ ಕಾಣುತ್ತ

ತಡೆಯಡೆ ಇದಿರೆದ್ದು ಪೊಡಮಡೆನಾಗಿ ಬಿಡದು ನಾಚಿಕೆ
ಸುಡಲಕೆನ್ನ ನುಡಿಹ ಸಡಿಲದೆನ್ನ ಅಹಂಕಾರವು ನೋಡಯ್ಯಾ
ಬಡ ಮನದವನ ಜಡಿದು ನಡೆಸಯ್ಯಾ ಗುಹೇಶ್ವರಾ

೭

ಶರಣ ಸಂಗ ಸಾಲೋಕ್ಯ ಪದವಯ್ಯಾ
ಗಣಂಗಳ ಮುಖಾವಲೋಕನ ಪ್ರಿಯ ಸಂಭಾಷಣೆ
ಸಾಮೀಪ್ಯ ಪದವಯ್ಯಾ
ಶ್ರೀ ವಿಭೂತಿ ರುದ್ರಾಕ್ಷೆ ಪ್ರಮಥರ ಶ್ರೀ ಮೂರ್ತಿಯನು ಕಂಡು
ಮನಸದಲ್ಲಿ ಧರಿಸಿದಡೆ ಸಾರೂಪ್ಯ ಪದವಯ್ಯಾ
ಪುರಾತನರ ಶ್ರೀ ಪದಂಗಳಲ್ಲಿ ಎನ್ನ ಶಿರಸ್ಪರ್ಶನದಿಂದ
ಸಾಷ್ಟಾಂಗವೆರಗಲು ಸಾಯುಜ್ಯ ಪದವಯ್ಯಾ
ಇಂತು ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯವೆಂಬ
ಚತುರ್ವಿಧ ಪದವೆನಗಾಯಿತ್ತಯ್ಯಾ ನಿಮ್ಮ ಗಣಂಗಳ ಕೃಪೆಯಿಂದ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

## ಸದ್ಭಕ್ತ ಮಾಹಾತ್ಮ್ಯ ಸ್ಥಲ ೧೨.

ಇಂತೀ ಪ್ರಕಾರದಿಂ ಶಿವ ಮಾಹೇಶ್ವರರಿಂಗೆ ಭಾವ ಶುದ್ಧಿಯಿಂ ನಮಸ್ಕಾರವಂ ಮಾಡೆ ಶಿವನಲ್ಲಿ ಗ್ಯೆದಿಸಿ ಆತ್ಮನ ಜನನಕ್ಕೆ ನಿಜಭಕ್ತಿ ಪ್ರಸಾದವಂ ಕರುಣಿಸುವರೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ನಮಸ್ಕಾರಕ್ಕೆ ಯೋಗ್ಯರುಗಳಾಗಿದ್ದ ಪುರಾತನರ ಮಹಿಮೆಗೆ ದೇವದಾನವ ಮಾನವ ಮೊದಲಾದ ದೇಹಿಗಳು ಸರಿಯಲ್ಲವೆಂಬುದ ನರುಪಲೋಸ್ಕರ ನುಡಿದ ವಚನಂಗಳು.

ಶಿವಧರ್ಮೇ—

ಕೀಕಟೇಷ್ವಪಿ ದೇಶೇಷು ಯತ್ರ ಮಾಹೇಶ ಸನ್ನಿಧಿಃ।
ತತ್ರ ಯೋಜನಪರ್ಯಂತಂ ವಾರಣಾಸೀ ವಿಶೇಷತಃ ॥೧॥

ಹೊಲ್ಲಹ ದೇಶಗಳಲ್ಲಾದಡೂ ಎಲ್ಲಿ ಶಿವಮಾಹೇಶ್ವರರಿರುವರೋ ಅವರಿಂದ ಸುತ್ತಗಾವುದ ಪರ್ಯಂತವೂ ವಾರಣಾಸಿಗೆ ವಿಶೇಷವು.

ಶಿವರಹಸ್ಯೇ—

ಚಾಂಡಾಲವಾಟಿಕಾಯಾಂತು ಶಿವಭಕ್ತಃ ಸ್ಥಿತೋಯದಿ।
ತಚ್ಛ್ರೇಣೀ ಶಿವಲೋಕಃ ಸ್ಯಾತ್ತದ್ಗೃಹಂ ಶಿವ ಮಂದಿರವ್ ॥೨॥

ಹೊಲೆಗೇರಿಯಲ್ಲಾದಡೂ ಆಗಲಿ ಪುರಾತನರು ಎತ್ತಲಾನು ಇರುತ್ತಹರೋ ಅವರಿದ್ದಕೇರಿ ಶಿವಲೋಕವು ಆ ಪುರಾತನರ ಮನೆ ಶಿವನರ ಮನೆಯಹುದು.

ಸೂತಸಂಹಿತಾಯಾಂ—

ಯಸ್ಮಿನ್ದೇಶೇ ವಸೇನ್ನಿತ್ಯಂ ಭೂತಿಸ್ನಾನಾದಿಸಂಯುತಃ।
ತೇನ ಸಂಭಾಷಣಂ ಕುರ್ಯಾತ್ ಸರ್ವ ತೀರ್ಥ ಫಲಂ ಭವೇತ್ ॥೩॥

ಎಲ್ಲಿ ವಿಭೂತಿ ರುದ್ರಾಕ್ಷಿ ಶಿವಲಿಂಗಾರ್ಚಕರಿರುವರೋ ಅವರಂ ನೋಡಿ ನುಡಿಸಿದಡೆ ಎಲ್ಲಾ ತೀರ್ಥಂಗಳ ಸ್ನಾನವಂ ಮಾಡಿದ ಫಲವು

ಬ್ರಹ್ಮಾಂಡ ಪುರಾಣೇ—

ಮಹಾ ಪಾತಕ ಸಂಪ್ರಾಪ್ತೌ ಶಿವಭಕ್ತಗೃಹಂವ್ರಜೇತ್।
ಯಾಚಯೇದನ್ನಮಮೃತಂ ತದಲಾಭೇ ಜಲಂ ಪಿಬೇತ್ ॥೪॥

ಅನೇಕ ಮಹಾ ಪಾಪಂಗಳ ಮಾಡಿದಾತನಾದಡೂ ಶಿವಭಕ್ತರ ಮನೆಗೆ ಹೋಗಿ ಬೇಡಿಯಾದರೂ ಪ್ರಸಾದವನ್ನು ಕೊಂಬುದು ಅಥವಾ ದೊರಕದಿರ್ದಡೆ ಬರಿಯ ಅಗ್ಗವಣಿಯನಾದರೂ ಕೊಂಡಡೆ ತಾ ಮಾಡಿದ ಪಾಪವೆಲ್ಲವೂ ಪರಿಹರವಾಗುವವು.

ಭಕ್ತಾನಾಂ ದರ್ಶನಾದೇವ ನೃಣಾಂ ಸ್ವರ್ಗಾದಯೋ ದ್ವಿಜಾಃ ।
ನದುರ್ಲಭಾ ನ ಸಂದೇಹೋ ಭಕ್ತನಾಂ ಕಿಂಪುನಸ್ತಥಾ ॥೫॥

ಎಲೈ ದ್ವಿಜರಿರಾ ಸದ್ಭಕ್ತರ ಕಂಡಮಾತ್ರದಿಂದ ಮನುಷ್ಯರಿಗೆ ಸ್ವರ್ಗಾದಿಕಂಗಳಹವು ದುರ್ಲಭವಲ್ಲ ಸಂದೇಹವಿಲ್ಲ ಇನ್ನು ಆ ಗಣಂಗಳಿಗೆ ಸ್ವಗವುಂಟೆಂಬುದನೇನು ಹೇಳಲಿ.

ವಾಸಿಷ್ಠೇ—

ಜಗತಃ ಪ್ರಲಯೇ ಪ್ರಾಪ್ತೇ ನಷ್ಟೇಽಪಿ ಕಮಲೋದ್ಭವೇ ।
ಮದ್ಭಕ್ತಾ ನೈವ ನಶ್ಯಂತಿ ಸ್ವೇಚ್ಛಾವಿಗ್ರಹಧಾರಣಾತ್ ॥೬॥

ಲೋಕಕ್ಕೆ ಪ್ರಳಯವಾದಲ್ಲಿ ಬ್ರಹ್ಮನು ನಾಶವಾದರೂ ನನ್ನ ಭಕ್ತರಾದ ಗಣಂಗಳು ತಮ್ಮ ಇಚ್ಛೆಯವರಾದ ಕಾರಣ ಅವರು ಎಂದೂ ಕೆಡರು

ಕಾಳಿಕಾಖಂಡೇ—

ನಶ್ಯಂತಿ ಬ್ರಹ್ಮವಿಷ್ಣ್ವಾದ್ಯಾ ಸ್ತದ್ಭಕ್ತಾನಾಂ ಹಿ ಕಾಕಥಾ ।
ಮದ್ಭಕ್ತಾ ನೈವ ನಶ್ಯಂತಿ ಸ್ಥಾನಂ ವಾರಾಣಸೀ ಯಥಾ ॥೭॥

ಬ್ರಹ್ಮ ವಿಷ್ಣು ಮೊದಲಾದವರುಗಳು ಪ್ರಳಯಕ್ಕೊಳಗಹರು ಅವರ ಭಕ್ತರಿಂಗೇನಹುದೋ ಹೇಳಲಾಸಲ್ಲ ನನ್ನ ಭಕ್ತರು ಎಂದೆಂದೂ ಕೆಡರು ಅವರಿದ್ದ ಸ್ಥಾನವು ವಾರಣಾಸಿಯ ಸಮಾನವು.

## ವಚನಗಳು

೧

ಶಿವಗಣಂಗಳ ಮನೆಯಂಗಳ ವಾರಣಾಸಿಯೆಂಬುದು ಹುಸಿಯೇ
ಪುರಾತನರ ಮನೆಯ ಅಂಗಳದಲ್ಲಿ ಅಷ್ಟಾಷಷ್ಟಿ ತೀರ್ಥಂಗಳು
ನೆಲೆಸಿಪ್ಪವಾಗಿ

ಅದೆಂತೆಂದಡೆ —

ಕೇದಾರಸ್ಯೋದಕಂ ಪೀತ್ವಾ ವಾರಾಣಸ್ಯಾಂ ಮೃತಿರ್ಧ್ರುವಮ್ ।
ಶ್ರೀಶೈಲಶಿಖರಂ ದೃಷ್ಟ್ವಾ ಪುನರ್ಜನ್ಮನವಿದ್ಯತೇ ॥

ಎಂಬ ಶಬ್ದಕ್ಕಧಿಕವು
ಸುತ್ತಿ ಬರಲು ಶ್ರೀಶೈಲ ಕೆಲಬಲದಲ್ಲಿ ಕೇದಾರ
ಅಲ್ಲಿಂದ ಹೊರಗೆ ವಾರಣಾಸಿ
ವಿರಕ್ತಿಬೆದೆಯಾಗಿ ಭಕ್ತಿವೊಳೆಯಾಗಿ
ಎನ್ನ ದೇವ ಚೆನ್ನ ಮಲ್ಲಿಕಾರ್ಜುನಾ,
ನಿಮ್ಮ ಭಕ್ತರ ಮನೆಯಂಗಳ
ಪ್ರಯಾಗದಿಂದ ಗುಂಜಿಯಧಿಕ ನೋಡಾ

೨

ಉಪಪಾತಕ ಮಹಾ ಪಾತಕವ ಮಾಡಿದ ಕರ್ಮಂಗಳು
ಕೋಟ್ಯಾನುಕೋಟಿ ಒಬ್ಬ ಶಿವಭಕ್ತನ ಅಂಗಳವ ಕಂಡಲ್ಲಿ
ಅಳಿದು ಹೋಯಿತ್ತು ನೋಡಾ ಅದೇನು ಕಾರಣವೆಂದರೆ

ನಾಹಂ ವಸಾಮಿ ಕೈಲಾಸೇ ನಮೇರೌನಚಮಂದರೇ ।
ಮದ್ಭಕ್ತಾ ಯತ್ರ ತಿಷ್ಠಂತಿ ತತ್ರ ತಿಷ್ಠಾಮಿ ಪಾರ್ವತಿ ।

ಎಂದುದಾಗಿ ಇಂಥಹ ಶಿವನೊಲಿದ ಸದ್ಭಕ್ತನ
ಅಂತರಂಗದಲ್ಲಿ ಶಿವನಿಪ್ಪನಾಗಿ ಶಿವನಿದ್ದಲ್ಲಿ ಕೈಲಾಸವಿಪ್ಪುದು
ಕೈಲಾಸವಿದ್ದಲ್ಲಿ ಅಷ್ಟಾಷಷ್ಠಿ ತೀರ್ಥಂಗಳಿಪ್ಪವು
ಆ ತೀರ್ಥಂಗಳಲ್ಲಿ ಸಮಸ್ತ ರುದ್ರಗಣಂಗಳಿಪ್ಪರು
ಇಂತಪ್ಪ ಪುರಾತನರ ಮನೆಯಂಗಳವ ಕಂಡೆನಾಗಿ
ನಮ್ಮ ಗುಹೇಶ್ವರ ಲಿಂಗದ ಕಂಗಳಿಗೆ ತೃಪ್ತಿಯಾಯಿತ್ತು

ಕಾಣಾ ಸಿದ್ಧರಾಮಯ್ಯ

೩

ಜನಿತವಿಲ್ಲದೆ ಜನಿಸಿ ಸ್ವಯವಾದ ಹರನೇ ನೀನು ನಿರೂಪನೇ
ಜನಿಸಿ ಜನಿತವ ಬಗೆಯರಾಗಿ ಎಮ್ಮ ಪುರಾತನರೇ ನಿರೂಪರು
ಕುಲದಲ್ಲಿ ಹುಟ್ಟಿ ಕುಲವ ಬೆರೆಸರಾಗಿ ಎಮ್ಮ ಪುರಾತನರೇ ಕುಲಜರು
ಆದಿಲಿಂಗ ಅನಾದಿಶರಣ ಹೆಸರಿಲ್ಲದ ದೇಶಿಗೇಡಿ ಲಿಂಗವ
ವಶಕ್ಕೆ ತಂದು ಹೆಸರಿಟ್ಟು ಕರೆದರೆ ನೀನು ಸುಲಭನೇ ಅಲ್ಲ
ನೀನು ಕುಲಗೇಡಿ ನಿನ್ನನಾರು ಬಲ್ಲರು ನೀನಗೋಚರ

ಹರನೇ ನೀ ಬೇಡಿತ್ತ ಕೊಟ್ಟು ನೀ ಬಂದರೆ ನಿನ್ನನಾಗು ಮಾಡಿದರಲ್ಲದೇ
ಎಮ್ಮ ಪುರಾತನರು ನಿಮ್ಮಲ್ಲಿಗೆ ಬಂದು ದೈನ್ಯಬಟ್ಟು-
ಬೇಡಿದರಲ್ಲೈ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

೬

ನಡೆದವರುಂಟೇ ಕೈಲಾಸಕ್ಕೆ ದಾಳಿಯ
ನುಡಿದವರುಂಟೇ ಶಿವಲಾಂಛನಕ್ಕೆ ವೇಳೆಯ
ಕುಡಿದವರುಂಟೇ ಕಾಲಕೂಟವಿಷವನಮೃತವಮಾಡಿ
ಮಡದಿಯ ಜಂಗಮಕ್ಕೆ ಕೊಟ್ಟು ನೋಡಿದವರುಂಟೇ
ಹಡೆದ ಮಕ್ಕಳಕೊಂದು ಜಂಗಮಕ್ಕೆ ಉಣಲಿಕ್ಕಿದವರುಂಟೇ
ನೀವು ಕೊಡುವುದು ಕೌತುಕವಲ್ಲ ಶಂಭುಜಕ್ಕೇಶ್ವರಾ
ಎನ್ನೊಡೆಯನ ಸಾತ್ವಿಕ ಸದ್ಭಕ್ತರ ಮಹಿಮೆಗೆ
ನಾನು ನಮೋ ನಮೋ ಎಂಬೆನು

೭

ಸಮುದ್ರ ಘನವೆಂಬೆನೆ ಧರೆಯ ಮೇಲಡಗಿತ್ತು
ಆ ಧರೆ ಘನವೆಂಬೆನೆ ಅನಂತನ ಫಣಾಮಣಿಯ ಮೇಲಡಗಿತ್ತು
ಅನಂತನು ಘನವೆಂಬೆನೆ ದೇವಿಯ ಅಂಗುಲಿಯ ಮುದ್ರೆಯಾಯಿತ್ತು
ಅಂತಹ ದೇವಿಯರು ಘನವೆಂಬೆನೆ ದೇವರ ಅರ್ಧಾಂಗದಲ್ಲಿ ಅಡಗಿದಳು
ಅಂತಹ ದೇವರ ಘನವೆಂಬೆನೆ ನಮ್ಮ ಪುರಾತನರ
ಅಟ್ಟುಗೆಲಸ ಬಿಟ್ಟಿಗೆಲಸಕ್ಕೆ ನಡೆದನು
ಇದು ಕಾರಣ ಮಹಾಮಹಿಮ ಸೊಡ್ಡಳನ
ಸದ್ಭಕ್ತರಿಂದಧಿಕರಾರೂ ಇಲ್ಲ

೮

ಶಿವಾ ಶಿವಾ ಮಹಾದೇವ ಮಹಾದೇವ
ಮಾಹೇಶ್ವರರ ಮಾಹಾತ್ಮೆಯನು ಏನೆಂದುಪಮಿಸ ಬಹುದಯ್ಯಾ
ವಾಙ್ಮನಕ್ಕತೀತರ ಅದೆಂತೆಂದಡೆ

**ಕೋಟಿ ಕೋಟ್ಯಾಯುಷಾ ಕೋಟಿ ಕೋಟಿಜಿಹ್ವೇನ ಸರ್ವದಾ ।**
**ನೇನಾಪಿ ಶಕ್ಯತೇ ವಕ್ತುಂ ಶಂಭೋರ್ಮಾಹಾತ್ಮ್ಯಮುಸ್ಯಣು ॥**

ಎಂದುದಾಗಿ ಲಿಂಗದ ಮಾಹಾತ್ಮೆಯಣುಮಾತ್ರವರಿಯಬಾರದೆಂಬಲ್ಲಿ
ಸದ್ಭಕ್ತರ ಮಾಹಾತ್ಮೆಯನೆಂತರಿಯಬಹುದಯ್ಯಾ ಅದೆಂತೆಂದಡೆ—

**ಲಿಂಗಾಂಗೀ ತು ಮಮೋಜ್ಜೀವೀ ಲಿಂಗಾಂಗೀ ಮ ಮರಕ್ಷಕಃ ।**
**ಲಿಂಗಾಗೀಚ ಮಮ ಸ್ವಾಮೀ ಲಿಂಗಾಂಗೀತು ಮಮೋದ್ಧರಃ ॥**

ಎಂದುದಾಗಿ ಈ ಪರಿಯಲ್ಲಿ ಲಿಂಗಕ್ಕೆ ದೇಹ
ಲಿಂಗಕ್ಕೆ ಪ್ರಾಣ ಲಿಂಗಕ್ಕೆ ರಕ್ಷಕ ಲಿಂಗಕ್ಕೆ ಒಡೆಯರಾಗಿಪ್ಪ
ಆ ಸದ್ಭಕ್ತರ ಮಾಹಾತ್ಮೆಯನು ಶಿವನೇ ಬಲ್ಲ ಅದೆಂತೆಂದಡೆ—

**ಮದ್ಭಕ್ತ ಜನ ಮಹಾತ್ಮ್ಯಂ ಕೋ ವಿಜಾನಾತಿ ತತ್ವತಃ ।**
**ಜಾನೇऽಹಂ ತ್ವಂತು ಜಾನಾಸಿ ನಂದೀ ಜಾನಾತಿ ವಾಗುಹಃ ॥**

ಹೀಗೆಂದುದಾಗಿ ಶಿವನು ನಂದೀಶ್ವರನು ಗುಹನು ಇವರು ಬಲ್ಲರು
ಸಜ್ಜನ ಶುದ್ಧಶಿವಾಚಾರ ಸಂಪನ್ನರಪ್ಪ ಸದ್ಭಕ್ತರೇ ಬಲ್ಲರು
ಸಾಮಾನ್ಯ ತರವಪ್ಪ ದೇವ ದಾನವ ಮಾನವರಿಗೆ ಅರಿಯಬಾರದು
ಋಷಿ ಜನಂಗಳಿಗೆಯೂ ಅರಿಯಬಾರದು
ಲೋಕ ಲೌಕಿಕರಿಗೆಯೂ ಅರಿಯ ಬಾರದು ಅದೆಂತೆಂದಡೆ ಕೇಳಿರೆ
ಬ್ರಹ್ಮ ವಿಷ್ಣು ಇಂದ್ರ ಚಂದ್ರ ರವಿ ಕಾಲ ಕಾಮ ದಕ್ಷ
ಇಂತಿವರು ಮೊದಲಾದ ದೇವಜಾತಿಗಳು
ತಾರಕ ರಾವಣ ದಾನವರು ವ್ಯಾಸಾದಿ ಋಷಿಗಳು
ದಕ್ಷಾಧ್ವರಕ್ಕೆ ಬಂದವರನೇಕರು
ವೇದ ಶಾಸ್ತ್ರ ಪುರಾಣಾಗಮಾದಿಯಾದ
ಅಷ್ಟಾದಶ ವಿದ್ಯೆಂಗಳನೋದಿ ಕೇಳಿದವರಿಗೆ ಹೇಳಿ
ಸರ್ವಜ್ಞರೆನಿಸಿಕೊಂಡು ಮಹದೈಶ್ವರ್ಯ ಸಂಪನ್ನರಾಗಿ
ಮದಂಗಳು ಹೆಚ್ಚಿ ಶಿವನಮರೆದರು ಅಹಂ ಬ್ರಹ್ಮವೆಂದರು
ಪರಧನ ಪರಸ್ತ್ರೀಯರುಗಳಿಗೆ ಅಳುಪಿದರು
ಶಿವ ಮಾಹೇಶ್ವರರ ನಿಂದೆಯ ಮಾಡಿದರು
ಈ ಪರಿಯಲ್ಲಿ ತಪ್ಪಿನಡೆದು ತಪ್ಪಿನುಡಿದು
ಹಸ್ತಚ್ಛೇದನ ಶಿರಚ್ಛೇದನಂಗಳ ಮಾಡಿಸಿಕೊಂಡು ಹೋದರು
ಕೋಪಾಗ್ನಿಯಿಂದುರಿದು ಹೋದರು

ಅನೇಕ ಪರಿಯಲ್ಲಿ ಭಂಗಿತರಾದರು
ಕಷ್ಟ ಜನ್ಮಂಗಳಲ್ಲಿ ಜನಿಸಿದರು
ಮರಳಿ ಮತ್ತೆ ಅರಿದು ಶಿವಾರಾಧನೆಯಂ ಮಾಡಿ
ಶಿವಸ್ತೋತ್ರಮಂ ಮಾಡಿ ಮಾಹೇಶ್ವರರ ಪೂಜಿಸಿ
ಮರಳಿ ನಿಜಪದಂಗಳಂ ಪಡೆದರು
ಈ ಪರಿಯ ಅರಿವು ಮರವೆಯುಳ್ಳ ದ್ವಂದ್ವಗ್ರುಸ್ತರು
ಬಲ್ಲರೇ ಎಮ್ಮ ಮಾಹೇಶ್ವರರ ಮಹಿಮೆಯ
ನಮ್ಮ ಸದ್ಭಕ್ತರೇ ಬಲ್ಲರು ಅದೆಂತೆನಲು ಕೇಳಿರೇ
ವೇದಾದಿ ಅಷ್ಟಾದಶ ವಿದ್ಯಾಪರಿಚಿತರು
ತಾತ್ಪರ್ಯ ಕಳಾಗ್ರಾಹಿಗಳು ವಿಶ್ವಾಧಿಕರು
ಅಂತಾಗಿ ಎಮ್ಮ ಮಹೇಶ್ವರರೇ ಬಲ್ಲರು
ಉಳಿದಾದ ದೇವ ದಾನವ ಮಾನವ ಋಷಿಗಳಿಗೆಯೂ
ಅರಿಯ ಬಾರದು
ಅಂತವರಿಗಾ ವಿಧಿ ಇನ್ನೂ ಮನುಷ್ಯರು ಅಲ್ಪಾಯುಷ್ಯರು
ವೇದಶಾಸ್ತ್ರ ಪುರಾಣಾಗಮಂಗಳು
ಅಲ್ಪಾಯುಷ್ಯರಿಗೆ ಓದಲಿಕ್ಕೆ ತೆರಹಿಲ್ಲ
ಕಿಂಚಿತ್ತೋದಿದಡೆಯೂ ಕೇಳುವರೆ ವೇಳೆಯಿಲ್ಲ
ಇಂತಹ ಅಜ್ಞಾನಿಗಳಿಗೆ ಮಹಾಜ್ಞಾನಿಗಳ ಸಂಗವಿಲ್ಲ
ಜ್ಞಾನ ಮುನ್ನವೇ ಇಲ್ಲ
ಅಹಂಕಾರಿಗಳು ಮದಾಂಧರು ಶಾಪಹತರು ಜಡನೇಹಿಗಳು
ಅವರಿಗೆಂತರಿಯ ಬಹುದಯ್ಯಾ
ಶಿವ ಮಾಹೇಶ್ವರರ ಮಹಿಮೆಯನರಿಯದ
ದ್ರೋಹಿಗಳ ಕೂಡೆ ಸಂವಾದಿಸಲುಂಟೇ
ಅವರುಗಳ ಮನವರಿದು ಅರಿವಿನ ಹವಣಿಕೆ ಇದೆಂದರಿದು
ಅವಾಚಕನಾಗಿಪ್ಪುದಲ್ಲದೇ
ಆ ಪಾಪಿಗಳ ನೋಡಲಾಗದು
ನುಡಿಸಲಾಗದು ಸಮಾನದಲ್ಲಿ ಕುಳ್ಳಿರ್ದು ತರ್ಕಿಸಲಾಗದು

ಶಿವಜ್ಞಾನಿಗಳಲ್ಲದವರ ಕೂಡೆ ನುಡಿಯ ತೆರಹುಂಟೇ
ಶಿವ ಮಾಹೇಶ್ವರನು ಲಿಂಗಾರ್ಚನೆಯಂ ಮಾಡಿ
ಮಹಾನುಭಾವರ ಸಂಗಸುಖದಲ್ಲಿಪ್ಪನಲ್ಲದೆ ಕೇಳಿರಣ್ಣಾ
ಆ ದೇವ ದಾನವ ಮಾನವರ ಪರಿಯೆಂತಲ್ಲ
ಎಮ್ಮ ಮಾಹೇಶ್ವರರು ಸರ್ವಾಚಾರ ಸಂಪನ್ನರು
ಸರ್ವ ವಿದ್ಯಾಪರಿಣಿತರು ಪರಧನ ಪರಸ್ತ್ರೀಯರನೊಲ್ಲರು
ಸತ್ಯ ನಿತ್ಯರು ನಿರುಪಾಧಿಕರು ನಿರಾಶಾಸಂಪನ್ನರು
ಪರಮ ಪರಿಣಾಮಿಗಳು ಎಮ್ಮ ಮಾಹೇಶ್ವರರು
ಅವರ ಸಂಗದಿಂದ ಗುರುಸಿದ್ಧಿ ಲಿಂಗಸಿದ್ಧಿ ಜಂಗಮಸಿದ್ಧಿ
ಪ್ರಸಾದಸಿದ್ಧಿ ಇಹಸಿದ್ಧಿ ಪರಸಿದ್ಧಿ ಸರ್ವಸಿದ್ಧಿ
ಇಂತಹ ಸದ್ಭಕ್ತರ ಮಹಿಮೆಗೆ ನಾನು ನಮೋ ನಮಃ ಎಂದು
ಬದುಕಿದೆನಯ್ಯಾ ಊರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

### ನಿರಂಗ ಲಿಂಗಸ್ಥಲ ಮುಗಿದುದು

ಇಂತೀ ಪ್ರಕಾರದಿಂ ಬ್ರಹ್ಮವಿಷ್ಣ್ವಾದಿ ದೇವ ದಾನವ ಮಾನವರು ಮೊದಲಾದ ಸಮಸ್ತ ದೇಹಿಗಳೊಳಗ ಪರಮ ಶಿವಭಕ್ತರುಗಳೇ ಘನ ಮಹಿಮೆಯುಳ್ಳವರೆಂಬುದಂ ಪ್ರತಿಷ್ಠೆಯಂ ಮಾಡಿ ನುಡಿದರ್ಮಹಾ ಪುರಾತನರು.

ಇಂತಹ ಘನಮಹಿಮೆಯುಳ್ಳ ಸದ್ಭಕ್ತರುಗಳು ಮರ್ತ್ಯದೊಳಗೆ ಜಡಮಾನವರಂತೆ ತಾಮಸ ಜೀವಿಗಳಂತೆ ಭವ ಭಾರಿಗಳಂತೆ ಸುಮ್ಮನೆ ಇರಬಾರದೆಂದು ಅನುಭಾವಾದಿ ಸದ್ಭಕ್ತಮಹಿಮಾಂತಮಾದ ನೂರೊಂದು ಸ್ಥಲವಿಡಿದು ಆಚರಿಸಿ ಶಿವನೊಳಗೆ ಸಮರಸೈಕ್ಯವನೈದಿದರು ಇಂತು.

| | | ಶ್ಲೋಕ | ವಚನ | ಕೂಡಿ |
|---|---|---|---|---|
| ೪೪ | ಅಂಗಸ್ಥಲಗಳು | ೨೩೪ | ೨೨೫ | ೨೫೯ |
| ೪೫ | ಲಿಂಗಸ್ಥಲಗಳು | ೧೯೫ | ೧೯೩ | ೩೮೮ |
| ೧೨ | ನಿರಂಗ ಲಿಂಗಸ್ಥಲಗಳು | ೫೧ | ೬೭ | ೧೧೮ |
| ೧೦೧ | | ೪೮೦ | ೪೮೫ | ೭೬೫ |

★ ಇಂತು “ **ಗಣಭಾಷಿತ ರತ್ನಮಾಲೆ** ” ಮುಗಿದುದು. ★